ನೆಮ್ಮದಿಯ ನಾಳೆ ನಮ್ಮದು

# ಹೊಸತು

ISSN 2319-7307

ಅಕ್ಟೋಬರ್ ೨೦೧೩

ಬೆಲೆ : ರೂ. ೧೫






# ನಮ್ಮ ಇತ್ತೀಚಿನ ಪ್ರಕಟಣೆಗಳು




₹ 80




₹ 175




₹ 110




₹ 150




₹ 60




₹ 75




₹ 65




₹ 60




₹ 125

ಮೂರು ವರ್ಷಗಳ 'ಹೊಸತು' ಚಂದಾದಾರರಿಗೆ
ಪುಸ್ತಕಗಳ ಮುಖಬೆಲೆಯ ಮೇಲೆ 20% ರಿಯಾಯಿತಿ.
ಇತರರಿಗೆ 10% ರಿಯಾಯಿತಿ. ಪುಸ್ತಕಗಳ ನಿವ್ವಳ ಬೆಲೆಗೆ
ಅಂಚೆ/ಕೊರಿಯರ್ ವೆಚ್ಚ ರೂ. 30 ಸೇರಿಸಿ
M.O. ಅಥವಾ D.D. ಕಳುಹಿಸಿ:

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**

11, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ಸಂಖ್ಯೆ 5159, ಕುಮಾರ ಪಾರ್ಕ್ ಪೂರ್ವ
ಬೆಂಗಳೂರು – 560 001, ಫೋನ್ : 30578022, 22203580 ಫ್ಯಾಕ್ಸ್ : 30578023
e-mail : navakarnataka@gmail.com URL : www.navakarnataka.com




₹ 50

ಶಾಖೆಗಳು : ಬೆಂಗಳೂರು ✆ 22251382 :: ಮಂಗಳೂರು ✆ 2441016 ✆ 2425161 :: ಮೈಸೂರು ✆ 2424094 :: ಗುಲ್ಬರ್ಗಾ ✆ 224302

# ಹೊಸತು

ನೆಮ್ಮದಿಯ ನಾಳೆ ನಮ್ಮದು







**ಚಿತ್ರಗಳು** : ವಿ. ಗೋಪಾಲ್, ಕಮಲಂ ಅರಸು, ರವಿ ಹೆಗ್ಗಡಿ, ತನು, ಪ್ರತೀಕ್ ಸಿನ್ಹಾ, ಶ್ರೀಹರಿ, ವಿ. ಆರ್. ಸಿ. ಶೇಖರ್, ಗೋಪಿ, ಜಿಎಂಬೊ

**ಮುಖಪುಟ** : ವನ್ಯ ಜೀವಿ ಸಪ್ತಾಹ

**ವರ್ಣಚಿತ್ರ** : ಜಿ. ಎಸ್. ಶ್ರೀನಾಥ

**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು

ಇತ್ತೀಚೆಗೆ ಡಾಲರಿನ ವಿನಿಮಯ ಬೆಲೆ ಎಪ್ಪತ್ತು ರೂಪಾಯಿ ಮುಟ್ಟಿತ್ತು. ಪರಿಹಾರಗಳನ್ನು ಸೂಚಿಸಿದವರು ಹಲವರು. ಎಲ್ಲಾ ಅಮೆರಿಕಾ ಪರವಾದ ಸೂಚನೆಗಳೇ ಆಗಿ, ರೂಪಾಯಿಯ ಮೌಲ್ಯ ಉತ್ತಮವಾಗಲು ಕ್ರಮಗಳನ್ನೇನೂ ಹೇಳಲಿಲ್ಲ. ಯೋಜನಾ ಆಯೋಗದ ಅಧ್ಯಕ್ಷ ಅಹ್ಲುವಾಲಿಯ ಪೂರ್ತಿ ಅಮೆರಿಕಾ ಭಂಟ, ಆದರೆ ಆಯೋಗದ ಒಬ್ಬ ಸದಸ್ಯ ಶ್ರೀ. ಅರುಣ್ ಮೈರಾ ಪ್ರಾಯೋಗಿಕವಾಗಿ ಭಾರತದ ಜನರ ಪರವಾದ ಸಲಹೆಯೊಂದನ್ನಿತ್ತರು. ಅದು 'ದಿ ಹಿಂದು' ಪತ್ರಿಕೆಯಲ್ಲಿ ಪ್ರಕಟವಾಗಿದ್ದಿತು. ಆ ನಿಲುವನ್ನು 'ಹೊಸತು' ಆರಂಭದಿಂದಲೂ ಮುಂದಿಡುತ್ತಾ ಬಂದಿದೆ. ಮೈರಾ ಅವರ ಮನನೀಯ ಹೇಳಿಕೆ ಇದು :

ಇಂದು ಭಾರತದ ಉದ್ಯಮ ಕ್ಷೇತ್ರವು ಅತ್ಯಂತ ಹೀನಾಯ ಸ್ಥಿತಿ ತಲುಪಿರುವುದಲ್ಲದೆ, ಅದರಿಂದಾಗಿ ಇಡೀ ಆರ್ಥಿಕತೆಯ ಮೇಲೆ ಹಲವಾರು ದುಷ್ಪರಿಣಾಮಗಳು ಸಂಭವಿಸಿವೆ. ಎರಡು ದಶಕಗಳ ಹಿಂದೆ, ಅಂದರೆ ೧೯೯೦ರಲ್ಲಿ "ಮಹತ್ವಪೂರ್ಣ" ಎಂದು ಹೇಳಲಾಗುವ ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತಂದದ್ದು ಎಲ್ಲರಿಗೂ ತಿಳಿದ ವಿಷಯವೇ. ಆ ಮೂಲಕ ಕೈಗಾರಿಕಾ ಕ್ಷೇತ್ರದ ಮೇಲಿದ್ದ ನಿಯಂತ್ರಣಗಳನ್ನು ತೆಗೆದುಹಾಕಲಾಯಿತು. ಆಮದು ಮೇಲಿನ ತೆರಿಗೆಯನ್ನು ಸಾಕಷ್ಟು ಪ್ರಮಾಣದಲ್ಲಿ ಸಡಿಲಗೊಳಿಸಲಾಯಿತು. ಪರಿಣಾಮ ನಮ್ಮ ಗ್ರಾಹಕರಿಗೆ, ಬಳಕೆದಾರರಿಗೆ ಸುಗ್ಗಿಯ ಕಾಲ ಉದಯಿಸಿದಂತಾಗಿಬಿಟ್ಟಿದೆ. ಅವರಿಗೀಗ ಬಗೆಬಗೆಯ (ಅವುಗಳಲ್ಲಿ ಆಮದುವಾದುವೇ ಹೆಚ್ಚು) ಉತ್ಪಾದಿತ ವಸ್ತುಗಳು ಲಭ್ಯವಿವೆ. ವಿರೋಧಾಭಾಸವೆಂದರೆ ನಮ್ಮ ರಾಷ್ಟ್ರದ ಕೈಗಾರಿಕಾ ಕ್ಷೇತ್ರ ಸಮಗ್ರ ದೇಶೀಯ ಉತ್ಪಾದನೆಯ ಶೇಕಡ ೧೬ರ ಮಟ್ಟದಲ್ಲೇ ಉಳಿದು ಕಾಲಕ್ರಮೇಣ ಸೊರಗಿಹೋಗುತ್ತಿದೆ. ಅದೇ ವೇಳೆ ಚೀಣಾ ಸಾಧಿಸಿರುವ ಉತ್ಪಾದನೆಯ ದರ ಶೇಕಡ ೩೫ರ ಮಟ್ಟಕ್ಕೇರಿದೆ. ದೇಶೀಯವಾಗಿ ಉತ್ಪಾದಿಸಲಾಗಿದೆ ಎಂದು ಹೇಳಲಾಗುವ ನಮ್ಮ ಬಹುತೇಕ ಉತ್ಪನ್ನಗಳು ಬಿಡಿಭಾಗಗಳನ್ನು ಆಮದು ಮಾಡಿಕೊಂಡು ಅವನ್ನು ಸಂಯೋಜಿಸಿರುವ, ಒಟ್ಟುಗೂಡಿಸಿ ನೀಡಿರುವ ಕಟ್ಟಕಡೆಯ ಹಂತದ ಸರಕುಗಳಷ್ಟೆ. ಅತಿ ಕಡಿಮೆ ದರದ ತೆರಿಗೆ ನೀಡಿ ಅಥವಾ ಯಾವುದೇ ತೆರಿಗೆ ನೀಡದೆಯೇ ಆಮದು ಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಟ್ಟಿರುವ ಸರ್ಕಾರದ ಈ ನೀತಿಯು ತಾವು ಬಹುದೊಡ್ಡ ಉದ್ಯಮಿಗಳು, ವ್ಯಾಪಾರಿಗಳು ಎಂದು ಸೋಗುಹಾಕುವ ಒಂದು ಹೊಸ ವರ್ಗವನ್ನೇ ಸೃಷ್ಟಿಸಿದೆ. ಈ ತಥಾಕಥಿತ ಉದ್ಯಮಿಗಳು ಜಾಗತಿಕ ಮಟ್ಟದಲ್ಲಿ ಇತರ ರಾಷ್ಟ್ರಗಳ ಉದ್ಯಮಿಗಳ ಜೊತೆಜೊತೆಗೆ ಪೈಪೋಟಿಗೆ ನಿಂತು ಭಾರತದ ಹಿರಿಮೆಯನ್ನು, ಸಾಮರ್ಥ್ಯವನ್ನು ಮೆರೆದ, ರಾಷ್ಟ್ರದ ಅಭಿವೃದ್ಧಿಯ ಬಗ್ಗೆ ನೈಜ ಕಾಳಜಿ ಹೊಂದಿದ್ದ, ಜಮ್‌ಸೆಟ್‌ಜಿ ಟಾಟಾ ಮತ್ತು ಜೆ. ಆರ್. ಡಿ. ಟಾಟಾ ಅವರಂಥವರಲ್ಲ.

ಪರಿಸ್ಥಿತಿಯ ಗಂಭೀರತೆಯನ್ನು ಮನಗಂಡು ಕಡೆಗೂ ಕೇಂದ್ರ ಸರ್ಕಾರವು ೨೦೧೧ರಲ್ಲಿ ನಿರ್ದಿಷ್ಟ ಉತ್ಪಾದನಾ ನೀತಿಯೊಂದನ್ನು ಘೋಷಿಸಿದ ನಂತರ ಉದ್ದಿಮೆ ಕ್ಷೇತ್ರವನ್ನೂ ಒಳಗೊಂಡಂತೆ ರಾಷ್ಟ್ರದ ಅಭಿವೃದ್ಧಿಯ ದೃಷ್ಟಿಯಲ್ಲಿ ಒಂದು ವ್ಯವಸ್ಥಿತ, ಹೊಸ ಉತ್ಪಾದನಾ ಯೋಜನೆಯನ್ನು ರೂಪಿಸಿತು. ಈಗ ಈ ಯೋಜನೆಯನ್ನು ತ್ವರಿತ ಗತಿಯಲ್ಲಿ ಜಾರಿಗೆ ತರುವ ದಿಶೆಯಲ್ಲಿ ನಮ್ಮೆಲ್ಲ ಶಕ್ತಿಯನ್ನು ವಿನಿಯೋಗಿಸಬೇಕಿದೆ.

ಸ್ವನಿಯಂತ್ರಣವುಳ್ಳ 'ರಾಷ್ಟ್ರೀಯ ಉತ್ಪಾದನಾ ಬಂಡವಾಳ ಹೂಡಿಕೆ ವಲಯ'ಗಳನ್ನು ದೇಶದ ಕೆಲವು ನಿರ್ದಿಷ್ಟ ಪ್ರದೇಶಗಳಲ್ಲಿ ಸ್ಥಾಪಿಸುವ ಯೋಜನೆಯೊಂದನ್ನು ಸರ್ಕಾರ ನಿರೂಪಿಸಿದೆ, ನಿಜ. ಆದರೆ ಸಾಮಾನ್ಯವಾಗಿ ಇಂತಹ ಯೋಜನೆಗಳಿಗೆ ಅಗತ್ಯವಿರುವ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳುವ ಪ್ರಕ್ರಿಯೆಗೆ ಬಹಳ ವರ್ಷಗಳೇ ಬೇಕು ಎಂಬುದು ಸರ್ಕಾರಗಳ, ಉದ್ಯಮಿಗಳ ಅನುಭವಕ್ಕೆ ಬಂದಿರುವ ಸಂಗತಿ. ಈ ಹಿನ್ನೆಲೆಯಲ್ಲಿ ಅಂತಹ ಕೈಗಾರಿಕಾ ವಲಯಗಳನ್ನು ಶೀಘ್ರ ಕಾಲದಲ್ಲಿ ಕಾರ್ಯರೂಪಕ್ಕೆ ತರುವುದು ದೂರದ ಮಾತೆಂದೇ ಹೇಳಬೇಕು. ಭಾರತದ ಜನಸಂಖ್ಯೆ ಹೆಚ್ಚುತ್ತಿರುವ ಗತಿಯನ್ನು ಗಮನದಲ್ಲಿಟ್ಟು ನೋಡಿದರೆ, ಒಂದು ಅಂದಾಜಿನಂತೆ ಮುಂದಿನ ಕೆಲವೇ ವರ್ಷಗಳಲ್ಲಿ ನೌಕರಿಗಾಗಿ

(೬ನೇ ಪುಟಕ್ಕೆ)



ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೫ ಸಂಚಿಕೆ-೩ ಅಕ್ಟೋಬರ್ ೨೦೧೩







**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




# ಸಂಪಾದಕೀಯ

## ಪ್ರತಿಕ್ರಿಯೆಯೊಂದಿಗೆ ಪರ್ಯಾಯ

ನಮ್ಮದು ಸಂಸದೀಯ ಪ್ರಜಾಸತ್ತೆ. ನಮ್ಮ ಸಂವಿಧಾನದ ಪ್ರಕಾರ ಈ ದೇಶದ ಜನತೆ ಈ ದೇಶದ ಸಂಸತ್ತಿಗೆ ಸಂಸತ್ ಸದಸ್ಯರನ್ನು ಆಯ್ಕೆ ಮಾಡುತ್ತಾರೆ. ಹೀಗೆ ನೇರವಾಗಿ ಜನರಿಂದ ಆಯ್ಕೆಯಾದ ಸಂಸತ್ ಸದಸ್ಯರು ದೇಶದ ಪ್ರಧಾನ ಮಂತ್ರಿಯನ್ನು ಹಾಗೂ ಮಂತ್ರಿಮಂಡಲವನ್ನು ಆಯ್ಕೆ ಮಾಡುತ್ತಾರೆ. ಇದು ನಾವು ಒಪ್ಪಿಕೊಂಡಿರುವ ಸಂಸದೀಯ ಪ್ರಜಾಸತ್ತೆಯಲ್ಲಿ ಪ್ರಧಾನಿ ಆಯ್ಕೆ ವಿಧಾನ. ಸಾಮಾನ್ಯವಾಗಿ ಸಂಸತ್ತಿಗೆ ನಡೆವ ಸಾರ್ವತ್ರಿಕ ಚುನಾವಣೆಯಲ್ಲಿ ವಿವಿಧ ಪಕ್ಷಗಳು ತಮ್ಮ ಪ್ರಣಾಳಿಕೆಯನ್ನು ಜನರ ಮುಂದಿಡುತ್ತವೆ. ಆಯಾ ಪಕ್ಷಗಳ ನೀತಿ, ಧೋರಣೆ, ಕಾರ್ಯಕ್ರಮವನ್ನು ಪರಿಗಣಿಸಿ ಆಯಾ ಪಕ್ಷದ ಪ್ರತಿನಿಧಿಗಳನ್ನು ಸಂಸತ್‌ಗೆ ಆಯ್ಕೆ ಮಾಡುವ ಈ ವಿಧಾನದಲ್ಲಿ ಜನತೆ ಪ್ರಧಾನಿಗಾಗಿ ಮತ ಚಲಾವಣೆ ಮಾಡುವುದಿಲ್ಲ. ಅಧ್ಯಕ್ಷೀಯ ಮಾದರಿಯಲ್ಲಿ ಕೆಳಹಂತದಿಂದ ಮೇಲಿನ ಹಂತದವರೆಗೆ ಅಧ್ಯಕ್ಷೀಯ ಅಭ್ಯರ್ಥಿಗಳನ್ನು ಮುಂದಿಟ್ಟುಕೊಂಡು ಚುನಾವಣೆ ನಡೆಸಲಾಗುತ್ತದೆ. ಅದಕ್ಕಾಗಿಯೇ ಹಲವು ವಿಧಾನ ಮತ್ತು ಮಾನದಂಡಗಳಿವೆ. ನಮ್ಮ ದೇಶದ ಸಂವಿಧಾನ ಸಮಿತಿಯ ಮುಂದೆ ಇಂಥ ಒಂದು ಮಾದರಿ ಚರ್ಚೆಗೆ ಒಳಪಟ್ಟಿತ್ತಾದರೂ ಬಹುಭಾಷೆ, ಬಹುಮುಖಿ ಸಂಸ್ಕೃತಿಯನ್ನು ಹೊಂದಿದ ನಮ್ಮ ದೇಶಕ್ಕೆ ಈ ಅಧ್ಯಕ್ಷೀಯ ಮಾದರಿ ಸೂಕ್ತವಲ್ಲ ಎಂಬ ಕಾರಣಕ್ಕಾಗಿಯೇ ಸಂಸದೀಯ ಪ್ರಜಾಸತ್ತೆಯ ಪ್ರಸ್ತುತ ಮಾದರಿಯನ್ನು ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಮಾದರಿಯಲ್ಲಿ ನೇರವಾಗಿ ಜನರಿಂದ ಆಯ್ಕೆಯಾದ ಪ್ರತಿಯೊಬ್ಬ ಸದಸ್ಯನೂ ಪ್ರಧಾನಿ ಅಭ್ಯರ್ಥಿಯಾಗುವ ಅಥವಾ ಪ್ರಧಾನಿಯನ್ನು ಆಯ್ಕೆ ಮಾಡುವ ಮತ್ತು ಮಂತ್ರಿಯಾಗುವ ಅಥವಾ ಮಂತ್ರಿಮಂಡಲವನ್ನು ಆಯ್ಕೆ ಮಾಡುವ ಅರ್ಹತೆ ಮತ್ತು ಹಕ್ಕನ್ನು ಹೊಂದಿರುತ್ತಾನೆ. ಇಂದು ನಮ್ಮ ದೇಶದಲ್ಲಿ ನಡೆಯುತ್ತಿರುವ ವಿದ್ಯಮಾನಗಳು ಸಂಸತ್ ಸದಸ್ಯರ ಹಕ್ಕುಗಳನ್ನೇ ಮೊಟಕು ಮಾಡುವ ನಿಟ್ಟಿನಲ್ಲಿ ಜರಗುತ್ತಿವೆ. ಚುನಾವಣೆಗೂ ಮುಂಚೆಯೇ ಪ್ರಧಾನಿ ಅಭ್ಯರ್ಥಿಯನ್ನು ಘೋಷಿಸುವುದು ನಮ್ಮ ಸಂವಿಧಾನದ ಆಶಯಕ್ಕೆ ಪೂರಕವಾದುದಲ್ಲ.

ಚುನಾವಣೆಗೂ ಮುಂಚೆ ಪ್ರಧಾನಿ ಅಭ್ಯರ್ಥಿಯನ್ನು ಘೋಷಣೆ ಮಾಡುವದು ಇನ್ನೊಂದು ರೀತಿಯಲ್ಲಿ ಪ್ರಜಾಸತ್ತೆಯ ಕುಸಿತವನ್ನು ತೋರಿಸುತ್ತದೆ. ಇಲ್ಲಿ ಒಂದು ಪಕ್ಷ ಅಥವಾ ಪಕ್ಷದ ಪ್ರಣಾಳಿಕೆ ಪ್ರಮುಖವಾಗುವುದಿಲ್ಲ. ಆ ಪಕ್ಷದ ಒಬ್ಬ ವ್ಯಕ್ತಿ ಪ್ರಮುಖನಾಗುತ್ತಾನೆ. ಒಂದು ಪಕ್ಷವೆಂದರೆ ನಿರ್ದಿಷ್ಟ ಪಕ್ಷವೊಂದರ ಕಾರ್ಯಕ್ರಮ, ಪ್ರಣಾಳಿಕೆ, ನೀತಿಗಳನ್ನು ಒಳಗೊಂಡು ಕೆಳಹಂತದ ಆ ಪಕ್ಷದ ಸ್ಥಳೀಯ ಕಾರ್ಯಕರ್ತನ ವರ್ತನೆಯವರೆಗೆ ಎಲ್ಲವೂ ಮತದಾರನ ಪರಿಗಣನೆಗೆ ಒಳಪಡುತ್ತದೆ. ಇದನ್ನು ನಿರಾಕರಿಸುವುದು ಪ್ರಜಾಸತ್ತಾತ್ಮಕ ಮೌಲ್ಯವಲ್ಲ. ಇಷ್ಟಕ್ಕೂ ಇಂದು ನಮ್ಮ ದೇಶದಲ್ಲಿ ಪ್ರಧಾನಿ ಅಭ್ಯರ್ಥಿಯ ಹೆಸರನ್ನು ಘೋಷಿಸುವುದು ಘೋಷಣೆಯಾದ ಪಕ್ಷದ ನೊಂದಾಯಿತ ಸದಸ್ಯರ ಅಭಿಪ್ರಾಯವನ್ನೂ ಪಡೆಯದೆ ದೆಹಲಿಯಲ್ಲಿ ಕುಳಿತ ಒಂದು ಹಿತಾಸಕ್ತ ಗುಂಪು ಈ ಘೋಷಣೆಯನ್ನು ಮಾಡುತ್ತದೆ. ಆ ಹಿತಾಸಕ್ತ ಗುಂಪಿನಲ್ಲಿಯೂ ಒಮ್ಮತವಿಲ್ಲ ಎನ್ನುವುದು ಗಮನಾರ್ಹ ಅಂಶ. ಇದು ಮುಂದಿನ ದಿನಗಳಲ್ಲಿ ನಮ್ಮ ದೇಶದ ರಾಜಕೀಯ ನಡೆಯನ್ನು ನಮ್ಮ ಸಂವಿಧಾನದ ಪರಿಧಿಯ ಆಚೆ ಕೊಂಡೊಯ್ಯುವ ಅಪಾಯದ ಸೂಚನೆ.

ಬಿ. ಜೆ. ಪಿ. ನಮ್ಮ ಸಂವಿಧಾನವನ್ನು ಒಪ್ಪಿಲ್ಲ ಎನ್ನುವುದು ಆರಂಭದಿಂದಲೂ ಆರ್. ಎಸ್. ಎಸ್. ನ ನಿಲುವುಗಳಿಂದ ಸ್ಪಷ್ಟವಾಗಿದೆ. ಬಿ. ಜೆ. ಪಿ. ಯ ಮಾತೃ ಸಂಸ್ಥೆಯಾದ ಆರ್. ಎಸ್. ಎಸ್. ನಮ್ಮ ಸಂವಿಧಾನದ ಯಾವ ಅಂಶಗಳನ್ನೂ ಮಾನ್ಯ ಮಾಡುವುದಿಲ್ಲ. ಆದರೆ ನಮ್ಮ ಸಂವಿಧಾನಕ್ಕೆ ಎದುರು ನಿಲ್ಲುವ ಶಕ್ತಿಯನ್ನು ನಮ್ಮ ದೇಶದ ಜನತೆ ರಾಷ್ಟ್ರೀಯ ಸ್ವಯಂಸೇವಕ ಸಂಘಕ್ಕೆ ಕೊಟ್ಟಿಲ್ಲ ಎಂಬ ಕಾರಣಕ್ಕಾಗಿ ಬಿ. ಜೆ. ಪಿ. ಯ ಹೆಸರಿನಲ್ಲಿ ಅವರು ಬಲಪಡೆಯುವ ಪ್ರಯತ್ನ ಮಾಡುತ್ತಿದ್ದಾರೆ. ವಾಸ್ತವವಾಗಿ ಗಾಂಧಿಯನ್ನು ಕೊಂದ ನಂತರ ಈ ಆರ್. ಎಸ್. ಎಸ್. ಮತ್ತು ಬಿ. ಜೆ. ಪಿ. ರಚನೆಗೂ ಮುಂಚಿನ ಜನಸಂಘ ತಮ್ಮ ಅಸ್ಮಿತೆಯನ್ನೇ ಕಳೆದುಕೊಂಡು ಅಸ್ಪೃಶ್ಯತೆಯಿಂದ ಬದುಕಿದ್ದವು. ತುರ್ತು ಪರಿಸ್ಥಿತಿಯ ನಂತರ ಜನತಾ ಪಕ್ಷದ ಭಾಗವಾಗುವುದರ ಮೂಲಕ ರಾಜಕೀಯ ಮರುಜನ್ಮ ಪಡೆದವು. ನಂತರವೂ ಬಿ. ಜೆ. ಪಿ. ಚುನಾವಣೆಯಲ್ಲಿ ಮತ ಪಡೆಯಲು ನಮ್ಮ ಸಂವಿಧಾನವನ್ನು ಒಪ್ಪಿದಂತೆ ನಟಿಸುತ್ತಿದೆಯೇ ಹೊರತು ಅದರ ಮೂಲ ಧೋರಣೆಗಳ ಪ್ರಕಾರ ಇಂದಿಗೂ ನಮ್ಮ ಸಂವಿಧಾನದ ತತ್ವಗಳನ್ನು ಒಪ್ಪಿಲ್ಲ. ಇಂಥ ಸಂದರ್ಭದಲ್ಲಿ ದೇಶದ, ಸಂವಿಧಾನದ ಪ್ರಧಾನ ಆಶಯವಾದ ಜಾತ್ಯತೀತ (ಸೆಕ್ಯೂಲರ್) ನೀತಿಗೆ ವಿರುದ್ಧವಾದ ವ್ಯಕ್ತಿಯನ್ನೇ ತನ್ನ ಪ್ರಧಾನಿ ಎಂದು ಘೋಷಿಸುವುದು ಅಚ್ಚರಿಯ ವಿಷಯವೇನಲ್ಲ.

ಕಾಂಗ್ರೆಸ್ ಪಕ್ಷ ಸಹ ಪಕ್ಷ ಪ್ರಾಧಾನ್ಯತೆಯಿಂದ ರಾಜಕಾರಣ ಮಾಡುತ್ತಿಲ್ಲ. ಅಲ್ಲಿಯೂ ಪರೋಕ್ಷವಾಗಿ ರಾಹುಲ ಗಾಂಧಿಯನ್ನು ಪ್ರಧಾನಿ ಅಭ್ಯರ್ಥಿಯನ್ನಾಗಿ ಬಿಂಬಿಸಲಾಗುತ್ತಿದೆ. ಈ ಕುಟುಂಬ ನಿಷ್ಠೆಯ ಪಕ್ಷದಲ್ಲಿ ರಾಹುಲ ಗಾಂಧಿಗಿಂತ ಅನುಭವದಲ್ಲಿ, ಜ್ಞಾನದಲ್ಲಿ, ಹಿರಿತನದಲ್ಲಿ ಹಲವಾರು ಜನರಿದ್ದರೂ ಅವರನ್ನೆಲ್ಲ ಮೀರಿ ರಾಹುಲ ಗಾಂಧಿ ಮೇಲಕ್ಕೇರುತ್ತಿರುವುದು ಪ್ರಜಾಸತ್ತಾತ್ಮಕ ಮೌಲ್ಯಗಳಿಂದೇನಲ್ಲ. ಪ್ರಧಾನಿ ಮನಮೋಹನ ಸಿಂಗ್ ಅವರೇ ರಾಹುಲ ಗಾಂಧಿ ಪ್ರಧಾನಿಯಾದರೆ ಅವರ ಕೆಳಗೆ ಕೆಲಸ ಮಾಡಲು ಹೆಮ್ಮೆಪಡುತ್ತೇನೆ ಎಂದು ಹೇಳಿದ್ದಾರೆ. ಇದು ರಾಹುಲ ಗಾಂಧಿ ಪ್ರಧಾನಿ ಅಭ್ಯರ್ಥಿಯೆಂಬುದನ್ನೂ ಮತ್ತು ಆ ಪಕ್ಷದ ಎಲ್ಲ ನಾಯಕರು ತಲುಪಿರುವ ಹಂತವನ್ನು ಏಕ ಕಾಲಕ್ಕೆ ತೋರಿಸುತ್ತದೆ. ಒಟ್ಟಿನಲ್ಲಿ ಈ ದೇಶದ ಎರಡು ಪ್ರಬಲ ರಾಜಕೀಯ ಕೂಟ (ಯು. ಪಿ. ಎ. ಮತ್ತು ಎನ್. ಡಿ. ಎ.)ಗಳ ನಾಯಕತ್ವ ವಹಿಸಿರುವ ಕಾಂಗ್ರೆಸ್ ಮತ್ತು ಬಿ. ಜೆ. ಪಿ. ಗಳು ಬರುವ ಚುನಾವಣೆಯಲ್ಲಿ ಜನರ ಮುಂದಿಡಲು ವ್ಯಕ್ತಿಗಳ

ಹೊರತಾಗಿ ತಮ್ಮ ಪಕ್ಷಗಳಲ್ಲೇನೂ ಉಳಿದಿಲ್ಲ ಎಂಬುದನ್ನು ಸಾಬೀತು ಪಡಿಸಿವೆ.

ಮೋದಿ ಪ್ರಧಾನಿ ಅಭ್ಯರ್ಥಿ ಎಂದು ಘೋಷಿಸಿದ ತಕ್ಷಣ ರಾಷ್ಟ್ರದ ರಾಜಕಾರಣದಲ್ಲಿ ಒಂದು ಸಂಚಲನ ಉಂಟಾಗಿದೆ. ಈ ಸಂಚಲನವೇ ಬಿ. ಜೆ. ಪಿ. ಗೂ ಬೇಕಾಗಿರುವುದು. ನಿಜ, ಈ ದೇಶದ ಸಂವಿಧಾನದ ಆಶಯಗಳನ್ನೇ ಧಿಕ್ಕರಿಸಿದ, ಕರಾಳ ಇತಿಹಾಸವಿರುವ ವ್ಯಕ್ತಿಯೊಬ್ಬನ ಹೆಸರನ್ನು ದೇಶದ ಉನ್ನತ ಆಡಳಿತಾತ್ಮಕ, ನೀತಿನಿರೂಪಕ ಹುದ್ದೆಗೆ ಸೂಚಿಸಿದಾಗ ಆತಂಕವಾಗುವದು ಸಹಜ. ಆದರೆ ಅದಕ್ಕೆ ಜಾತ್ಯತೀತ ಪ್ರಗತಿಪರ ಶಕ್ತಿಗಳ ಪ್ರತಿಕ್ರಿಯೆ ಬಂದಿದೆ. ಈ ಪ್ರತಿಕ್ರಿಯೆ ಪ್ರತಿರೋಧಕ್ಕೆ ಒಂದು ಸೀಮೆ ಇದೆ. ಎಲ್ಲ ಪ್ರಗತಿಪರ ಶಕ್ತಿಗಳು ವಿರೋಧಿಸಿದ ತಕ್ಷಣ ಬಿ. ಜೆ. ಪಿ. ನರೇಂದ್ರ ಮೋದಿಯವರ ಅಭ್ಯರ್ಥಿತನವನ್ನು ಹಿಂತೆಗೆದುಕೊಳ್ಳುವುದಿಲ್ಲ. ಸ್ವತಃ ಅವರದೇ ಪಕ್ಷದ ಹಿರಿಯ ನಾಯಕ ಅದ್ವಾನಿಯವರ ಅಭಿಪ್ರಾಯವನ್ನೇ ಅವರು ಮನ್ನಿಸಲಿಲ್ಲ. ದೇಶದ ಜನತೆಯೇ ಎದುರು ನಿಂತರೂ ಅವರು ಕೇಳುವುದು ಆರ್. ಎಸ್. ಎಸ್. ನ ಆದೇಶವನ್ನು ಮಾತ್ರ. ಇಂಥ ಸಂದರ್ಭದಲ್ಲಿ ಪ್ರಗತಿಪರ ಶಕ್ತಿಗಳು ಒಂದು ಹಂತದವರೆಗೆ ಈ ಬೆಳವಣಿಗೆಗೆ ಪ್ರತಿರೋಧವನ್ನು ತೋರಿಸುತ್ತಲೇ ಪರ್ಯಾಯ ಚಟುವಟಿಕೆಗಳ ಕಡೆ ಗಮನ ಹರಿಸಬೇಕು. ಬಿ. ಜೆ. ಪಿ. ಮೋದಿಯಂಥ ವ್ಯಕ್ತಿಯನ್ನು ಅಭ್ಯರ್ಥಿಯನ್ನಾಗಿ ಘೋಷಿಸಿರಬಹುದು. ಆದರೆ ಅಂತಿಮವಾಗಿ ಅವರನ್ನು ಆಯ್ಕೆ ಮಾಡಬೇಕಾದದ್ದು ಜನತೆಯಿಂದ ಆಯ್ಕೆಯಾಗುವ ಸಂಸದರು. ಸಂಸತ್ ಚುನಾವಣೆಯಲ್ಲಿ ಆ ಪಕ್ಷದ ಮತ್ತು ಅವರ ಮಿತ್ರಪಕ್ಷಗಳ ಅಭ್ಯರ್ಥಿಗಳು ಆಯ್ಕೆಯಾಗದಂತೆ, ಸಂವಿಧಾನಕ್ಕೆ, ದೇಶದ ಐಕ್ಯತೆ, ಸಮಗ್ರತೆ, ಸಮಗ್ರ ವಿಕಾಸಕ್ಕೆ ಗಮನ ಕೊಡುವಂಥ ಅಭ್ಯರ್ಥಿಗಳ ಆಯ್ಕೆಯಾಗುವಂತೆ ಶ್ರಮಿಸಬೇಕು. ಅದರ ಬದಲಾಗಿ ಅನಂತಮೂರ್ತಿಯಂಥವರು 'ದೇಶಬಿಟ್ಟು ಹೋಗುತ್ತೇನೆ' ಎಂದು ಹೇಳಿದರೆ, ವಿಡಂಬನೆಗಾಗಿ ಎಂಬುದನ್ನೂ ಉದ್ದೇಶ ಪೂರ್ವಕವಾಗಿ ಮರೆಮಾಚಿ ಅದರ ದುರುಪಯೋಗ ಪಡೆಯುತ್ತಾರೆ. ಬಿ. ಜೆ. ಪಿ. ಪರವಾದ ಮಾಧ್ಯಮಗಳು ಅದರ ಸುತ್ತಲೇ ಚರ್ಚೆಯಾಗುವಂತೆ ನೋಡಿಕೊಳ್ಳುತ್ತವೆ. ತಾನೂ ರಾಜಕಾರಣಿ ಎಂದು ಹೇಳುವ ಆಯನೂರ ಮಂಜುನಾಥನಂಥವರು ಅನಂತ ಮೂರ್ತಿಯವರನ್ನು ಪೂನಂ ಪಾಡೆಗೆ ಸಮೀಕರಿಸುತ್ತಾರೆ. ಪಾಪ ವಿಧಾನ ಸೌಧದಲ್ಲೂ ನೀಲಿ ಚಿತ್ರ ನೋಡುವ ಪಕ್ಷದವರಿಗೆ ಪೂನಂ ಪಾಡೆಯಂಥವರೇ ಉದಾಹರಣೆಗೆ ಸಿಗುತ್ತಾರೆ. ಅದು ಅವರ ತಪ್ಪಲ್ಲ. ಹಿಂದೆ ಸೋನಿಯ ಗಾಂಧಿ ಪ್ರಧಾನಿಯಾದರೆ ನಾನು ತಲೆಬೋಳಿಸಿ ಕೊಳ್ಳುತ್ತೇನೆ ಎಂದು ಬಿ. ಜೆ. ಪಿ. ಹಿರಿಯ ನಾಯಕಿ, ನಮ್ಮ ರಾಜ್ಯದ ಗಣಿಗಳ್ಳರ 'ತಾಯಿ' ಸುಷ್ಮಾ ಸ್ವರಾಜ್ ಹೇಳಿದ್ದರು. ಸೋನಿಯ ಪ್ರಧಾನಿಯಾಗದೆ ಸುಷ್ಮಾ ಅವರ ತಲೆಗೂದಲು ಉಳಿಸಿದರು. ಆದರೂ ಸೋನಿಯಾ ಆಳುವ ಪಕ್ಷದ ಅಧ್ಯಕ್ಷೆಯಾಗಿ ಈ ದೇಶದ ಪ್ರಧಾನಿಯನ್ನೂ ತಮ್ಮ ಕೈಯಲ್ಲಿಟ್ಟುಕೊಂಡಿದ್ದರು. ಅದಕ್ಕಾಗಿ ಸುಷ್ಮಾ ಅರ್ಧ ತಲೆಯನ್ನಾದರೂ ಬೋಳಿಸಿಕೊಳ್ಳಬೇಕಾಗಿತ್ತು. (ಇದು ಅವರ ಮಾತಿಗೆ ಪ್ರತಿಕ್ರಿಯೆ ಮಾತ್ರ. ಯಾರೂ ತಲೆಬೋಳಿಸಿಕೊಳ್ಳುವ ಅವಶ್ಯಕತೆ ಇಲ್ಲ.) ಇರಲಿ, ಈಗ ಈ ನರಮೇಧಿ, ಕ್ಷಮಿಸಿ ನರೇಂದ್ರ ಮೋದಿಯವರನ್ನು ವಿರೋಧಿಸುತ್ತ ಕೂರುವುದರಲ್ಲಿ ಅರ್ಥವಿಲ್ಲ. 'ಅಪಪ್ರಚಾರಾನೂ ಪ್ರಚಾರಾನೇ' ಎಂಬುದರಲ್ಲಿ ಬಿ. ಜೆ. ಪಿ. ಗೆ ಬಲವಾದ ನಂಬಿಕೆ. ಮೋದಿ ಕಳೆದ ವಿಧಾನಸಭಾ ಚುನಾವಣೆಯಲ್ಲಿ ಕರ್ನಾಟಕಕ್ಕೆ ಬಂದು ಚುನಾವಣಾ ಭಾಷಣ ಮಾಡಿ ಹೋದರು. ಆದರೆ ಅವರು ಬಂದು ಹೋದ ಸ್ಥಳದಲ್ಲಿ ಹುಲ್ಲುಗರಿಕೆಯೂ ಬೆಳೆಯಲಿಲ್ಲ. ಈ ದೇಶದ ಸೌದಾರ್ಹ ಸಂಸ್ಕೃತಿಯ ಬೇರು ಬಲವಾಗಿದೆ. ಅದಕ್ಕೆ ಇನ್ನೂ ಹೆಚ್ಚಿನ ಶಕ್ತಿ ತುಂಬುವ ಕೆಲಸದತ್ತ ಎಲ್ಲ ಪ್ರಗತಿಪರರು, ಪ್ರಜಾಪ್ರಭುತ್ವ ಪ್ರಿಯರು ಕೆಲಸ ಮಾಡಬೇಕಿದೆ. ಪ್ರತಿಕ್ರಿಯೆಯ ಜೊತೆ ಪರ್ಯಾಯದ ಕುರಿತು ಗಂಭೀರವಾಗಿ ಯೋಚಿಸಬೇಕು ಮತ್ತು ಕ್ರಿಯೆಗೂ ಇಳಿಯಬೇಕು. ಸಂವಿಧಾನದ ಆಶಯ ಹಾಗೂ ದೇಶದ ಐಕ್ಯತೆ ಮತ್ತು ನಿಜವಾದ ಅಭಿವೃದ್ಧಿಗೆ ಶ್ರಮಿಸಬೇಕಾದ ಮಾರ್ಗ ಅದೊಂದೆ.

ಸಿದ್ದನಗೌಡ ಪಾಟೀಲ

## ಭಾಜಪ –ಉಗ್ರ ಹಿಂದುತ್ವವಾದಕ್ಕೆ ಮಣೆ

ವಿಶ್ವ ಹಿಂದೂ ಪರಿಷತ್ ಅಯೋಧ್ಯೆಯಲ್ಲಿ ಈಚೆಗೆ ಬೃಹತ್ ರ್‍ಯಾಲಿಯೊಂದನ್ನು ನಡೆಸಲು ಸಿದ್ಧತೆ ನಡೆಸಿತ್ತು. ಉತ್ತರ ಪ್ರದೇಶದ ಸರಕಾರ ಅದಕ್ಕೆ ಅವಕಾಶ ನೀಡಲಿಲ್ಲ. ಅಯೋಧ್ಯೆಯಲ್ಲಿ ವಿವಾದಿತ ಸ್ಥಳದಲ್ಲಿಯೇ ರಾಮಮಂದಿರ ಕಟ್ಟುತ್ತೇವೆ ಎಂದು ಅಬ್ಬರಿಸಿದ ವಿಎಚ್‌ಪಿ ನಾಯಕರನ್ನು ಬಂಧಿಸಿತು ಸರಕಾರ. ಚುನಾವಣೆ ಹತ್ತಿರವಾಗುತ್ತಿದ್ದ ಹಾಗೆ ಉಗ್ರ ಹಿಂದುತ್ವ ತಲೆ ಎತ್ತುತ್ತದೆ. ಸಂಘ ಪರಿವಾರದ ಎಲ್ಲ ವಿಭಾಗಗಳೂ ಸರಕಾರವನ್ನು ತರಾಟೆಗೆ ತೆಗೆದುಕೊಂಡವು. ಇದಾದ ಕೆಲ ತಿಂಗಳ ನಂತರ ಉತ್ತರ ಪ್ರದೇಶದ ಮುಜಫರ್‌ನಗರದಲ್ಲಿ ಕೋಮುಜ್ವಾಲೆ ಉರಿಯಿತು. ನಲವತ್ತನಾಲ್ಕು ಜನ ಈ ಗಲಭೆಗಳಲ್ಲಿ ಹತರಾದರು ಅಧಿಕೃತ ವರದಿಗಳ ಪ್ರಕಾರ. ಶಾಂತಿ ಸುವ್ಯವಸ್ಥೆ ಕಾಪಾಡಲು ಸೇನೆಯನ್ನು ಕರೆಸಬೇಕಾಯಿತು. ಹಲವು ದಿನಗಳು ಕರ್ಫ್ಯೂ ಜಾರಿಯಲ್ಲಿದ್ದು ಜನಜೀವನ ದುಸ್ತರವಾಗಿತ್ತು. ಈ ಗಲಭೆಗಳ ಹಿಂದೆ ಯಾರ ಕೈವಾಡವಿತ್ತು ಎಂಬುದು ಸದ್ಯಕ್ಕಂತೂ ಗೊತ್ತಾಗುವುದಿಲ್ಲ ಸಂಪೂರ್ಣವಾದ ತನಿಖೆ ಮುಗಿಯುವವರೆಗೆ. ಅಂದ ಹಾಗೆ ತನಿಖೆ ನಡೆದರೂ ನಿಜಸಂಗತಿ ಹೊರಬೀಳುವುದಿಲ್ಲ. ಇದುವರೆಗೆ ದೇಶದಲ್ಲಿ ನಡೆದಿರುವ ಇಂಥ ಘಟನೆಗಳ ವಿಚಾರದಲ್ಲಿ ಯಾರ ಕೈವಾಡ ಇತ್ತು ಎಂಬುದು ಬಹಿರಂಗಗೊಂಡಿಲ್ಲ. ಗುಜರಾತ್‌ನಲ್ಲಿ ದಶಕದ ಹಿಂದೆ ನಡೆದ ಘಟನೆಗಳು ತದನಂತರ ಬಂದ ವರದಿಗಳು ಅದಕ್ಕೆ ಉದಾಹರಣೆ. ಅಂದಿನ ದಿನಗಳ ಮಾರಣ ಹೋಮದ ಹಿಂದಿದ್ದವರು ಈಗ ದಿಲ್ಲಿಗಾದಿಯತ್ತ ಮುಖ ಮಾಡಿದ್ದಾರೆ. ಮೇಲೆ ಹೇಳಿರುವ ಎರಡೂ ಘಟನೆಗಳು ನಡೆದಿರುವುದು ಉತ್ತರ ಪ್ರದೇಶದಲ್ಲಿ. ಇವೆರಡಕ್ಕೂ ಏನಾದರೂ







**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೫/- |
| ವಾರ್ಷಿಕ ಚಂದಾ | ರೂ. ೨೦೦/- |
| ಮೂರು ವರ್ಷಕ್ಕೆ | ರೂ. ೪೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

ಸಂಬಂಧವಿದೆಯೇ ಎನ್ನುವ ಪ್ರಶ್ನೆ ಕಾಡದಿರದು.

ಚುನಾವಣೆಗಳು ಸಮೀಪಿಸುತ್ತಿದ್ದ ಹಾಗೆ ಹಿಂದುತ್ವವಾದ ಪ್ರಬಲವಾಗಿ ಕಾಣಿಸಿಕೊಳ್ಳುವುದನ್ನು ಹಿಂದೆಯೂ ನೋಡಿದ್ದೇವೆ. ಈಗಲೂ ನೋಡುತ್ತಿದ್ದೇವೆ. ಅದ್ವಾನಿ ನಡೆಸಿದ ರಥಯಾತ್ರೆ ನೆನಪಿದೆ ಅಲ್ಲವೆ. ರಾಮಮಂದಿರ ನಿರ್ಮಾಣದ ಹೆಸರಿನಲ್ಲಿ ನಡೆದ ಭರ್ಜರಿ ಕಾರ್ಯಕ್ರಮ ಅದು. ಅದರ ಹಿಂದೆಯೇ ನಡೆದದ್ದು ಬಾಬ್ರಿ ಮಸೀದಿಯ ಧ್ವಂಸ. ಭಾರತೀಯ ಜನತಾ ಪಾರ್ಟಿ ದಿಲ್ಲಿ ಸಿಂಹಾಸನ ಏರಿ ಕುಳಿತದ್ದೂ ಈ ಎರಡು ಪ್ರಕರಣಗಳ ಬೆನ್ನೇರಿಯೆ. ಅಂದಹಾಗೆ ರಾಮಮಂದಿರ ನಿರ್ಮಾಣದ ಹೆಸರಿನಲ್ಲಿ ಸಂಗ್ರಹಿಸಿದ ಸಾವಿರಾರು ಕೋಟಿ ಹಣ ಏನಾಯಿತೊ ? ಯಾರಿಗೆ ಬೇಕು ಉಸಾಬರಿ. ದೇವರ ಹೆಸರಿನಲ್ಲಿ ನಡೆದ ಕೈಂಕರ್ಯ ಯಾರು ತಿಂದರೇನು ! ಈಗ ವಿಎಚ್‌ಪಿ ಮತ್ತೆ ಗರಿಗೆದರಿಕೊಂಡಿದೆ. ಅದರ ಶಾಖೆಗಳಾದ ಭಜರಂಗ ದಳ ಮುಂತಾದವು ತಾಳ ಹಾಕತೊಡಗಿವೆ. ಸಂವಿಧಾನದ ೩೭೦ನೇ ವಿಧಿಯ ನಿರ್ಮೂಲನೆ, ಏಕರೂಪದ ನಾಗರಿಕ ಸಂಹಿತೆ ಮೊದಲಾದ ಉಗ್ರಹಿಂದುತ್ವದ ಅಬ್ಬರ ಕೇಳಿಬರುತ್ತಿದೆ.

ನಿಧಾನವಾಗಿ ಭಾಜಪದ ಮೇಲೆ ತನ್ನ ನಿಯಂತ್ರಣವನ್ನು ಆರೆಸ್ಸೆಸ್ ಬಲಗೊಳಿಸುತ್ತಿದೆ. ಭಾಜಪದ ಅಧ್ಯಕ್ಷ ಪೀಠಕ್ಕೆ ನಿತೀನ್ ಗಡ್ಕರಿಯನ್ನು ತಂದಾಗಲೇ ಅದು ಸಾಕಷ್ಟು ಬಹಿರಂಗಗೊಂಡಿತ್ತು. ಆರೆಸ್ಸೆಸ್ ಸಾಂಸ್ಕೃತಿಕ ಸಂಸ್ಥೆ ಎಂದು ಸೋಗು ಹಾಕಿಕೊಂಡು ಸರಕಾರಕ್ಕೆ ಮುಚ್ಚಳಿಕೆ ಬರೆದುಕೊಟ್ಟಿರುವುದು ಬಹುತೇಕ ಮರೆತು ಹೋಗಿರುವ ಸಂಗತಿ. ತಾನು ಆರೆಸ್ಸೆಸ್‌ನ ಮುಖವಾಡವಲ್ಲ, ಅದರ ರಾಜಕೀಯ ಅಂಗವಲ್ಲ ಎಂದು ಭಾಜಪ ಹೇಳಿಕೊಳ್ಳುವುದು ಹುರುಳಿಲ್ಲದ್ದು. ವಾಸ್ತವ ಸಂಗತಿಯೇ ಬೇರೆ. ಭಾಜಪದ ಬಹುತೇಕ ನಾಯಕರು ಆರೆಸ್ಸಸು ಮೂಲದವರು. ಕೆಲವರು ಮಾತ್ರ ಅಲ್ಲ. ಮೊರಾರ್ಜಿ ದೇಸಾಯಿ ಪ್ರಧಾನಿಯಾಗಿದ್ದಾಗ ಸಮ್ಮಿಶ್ರ ಸರಕಾರದಲ್ಲಿ ಭಾಜಪ ಭಾಗಿಯಾಗಿದ್ದಾಗ ಭಾಜಪ ನಾಯಕರ ಆರೆಸ್ಸೆಸ್ ಸದಸ್ಯತ್ವ ದೊಡ್ಡ ಸಮಸ್ಯೆಯಾಗಿ ಮುಂದೆಬಂದಿದ್ದುದನ್ನು ನೆನಪು ಮಾಡಿಕೊಳ್ಳಬಹುದು. ಈಗ ಅವೆಲ್ಲ ಹಳೆಯ ಕತೆ. ಭಾಜಪದ ವ್ಯವಹಾರಗಳಲ್ಲಿ ಆರೆಸ್ಸೆಸ್‌ನ ತೀರ್ಮಾನವೇ ಕೊನೆಯದು ಎನ್ನುವುದು ಸ್ಪಷ್ಟವಾಗಿದೆ. ಈಚಿನ ವಿದ್ಯಮಾನಗಳು ಅದಕ್ಕೆ ಸಾಕ್ಷಿ.

ಅಖಂಡ ಭಾರತದ ನಿರ್ಮಾಣದ ಗುರಿ ಹೊಂದಿರುವ ಆರೆಸ್ಸೆಸ್ ಸಂಘಟನೆ ಅಲ್ಪಸಂಖ್ಯಾತರು ಬಹುಮತೀಯರ ಹದ್ದುಬಸ್ತಿನಲ್ಲಿರಬೇಕು ಎಂದು ಬಹಿರಂಗವಾಗಿಯೇ ಪ್ರತಿಪಾದಿಸುತ್ತದೆ. ಫ್ಯಾಸಿಸಂ ಮಾದರಿಯಲ್ಲಿ ಅದು ನಾಯಕನಿಗೆ ತಲೆಬಾಗುವುದನ್ನು ತನ್ನ ಕಾರ್ಯಕರ್ತರಿಗೆ ಮೊದಲು ಕಲಿಸುವ ಪಾಠ. ಗುರುದಕ್ಷಿಣೆ ಪರಂಪರೆಯೂ ಅದೇ ಜಾಯಮಾನಕ್ಕೆ ಸೇರಿದ್ದು, ಸರಸಂಗ ಚಾಲಕನ ಮಾತು ಯಾರೂ ಮೀರುವಂತಿಲ್ಲ. ಭಾಜಪದಲ್ಲಿ ಯಾರು ಅಧ್ಯಕ್ಷರಾಗಬೇಕು ಎಂಬುದರ ಬಗ್ಗೆ ವಿವಾದ ಬಂದಾಗ ಗಡ್ಕರಿಯನ್ನು ಕುಳ್ಳಿರಿಸಿದ್ದನ್ನು ಹಿಂದೆಯೇ ಪ್ರಸ್ತಾಪಿಸಿದ್ದೇವೆ. ಅದ್ವಾನಿಯನ್ನು ವಿಪಕ್ಷ ಸ್ಥಾನದಿಂದ ಇಳಿಸಿದ್ದೂ ಆರೆಸ್ಸೆಸ್ಸೇ. ಈಗ ಪ್ರಧಾನಿ ಪಟ್ಟದ ಅಭ್ಯರ್ಥಿ ಸ್ಥಾನ ತಪ್ಪಿದ್ದಕ್ಕೂ ಅದೇ ಕಾರಣ. ಇದು ಎಲ್ಲರಿಗೂ ಗೊತ್ತಿರುವ ವಿಚಾರ. ನರೇಂದ್ರ ಮೋದಿಯನ್ನು ಭಾಜಪದ ಚುನಾವಣಾ ಪ್ರಚಾರದ ಮುಖ್ಯಸ್ಥನ ಸ್ಥಾನಕ್ಕೇರಿಸಿದಾಗ ಪಕ್ಷದಲ್ಲಿ ಉಂಟಾಗಿದ್ದ ಬಿರುಕಿಗೆ ತೇಪೆ ಹಾಕಿದ್ದು ಆರೆಸ್ಸೆಸ್‌ನ ಮುಖ್ಯಸ್ಥ ಮೋಹನ್ ಭಾಗವತ್. ನಾಗಪುರದ ಆದೇಶಕ್ಕೆ ದೆಹಲಿಯ ನಾಯಕರು ತಾಳ ಹಾಕಲೇಬೇಕಾಯಿತು. ಭಾಜಪ ಅಧ್ಯಕ್ಷ ರಾಜನಾಥ ಸಿಂಗ್ ಗುಜರಾತಿನ ಮುಖ್ಯಮಂತ್ರಿ ನರೇಂದ್ರ ಮೋದಿಯನ್ನು ಆತುರಾತುರವಾಗಿ ಭಾಜಪದ ಪ್ರಧಾನ ಮಂತ್ರಿ ಅಭ್ಯರ್ಥಿ ಎಂದು ಪ್ರಕಟಿಸಿದ್ದೂ ನಾಗಪುರದ ಆದೇಶದ ಮೇರೆಗೆ. ತೆರೆಮರೆಯಲ್ಲಿ ಒಮ್ಮತ ಮೂಡಿಸಲು ನಡೆಸಿದ ಪ್ರಯತ್ನಗಳು ರಹಸ್ಯವೇನಲ್ಲ. ಅತೃಪ್ತಿ ಇದ್ದರೂ ಅದು ಸಹನೀಯ ಭಾಜಪ ನಾಯಕರಿಗೆ.

ನರೇಂದ್ರ ಮೋದಿಯನ್ನು ಪ್ರಧಾನಿ ಅಭ್ಯರ್ಥಿ ಎಂದು ಪ್ರಕಟಿಸುವುದರ ಹಿಂದೆ ಉಗ್ರ ಹಿಂದುತ್ವವಾದಿಗಳ ಕೈವಾಡವಷ್ಟೇ ಅಲ್ಲ ದೇಶದ ಪ್ರಮುಖ ಬಂಡವಾಳಗಾರರ ಪ್ರೋತ್ಸಾಹವೂ ಇರುವುದು ರಹಸ್ಯವೇನಲ್ಲ. ಇದರಲ್ಲಿ ಉತ್ತಮ ಆಡಳಿತ ನೀಡಿಕೆಗಿಂತ ಉಗ್ರ ಹಿಂದುತ್ವಕ್ಕೇ ಪ್ರಾಧಾನ್ಯತೆ. ತನ್ನ ಅಬ್ಬರದ ಮಾತುಗಾರಿಕೆಯಿಂದ ಮೋಡಿ ಮಾಡುವ ಮೋದಿ ಆರೆಸ್ಸೆಸ್‌ನ ಕಟ್ಟಾ ಅನುಯಾಯಿ. ಆರೆಸ್ಸೆಸ್‌ನ ಸಾಮಾನ್ಯ ಕಾರ್ಯಕರ್ತನಾಗಿ ಮೇಲೇರಿದ ವ್ಯಕ್ತಿ. ಅದ್ವಾನಿ ರಥಯಾತ್ರೆಯಲ್ಲಿ ಪಟ್ಟ ಶಿಷ್ಯ. ಅದಕ್ಕೇ ಎನ್‌ಡಿಎಯ ಮುಖ್ಯ ಪಾಲುದಾರ ಜೆಡಿಯು ಹೊರಬಿದ್ದರೂ ಲೆಕ್ಕಿಸದೆ ಆರೆಸ್ಸೆಸ್ ಮೋದಿಗೆ ಪಟ್ಟ ಕಟ್ಟಿದ್ದು. ಅಂತೂ ಉಗ್ರ ಹಿಂದುತ್ವ ವಾದವನ್ನು ಪ್ರತಿಪಾದಿಸುವುದಕ್ಕೆ ಅರ್ಹನಾದ ವ್ಯಕ್ತಿ ಎಂದರೆ ಮೋದಿ.

ಈ ತಿಂಗಳು (೩ನೇ ಪುಟದಿಂದ)

ಎದುರುನೋಡುವ ಹೊಸ ಪೀಳಿಗೆಯ ಮಿಲಿಯಾಂತರ ಯುವಕರು ಈಗಾಗಲೇ ಹುಟ್ಟಿದ್ದಾರೆ. ಅಂತಹವರ ಸಂಖ್ಯೆಯೂ ದಿನೇ ದಿನೇ ಹೆಚ್ಚುತ್ತಿದೆ. ರಾಷ್ಟ್ರೀಯ ಉತ್ಪಾದನಾ ಬಂಡವಾಳ ಹೂಡಿಕೆ ವಲಯಗಳು ಅಸ್ತಿತ್ವಕ್ಕೆ ಬಂದು, ಉತ್ಪಾದನಾ ಕ್ರಿಯೆಯನ್ನು ಹೆಚ್ಚಿಸಿ ಉದ್ಯೋಗಾವಕಾಶಗಳನ್ನು ಸೃಷ್ಟಿಸುವವರೆಗೂ ಈ ಯುವಜನತೆ ನಿರುದ್ಯೋಗಿಗಳಾಗಿ ಕಾದು ಕೂತಿರುತ್ತಾರೆಂದು ನಿರೀಕ್ಷಿಸಲಾಗದು. ಈಗಾಗಲೇ ನಿರುದ್ಯೋಗ ಸಮಸ್ಯೆ ಜನಸಾಮಾನ್ಯರ ಬದುಕನ್ನು ಕಂಗೆಡಿಸಿದೆ. ಇದು ದಿನೇ ದಿನೇ ಮತ್ತಷ್ಟು ಉಲ್ಬಣಗೊಳ್ಳುವುದಂತೂ ವಾಸ್ತವ ಸಂಗತಿ. ಈ ಗಂಭೀರ ಸಮಸ್ಯೆಗೆ ಪರಿಹಾರವೆಂದರೆ ಅಭಿವೃದ್ಧಿ ಆಧಾರಿತ ಉತ್ಪಾದನಾ ಪ್ರಕ್ರಿಯೆಯನ್ನು ಆದಷ್ಟು ಶೀಘ್ರದಲ್ಲಿ ಹಾಗೂ ವ್ಯಾಪಕವಾಗಿ ಕಾರ್ಯರೂಪಕ್ಕೆ ತರಬೇಕಾದ್ದು.

ಆ ದಿಶೆಯಲ್ಲಿ ಈ ನಾಲ್ಕು ಉಪಕ್ರಮಗಳನ್ನು ಜಾರಿಗೆ ತರಬಹುದಾಗಿದೆ. ಅವೆಂದರೆ : (೧) ವಾಣಿಜ್ಯ ಕ್ಷೇತ್ರದಲ್ಲಿ ನಿರ್ದಿಷ್ಟ ಗುರಿಯುಳ್ಳ ನಿಯಂತ್ರಣವಿರುವ ಸೂಕ್ತ ವಾತಾವರಣವನ್ನು, ಸನ್ನಿವೇಶವನ್ನು, ಅದರಲ್ಲೂ ಮುಖ್ಯವಾಗಿ ರಾಜ್ಯಮಟ್ಟದಲ್ಲಿ, ಉತ್ತಮಪಡಿಸಬೇಕು. (೨) ಉತ್ಪಾದನಾ ಕ್ಷೇತ್ರದ ಬೆನ್ನೆಲುಬಿನಂತಿರಬೇಕಾದ ಈ ಬಂಡವಾಳ ಹೂಡಿಕೆ ವಲಯದ ಸಮೂಹಗಳು ವ್ಯಕ್ತಿಗತವಾಗಿ ಸೇವೆ ಸಲ್ಲಿಸುವುದು ಕಷ್ಟಸಾಧ್ಯ. ಅಲ್ಲದೆ, ನೀತಿ ನಿರೂಪಕ ವಲಯಗಳೊಡನೆ ಅವಕ್ಕೆ ನೇರ ಸಂಪರ್ಕವೂ ಇರುವುದಿಲ್ಲ; ಎಂದೇ ಬಂಡವಾಳ ಹೂಡಿಕೆ ವಲಯದ ಕಾರ್ಯವಿಧಾನಗಳ ಗುಣಮಟ್ಟಕ್ಕೆ ಹೆಚ್ಚು ಆದ್ಯತೆ ನೀಡಬೇಕು. (೩) ಒಂದರ್ಥದಲ್ಲಿ ನಮ್ಮ ಅಪಾರ ಜನಸಂಖ್ಯೆಯೇ ಈ ದೇಶದ ಸಂಪನ್ಮೂಲ ಎಂದರೆ ತಪ್ಪಾಗಲಾರದು. ಇಂತಹ ಸಂಪನ್ಮೂಲವನ್ನು ಸೂಕ್ತ ರೀತಿಯಲ್ಲಿ ಅಭಿವೃದ್ಧಿ ಕ್ರಿಯೆಯಲ್ಲಿ ತೊಡಗಿಸಬೇಕು, ಬಳಸಿಕೊಳ್ಳಬೇಕು. ಮಾನವರನ್ನು ಸಮಸ್ಯೆಗಳನ್ನಾಗಿ ಪರಿಗಣಿಸುವ ದೃಷ್ಟಿಕೋನವನ್ನು ಕೈಬಿಟ್ಟು, ಅವರು ಉತ್ಪಾದನಾ ಪ್ರಕ್ರಿಯೆ ಮತ್ತು ಚಟುವಟಿಕೆಗಳ ಜೀವಾಳ ಎಂಬ ವಾಸ್ತವಾಂಶವನ್ನು ಮನಗಾಣಬೇಕು. ನಮ್ಮ ಕಾರ್ಮಿಕ ವರ್ಗಕ್ಕೆ ಸಂಬಂಧಪಟ್ಟ ಕಾನೂನುಗಳಲ್ಲಿ ಹಲವಾರು ಮೂಲಭೂತ ಬದಲಾವಣೆಗಳನ್ನು ತುರ್ತಾಗಿ ಜಾರಿಗೆ ತರಬೇಕೆಂಬುದರಲ್ಲಿ ಯಾವ ಅನುಮಾನವೂ ಇಲ್ಲ. ಅಂತಹ ಬದಲಾವಣೆಗಳ ರೂಪುರೇಷೆಗಳ ಕುರಿತು ಕಾರ್ಮಿಕ ಚಳುವಳಿಗಳ ನಾಯಕರು ಮತ್ತು ಸರ್ಕಾರದ ಅಧಿಕಾರಿಗಳ ಮಟ್ಟದಲ್ಲಿ ಚರ್ಚೆಯಾಗಬೇಕು, ಕಾರಣ ಅವರುಗಳ ನಡುವೆ ಒಮ್ಮತವಿಲ್ಲದೆ ಕಾನೂನಿನಲ್ಲಿ ಯಾವುದೇ ಬದಲಾವಣೆಗಳನ್ನು ಜಾರಿಗೆ ತರಲು ಸಾಧ್ಯವಿಲ್ಲ. (೪) ದೇಶದಲ್ಲಿ ಆಂತರಿಕ ಮಟ್ಟದಲ್ಲಿ ತಂತ್ರಜ್ಞಾನ ಮತ್ತು ಉತ್ಪಾದಿತ ವಸ್ತುಗಳ ಮೌಲ್ಯವನ್ನು ಉತ್ತಮಪಡಿಸುವ ದಿಶೆಯಲ್ಲಿ ಸೂಕ್ತ ನೀತಿ–ನಿಯಮಗಳನ್ನು ರೂಪಿಸಬೇಕಿದೆ. ಇದರಿಂದಾಗಿ ಆಮದು ಮಾಡಿಕೊಳ್ಳುವುದನ್ನು ಮಿತಿಗೊಳಿಸುವುದು ಸಾಧ್ಯವಾಗುವುದಲ್ಲದೆ ರಫ್ತು ಮತ್ತು ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಸಾಧ್ಯತೆಗಳೂ ನಿರ್ಮಾಣಗೊಳ್ಳುತ್ತವೆ.

**– ಅರುಣ್ ಮೈರಾ**

ಕೃಪೆ : ದಿ ಹಿಂದು

✶ ✶ ✶

೧೯೮೪ ಅಥವಾ ೧೯೮೫ರಲ್ಲಿರಬಹುದು, ಪ್ರಸ್ತುತ ಲೇಖಕ ಭಾರತ ಸರ್ಕಾರವು ಆಯೋಜಿಸುವ ಕೈಲಾಸ–ಮಾನಸಸರೋವರದ ವೀಕ್ಷಣೆಗೆ ಹೋಗಿದ್ದ. ವಿದೇಶಾಂಗ ವ್ಯವಹಾರ ಸಚಿವಾಲಯ ಅದರ ಉಸ್ತುವಾರಿ ನೋಡಿಕೊಳ್ಳುತ್ತದೆ ಮತ್ತು ನೈನಿತಾಲಿನಲ್ಲಿರುವ ಕುಮಾವ್ಲೂ ಮಂಡಲ ವಿಕಾಸ ನಿಗಮವು ಸೂಕ್ತ ಸೌಲಭ್ಯಗಳನ್ನು ಕಲ್ಪಿಸುತ್ತದೆ. ಟಿಬೆಟ್ಟಿನಲ್ಲಿ "ಯಾತ್ರೆ" ಮುಗಿಸಿ ಹಿಂದಿರುಗುವಾಗ ನಾನಕ್‌ಮತಾ ಸಾಹಿಬ್ ಗುರುದ್ವಾರಕ್ಕೆ ಭೇಟಿಯಿತ್ತು ನಮ್ಮ ತಂಡವು ಮುಝಾಫ್ಫರ್‌ನಗರಕ್ಕೆ ಬಂದಿತು. ತಂಡದ ನಾಯಕ ನಾಗಾಲ್ಯಾಂಡಿನ ಉನ್ನತ ಪೊಲೀಸ್ ಅಧಿಕಾರಿಯಾಗಿದ್ದುದರಿಂದ ನಮ್ಮ ತಂಡಕ್ಕೆ ಮುಝಾಫ್ಫರ್ ನಗರದಲ್ಲಿ ಅದ್ದೂರಿಯ ಸ್ವಾಗತ, ಭೋಜನಕೂಟ, ಎಲ್ಲಾ ಏರ್ಪಾಡಾಗಿತ್ತು. ಅದನ್ನು ಆಯೋಜಿಸಿದ್ದವರು ಆ ನಗರದ ಉನ್ನತ ಪೊಲೀಸ್ ಅಧಿಕಾರಿಗಳು. ಅವರ ಪೈಕಿ ಹಿಂದುಗಳಿದ್ದರು, ಮುಸಲ್ಮಾನರಿದ್ದರು ಮತ್ತು ಸಿಖ್ ಪಂಥದವರಿದ್ದರು. ನಗರದ ನಾಗರಿಕರ ದೊಡ್ಡ ಗುಂಪು ನಮಗೆ ಸ್ವಾಗತ ಕೋರಲು

ಒಂದು ಹೊಟೇಲಿನಲ್ಲಿ ಜಮಾಯಿಸಿತ್ತು. ಹೊಟೇಲು ಸಾಕಷ್ಟು ಬೃಹತ್ತಾದ್ದು ಮತ್ತು ಸ್ವಾಗತಕಾರರಲ್ಲಿಯೂ ಮುಸಲ್ಮಾನರು, ಹಿಂದುಗಳು ಮತ್ತು ಸಿಖ್ ಪಂಥದವರು ಇದ್ದರು. ಮುಸಲ್ಮಾನರು ಬಹುಶಃ ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದರು. ನಮ್ಮ ತಂಡದ ನೇತಾರ ಶ್ರೀ. ವತ್ಸ್ ಒಂದು ನಿಮಿಷ ಮಾತ್ರ ಸ್ವಾಗತಕಾರರನ್ನುದ್ದೇಶಿಸಿ ಮಾತನಾಡಿ ವಂದನೆಗಳನ್ನು ಸಲ್ಲಿಸಿದರು. ಆಮೇಲೆ ತಂಡದ ಪರವಾಗಿ ಮಾತನಾಡಲು ಪ್ರಸ್ತುತ ಲೇಖಕನನ್ನು ಕೇಳಿದರು. ಅಂದು ಹೇಳಿದ ಮಾತುಗಳು ಭಾಗಶಃ ಇವು : "ನಾವು ಕೈಲಾಸದಲ್ಲಿ ಶಿವ–ಪಾರ್ವತಿಯರನ್ನು ಕಾಣಲಿಲ್ಲ, ಆದರೆ ಅಲ್ಲಿಯ ಸೊಬಗು ಶಿವನಿದ್ದರೆ ಅವನಿಗೂ ಆಕರ್ಷಕವಾಗಿರುತ್ತಿತ್ತು. ಮಾನಸಸರೋವರದಲ್ಲಿ ಮತ್ತು ಗೌರೀ ಕುಂಡದಲ್ಲಿ ಸ್ನಾನ ಮಾಡಲು ಪಾರ್ವತಿಗೂ ಅತೀವ ಖುಷಿಯಾಗಿದ್ದಿರಬೇಕು. ಆ ಖುಷಿಯ ನಂತರ ಈಗ ಮುಝಾಫರ್ ನಗರದಲ್ಲಿ ಬೇರೊಂದು ರೀತಿಯ ಖುಷಿಯನ್ನು ಕಾಣುತ್ತಿದ್ದೇವೆ. ಅತ್ಯಂತ ಸಂತಸದಾಯಕವಾದ ಅನುಭವ ಇದು. ಇಲ್ಲಿ ಪೊಲೀಸ್ ಅಧಿಕಾರಿಗಳು ಮುಂಚೂಣಿಯಲ್ಲಿದ್ದಾರೆಂಬ ಕಾರಣಕ್ಕೆ ಬೇರೆ ಬೇರೆ ಮತಗಳ ವ್ಯಾಪಾರಿಗಳು ಮತ್ತು ಜನ ನಮ್ಮನ್ನು ಸ್ವಾಗತಿಸಲು ಬಂದಿದ್ದಾರೇನೋ ಎಂಬ ಅನುಮಾನ ನನ್ನದು. ಆದರೂ ಪರವಾಗಿಲ್ಲ, ಎಲ್ಲ ಮತಗಳವರೂ ಇಲ್ಲಿ ಒಟ್ಟಾಗಿರುವುದು ಖುಷಿಯ ಸಂಗತಿ. ಪತ್ರಿಕೆಗಳಲ್ಲಿ ನಮಗೆ ಈ ನಗರದ ಹೆಸರು ಆಗಾಗ್ಗೆ ಗೋಚರಿಸುತ್ತಿರುತ್ತದೆ. ಹಿತ್ತಾಳೆ ಪಾತ್ರೆಗಳ ತಯಾರಿಕೆಗೆ ಪ್ರಮುಖ ಸ್ಥಳವಿದು ಎಂದಲ್ಲ, ಬದಲಾಗಿ ಇಲ್ಲಿ ಪದೇ ಪದೇ ಮತೀಯ ಘರ್ಷಣೆಗಳು ನಡೆಯುತ್ತಿರುತ್ತವೆ ಎಂಬ ಕಾರಣಕ್ಕೆ. ಆ ವಿಷಯ ಬಿಟ್ಟು ನನ್ನಂಥವರಿಗೆ ಈ ನಗರದ ಬಗ್ಗೆ ಬೇರೇನೂ ತಿಳಿಯುವುದಿಲ್ಲ. ಕೈಲಾಸವನ್ನು ಕಾಣಲು ಹೋಗಿದ್ದ ನಮ್ಮನ್ನು ಕಂಡುಹೋಗಲು ಇಂದು ಎಲ್ಲ ಮತದವರೂ ಸೇರಿದ್ದೀರಿ. ಕೈಲಾಸವನ್ನು ಕಂಡ ಸಂತೋಷಕ್ಕೆ ಸಮನಾದ ಸಂತೋಷ ಉಂಟಾಗುತ್ತಿದೆ. ಇನ್ನುಮುಂದೆ ಈ ಭ್ರಾತೃತ್ವವೇ ನಮಗೆ ಪತ್ರಿಕೆಗಳ ಮೂಲಕ ತಿಳಿಯುವಂತಾಗಲಿ. ನಿಮ್ಮ ಸೌಹಾರ್ದ ಹೀಗೆಯೇ ವರ್ಧಿಸಲಿ. ನಮ್ಮ ತಂಡದ ಪರವಾಗಿ ನಿಮಗೆಲ್ಲಾ ಅನಂತ ವಂದನೆಗಳು."

ಮಾತನಾಡಿದ್ದು ಹತ್ತು–ಹದಿನೈದು ನಿಮಿಷ. ನಂತರ ಹತ್ತಾರು ನಿಮಿಷಗಳ ಕಾಲ ಅಲ್ಲಿ ಸೇರಿದ್ದವರ ನಡುವೆ ಕಾಲ ಕಳೆದು ಅವರ ಉಲ್ಲಾಸದ ಪರಿಚಯವಾದದ್ದು ಸದಾ ಮನಸ್ಸಿನಲ್ಲಿ ಉಳಿಯುವಂಥದು. ಆದರೆ ಮುಝಾಫರ್ ನಗರ ಈಗ ಮತ್ತೆ ಬೆಂಕಿಯಲ್ಲಿ ಬೇಯುತ್ತಿದೆ, ಅಲ್ಲಿ ಹೆಣಗಳು ಬಿದ್ದಿವೆ, ಆ ಬಗ್ಗೆ ರಾಜಕೀಯ ಮುತ್ಸದ್ದಿಗಳು ಪರಸ್ಪರ ದೋಷಾರೋಪಣೆ ಮಾಡಿಕೊಳ್ಳುತ್ತಿದ್ದಾರೆ, ಬೆಂಕಿಯ ಮಧ್ಯೆ ಎಲ್ಲೋ ವೋಟುಗಳ ವಜ್ರ ಬಿದ್ದಿದೆಯೆಂದು ಅದರ ಹುಡುಕಾಟದಲ್ಲಿ ನಿರತರಾಗಿದ್ದಾರೆ. ಚುನಾವಣೆ ಇನ್ನೇನು ಬಂತು ಎಂದಾಗಲೆಲ್ಲ ಇಂತಹ ಘಟನೆಗಳು ಜರುಗಬೇಕೆಂಬ ಅಲಿಖಿತ ರಾಜಕೀಯ ಪದ್ಧತಿಯು ನಮ್ಮ ದೇಶಕ್ಕೆ ಪಿಡುಗು. ಸೌಹಾರ್ದತೆಯ ಸವಿಯುಂಡಿರುವ ಜನರೇ ಪರಸ್ಪರ ಕತ್ತಿ ಝಳಪಿಸಿಕೊಳ್ಳುವ ದುರಂತವು ನಮ್ಮ ದೇಶವನ್ನು ಅಶಕ್ತವಾಗಿಸುತ್ತದೆ. ಮುಝಾಫರ್‌ನಗರದ ದುರಂತ ದೇಶದಲ್ಲಿ ಬೇರೆಡೆ ಎಲ್ಲೂ ಮರುಕಳಿಸದಿರಲೆಂದು ಆಶಿಸೋಣ. ಆಗ ನಮ್ಮಲ್ಲಿ ಹೊಸ ಸಂಸ್ಕೃತಿಗೆ ನಾಂದಿ ಹಾಡಿದಂತಾಗುತ್ತದೆ.

✶ ✶ ✶

ಪುಣೆಯಲ್ಲಿ ದಾಭೋಳ್ಕರ್ ಅವರ ಹತ್ಯೆಯ ನಂತರ ಇನ್ನೊಂದು ಹಲ್ಲೆ ನಡೆಯಿತು. ಚಲನಚಿತ್ರ ತಂತ್ರಜ್ಞರ ತರಬೇತಿಗೆಂದು ಒಂದು ಸಂಸ್ಥೆ ಅಲ್ಲಿದೆ. "ಕಬೀರ್ ಮಂಚ" ಎಂಬ ಹೆಸರಿನಲ್ಲಿ ಒಂದು ತಂಡವನ್ನು ಕೆಲವು ಪ್ರಗತಿಪರ ಕಾರ್ಯಕರ್ತರು ರಚಿಸಿಕೊಂಡಿದ್ದಾರೆ. ಅದರಲ್ಲಿ ಬಹುಮಂದಿ ದಲಿತ ಸಮುದಾಯದಿಂದ ಬಂದವರು. ಆ ತಂಡವನ್ನು ಚಲನಚಿತ್ರ ಸಂಸ್ಥೆ ಬರಮಾಡಿಕೊಂಡಿತ್ತು. ಹಾಡು, ನೃತ್ಯ, ಮಾತು, ಇತ್ಯಾದಿಗಳು ಮುಗಿಯುತ್ತಿದ್ದಂತೆ ಒಂದು ಗೂಂಡಾ ಪಡೆಯು ತಂಡದವರ ಮೇಲೆ ಹಲ್ಲೆ ನಡೆಸಿತು. "ನೀವು ನಕ್ಸಲರು, ಇಲ್ಲೇಕೆ ಬಂದಿರಿ ?" ಎಂದು ಗಲಾಟೆ ಎಬ್ಬಿಸಿದರು. ಆಗತಾನೆ ಡಾ॥ ಅಂಬೇಡ್ಕರ್ ಕುರಿತ ಆನಂದ ಪಟವರ್ಧನ್‌ರ ಡಾಕ್ಯುಮೆಂಟರಿ ಚಿತ್ರ ಪ್ರದರ್ಶನ ಗೊಂಡಿತ್ತು. ಕಬೀರ್ ಮಂಚದವರು ಸಿಟ್ಟಿಗೇಳಲಿಲ್ಲ, ತಮ್ಮ ಹಕ್ಕನ್ನು ಯಾರೂ ಮೊಟಕುಗೊಳಿಸುವಂತಿಲ್ಲವೆಂದು ಹೇಳಿದರು. ಗೂಂಡಾಪಡೆ ಯಾವುದೆಂದು 'ಹೊಸತು' ಓದುಗರಿಗೆ ಗೊತ್ತು. ಅದು ಕಬೀರ್ ಮಂಚದವರನ್ನು ಸುತ್ತುವರಿದಿತ್ತು. ಅದರ ಒಬ್ಬ 'ನಾಯಕ' ಹೇಳಿದ : "ಜೈ ನರೇಂದ್ರ ಮೋದಿ ಎಂದು ಘೋಷಿಸಿ, ಇಲ್ಲದಿದ್ದರೆ ನಿಮ್ಮ ಚಟ್ಟ ಖಚಿತ" ಎಂದು. ಮಂಚದವರು ಏನೇ ಆಗಲಿ ಹಾಗೆ ಘೋಷಿಸುವುದಿಲ್ಲವೆಂದರು. ಕೆಲವರಿಗೆ ಏಟು ಬಿತ್ತು. ಇಷ್ಟೆಲ್ಲಾ ನಡೆದಾಗ ಪೊಲೀಸರು ಅಲ್ಲೇ ಇದ್ದರು. ಗೂಂಡಾಗಳಿಗೆ ತಡೆಯೊಡ್ಡಲಿಲ್ಲ, ಹಲ್ಲೆಯ ನಂತರ ಅವರನ್ನು ಬಂಧಿಸಲಿಲ್ಲ. ಇದು ಕಾಂಗ್ರೆಸ್ ಸರ್ಕಾರವು ಶಿವಸೇನೆ – ವಿಶ್ವ ಹಿಂದು ಪರಿಷತ್ ಕಾರ್ಯಕರ್ತರನ್ನು ಬೆಳೆಸುವ ವಿಧಾನ. ಹಗ್ಗ ಸಡಿಲವಾಗಿ ಉದ್ದವಾಗುತ್ತಾ ಹೋಗುತ್ತದೆ, ಗೂಳಿಗಳ ಆರ್ಭಟ ಹೆಚ್ಚುತ್ತದೆ, ಹಿಂಸೆಯ ವಾತಾವರಣ ವರ್ಧಿಸುತ್ತದೆ. ಇದಕ್ಕೆ ಅನುವು ಮಾಡಿಕೊಡುವ ಕಾಂಗ್ರೆಸ್ ಪಕ್ಷವು ತಾನು "ಧರ್ಮನಿರಪೇಕ್ಷ", "ಪ್ರಜಾಪ್ರಭುತ್ವದ ರಕ್ಷಕ" ಎಂದು ಕೊಚ್ಚಿಕೊಳ್ಳುತ್ತದೆ. ಮೋದಿ ಯಾದರೇನು, ಚವಾನ್ ಆದರೇನು ! ಎಲ್ಲಾ ಕೊಳ್ಳೆ ಹೊಡೆಯುವವರ ಭಂಟರೇ !

✶ ✶ ✶

ದಾಭೋಳ್ಕರ್ ಹತ್ಯೆಯನ್ನು ಕುರಿತು ಪುಣೆಯ "ಸನಾತನ್ ಪ್ರಭಾತ್" ಎಂಬ ಪತ್ರಿಕೆಯು ಸಂಪಾದಕೀಯವೊಂದನ್ನು ಬರೆಯಿತು. ದಾಭೋಳ್ಕರ್‌ಗೆ ಬುದ್ಧಿ ಬರಲಿಲ್ಲ, ಬಾಯಿ ಮುಚ್ಚಲು ಕಲಿಯಲಿಲ್ಲ; 'ಮಾಡಿದ್ದುಣ್ಣೋ ಮಹರಾಯ' ಎಂಬಂತೆ ಆತನಿಗೆ ತಕ್ಕಶಾಸ್ತಿಯಾಯಿತು; ಈಗಲಾದರೂ ಆತನ ಜೊತೆಗಾರರು ಬುದ್ಧಿ ಕಲಿಯಲಿ, ಎಂದು. ಅದಕ್ಕೆ ದಾಭೋಳ್ಕರ್ ಜೊತೆ ಕೆಲಸ ಮಾಡುತ್ತಿದ್ದ ವಿಚಾರವಾದಿ ಸದಸ್ಯರು ಪ್ರತಿಕ್ರಿಯಿಸಿದ್ದು ಹೀಗೆ : "ಅವರು ಹೇಳುವುದನ್ನು ಹೇಳಲಿ, ನಾವು ಮಾಡುತ್ತಿರುವುದನ್ನು ಮಾಡಿಯೇ ಮಾಡುತ್ತಿರುತ್ತೇವೆ." ಇಂಥವರಿಗೆ ಮಹಾರಾಷ್ಟ್ರ ಸರ್ಕಾರವು ರಕ್ಷಣೆ ನೀಡದಿದ್ದರೆ ಅದು ಇರಬೇಕಾದರೂ ಏಕೆ ?

✶ ✶ ✶

ಮಹಾರಾಷ್ಟ್ರಕ್ಕಿಂತ ಕರ್ನಾಟಕವು ಕಡಿಮೆಯೆ ? ಇಲ್ಲಿ ಗಣಪತಿಯ ಸ್ವಯಂಘೋಷಿತ ರಕ್ಷಕರು "ಢುಂಢಿ" ಎಂಬ ಕಾದಂಬರಿಯನ್ನು ಬರೆದ ಶ್ರೀ. ಯೋಗೇಶ ಮಾಸ್ಟರ್ ಎಂಬುವವರನ್ನು ದಸ್ತಗಿರಿ ಮಾಡಿಸಿದರು. ಹಾಗೆ ಮಾಡಿಸುವಷ್ಟು ಪ್ರಭಾವ ಅವರಿಗಿರಲು ಕಾರಣ ಪೊಲೀಸರು ಅವರಿಗೆ ಮಣೆ ಹಾಕುವುದು. ಪುಸ್ತಕ ಬರೆದಿದ್ದಕ್ಕೆ ಈವರೆಗೆ ಯಾರನ್ನೂ ನಮ್ಮ ರಾಜ್ಯದಲ್ಲಿ ದಸ್ತಗಿರಿ ಮಾಡಿರಲಿಲ್ಲ; ಪುಸ್ತಕಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಪ್ರಸಂಗಗಳು ಮಾತ್ರವೇ ಜರುಗುತ್ತಿದುದು. ಹೊಸ ಕಾಂಗ್ರೆಸ್ ಸರ್ಕಾರದ ಪ್ರಶಸ್ತ ಬಳುವಳಿ ಇದು : ಕಾದಂಬರಿಯ ಲೇಖಕರೊಬ್ಬರನ್ನು ದಸ್ತಗಿರಿ ಮಾಡಿ ಜೈಲಿನಲ್ಲಿಡುವುದು, ಖಾಸಗಿ ಆರೋಪದ ಆಧಾರದ ಮೇಲೆ ಮೊಕದ್ದಮೆ ಹೂಡುವುದು. ಕಾದಂಬರಿ ಬಹಳ ಶ್ರೇಷ್ಠವೇ, ಇಲ್ಲವೇ, ಎಂಬುದು ಇಲ್ಲಿ ಪ್ರಸ್ತುತವಲ್ಲ. ಕರ್ತೃವು ಪ್ರಾಚೀನ ಸಾಂಸ್ಕೃತಿಕ ಇತಿಹಾಸವನ್ನು ಸ್ಪಷ್ಟವಾಗಿ ಗ್ರಹಿಸಿದ್ದಾರೆಯೇ, ಇಲ್ಲವೇ, ಎಂಬುದನ್ನು ವಾದಗಳ ಮುಖಾಂತರ ಎದುರಿಸಲು ಪ್ರಮೋದ ಮುತಾಲಿಕ್ ಮತ್ತು ಅವರ ಅನುಯಾಯಿಗಳಿಗೆ ಅಗತ್ಯ ಶೈಕ್ಷಣಿಕ ಹಿನ್ನೆಲೆ ಇಲ್ಲ. ಅವರಿಗೆ ಗೊತ್ತಿರುವುದು ಒಂದೇ ಅಸ್ತ್ರಪ್ರಯೋಗ : "ಅವರು ಬರೆದಿರುವುದು ನಮ್ಮ ಮನಸ್ಸಿಗೆ ನೋವುಂಟುಮಾಡಿದೆ, ಆದ್ದರಿಂದ ಅವರನ್ನು ಶಿಕ್ಷಿಸುತ್ತೇವೆ." ಗಣಪತಿಯು ಇವರಿಗೆಲ್ಲಾ ಗಟ್ಟಿಯಾದ ಮನಸ್ಸನ್ನು ಕರುಣಿಸಿಲ್ಲದಿರುವುದು ಶೋಚನೀಯ. ವಿಮರ್ಶೆಗಳ ಬಲದಿಂದ ಯೋಗೇಶರ ಕಾದಂಬರಿಯನ್ನು ತುಂಡರಿಸುವುದು ಶಕ್ಯವಿದ್ದರೆ ಹಾಗೆ ಮಾಡಬಹುದಿತ್ತು; ಅದು ನಾಗರಿಕ ಲಕ್ಷಣವಾಗುತ್ತಿತ್ತು. ನಮ್ಮ ಐದು ಸಾವಿರ ವರ್ಷಗಳ ನಾಗರಿಕತೆ ಮತ್ತು ಸಂಸ್ಕೃತಿ ನಮಗೆ ಅಂತಹ ಕನಿಷ್ಠ ಶಿಸ್ತನ್ನೂ ಕೊಡಮಾಡಲಿಲ್ಲವಲ್ಲ ಎಂದು ಖೇದವಾಗುತ್ತದೆ. ಮಾನ್ಯ ಲೇಖಕರು ಪ್ರಾಚೀನ ಗಣಗಳ ಚರಿತ್ರೆಯನ್ನು, ಅವುಗಳ ಲಕ್ಷಣಗಳನ್ನು, ಪ್ರತಿಪಾದಿಸುತ್ತಾ ಒಂದು ಬಗೆಯ ಕಲಸುಮೇಲೋಗರವನ್ನು ಉಣಬಡಿಸಿದ್ದಾರೆ. ಕೆಲವು ಸಂದರ್ಭಗಳಲ್ಲಿ ಔಚಿತ್ಯದ ಎಲ್ಲೆಯನ್ನು ದಾಟಿದರೇನೋ ಎಂಬ ಶಂಕೆ ಮೂಡುವಂತೆ ಚಿತ್ರಿಸಿರುವುದೂ ಉಂಟು. ಈಗ ಈ ಕೃತಿಯ ವಿಮರ್ಶೆಯನ್ನು ನ್ಯಾಯಾಲಯವು ಮಾಡಬೇಕಂತೆ ! ಅಲ್ಲಿಯ ವಿದ್ವಾಂಸರಿಗೆ ತಾನೆ ಭಾರತದ ಅತಿ ಪ್ರಾಚೀನ ಕಾಲಘಟ್ಟದ ಬುಡಕಟ್ಟು ಸಂರಚನೆಯ ಅರಿವಿರುತ್ತದೆಂಬ ಖಾತ್ರಿ ಏನಿದೆ ? ಪುಸ್ತಕವನ್ನು ಮಾರಾಟ ಮಾಡಕೂಡದೆಂಬ ಆಜ್ಞೆಯನ್ನು ನೀಡಿದ ನಂತರ ಲೇಖಕರ ದಸ್ತಗಿರಿ ಮಾಡಿದ್ದೇಕೆ, ಮೊಕದ್ದಮೆ ಹೂಡಿದ್ದೇಕೆ ? ಶ್ರೀ. ಯೋಗೇಶ್ ಅವರು "ಪ್ರತಿಷ್ಠಿತ ಲೇಖಕ" ಎಂಬ ಮಾನ್ಯತೆ ಪಡೆದಿಲ್ಲದಿರುವುದು ಅದಕ್ಕೆ ಸಮರ್ಥನೆಯೆಂದು ಶ್ರೀ. ಸಿದ್ದರಾಮಯ್ಯನವರ ಸರ್ಕಾರ ಭಾವಿಸಿದೆಯೆ ? ಅವರನ್ನು ಬಂಧಿಸಿದ್ದಕ್ಕೆ ಪಶ್ಚಾತ್ತಾಪವನ್ನು ವ್ಯಕ್ತಪಡಿಸಿ ನ್ಯಾಯಾಲಯದಲ್ಲಿ ಅವರ ಪರವಾಗಿ ಸರ್ಕಾರವೇ ಒಬ್ಬ ವಕೀಲರನ್ನು ನೇಮಿಸಿ

ಆಪಾದನೆ ಹೊರೆಸಿರುವವರ ಕ್ಷುಲ್ಲಕ ಕೃತ್ಯವನ್ನು ಬಹಿರಂಗಗೊಳಿಸಬೇಕು, ಯೋಗೇಶ್ ಅವರ ಘನತೆಯನ್ನು ಮುತಾಲಿಕ್ ಬಣಕ್ಕೆ ಧಾರೆಯೆರೆದು ಕೊಡಕೂಡದು. ಸಹಜವಾಗಿಯೇ ರಾಜ್ಯದ ಅಡ್ವೊಕೇಟ್ ಜನರಲ್ ಸನ್ಮಾನ್ಯ ಶ್ರೀ. ರವಿವರ್ಮ ಕುಮಾರ್ ಅವರ ಮಧ್ಯಪ್ರವೇಶ, ಸರ್ಕಾರಕ್ಕೆ ಬುದ್ಧಿಮಾತು, ಅತ್ಯಗತ್ಯವಾಗಿದೆ. ನಮ್ಮ ರಾಜ್ಯದಲ್ಲಿ ಯಾರು ಬೇಕಾದರೂ ಯೋಗೇಶ್ ಅವರನ್ನು ದಸ್ತಗಿರಿ ಮಾಡಿಸಿದಂತೆ ಇತರರನ್ನೂ ಮಾಡಿಸಬಹುದು. ಏಕೆಂದರೆ ಅವರ ತಾಳಕ್ಕೆ ತಕ್ಕಂತೆ ಕುಣಿಯದಿದ್ದವರು ಮಾತನಾಡಿದ್ದೆಲ್ಲಾ ಇವರ ಮನಸ್ಸನ್ನು ನೋಯಿಸುತ್ತದೆ! ಅವರಿಗೆ ಮನಸ್ಸೂ ಇದೆಯೆಂಬ ಭರವಸೆ ನೀಡುವವರು ಯಾರು?

ಈ ಪ್ರಸಂಗಗಳನ್ನು ನೋಡಿದರೆ ಹದಿನೆಂಟನೆಯ ಶತಮಾನದಲ್ಲಿ ಫ್ರಾನ್ಸಿನ ತತ್ವಶಾಸ್ತ್ರಜ್ಞ ದಿದೆರೊ ಹೇಳಿದ್ದ ಮಾತುಗಳು ನೆನಪಿಗೆ ಬರುತ್ತವೆ: "ಸುತ್ತಲಿನ ಕತ್ತಲಿಗೆ ಹೊಂದಿಕೊಂಡಿರುವ ಜನರಿಗೆ, ಅವರ ಕಡೆಗೆ ಬೆಳಕು ಒಂದು ಧಾಳಿಯಾಗಿ ಕಂಡುಬರುತ್ತದೆ. ಅಂಥವರ ಮೇಲೆ ಸತ್ಯದ ಬೆಳಕನ್ನು ಹರಿಸುವುದು ಗೂಬೆಯ ಗೂಡಿನೊಳಕ್ಕೆ ಸೂರ್ಯ ರಶ್ಮಿಯನ್ನು ಹರಿಬಿಟ್ಟಂತೆ. ಅದರ ಕಣ್ಣುಗಳು ಆ ಬೆಳಕಿನ ಪ್ರಖರತೆಯನ್ನು ತಾಳಲಾರದೆ ಅದು ಚೀರಾಡುತ್ತದೆ."

ಅದರ ಮತ್ತು ಅದರ ಸಂತತಿಯವರ ಚೀರಾಟಗಳಿಗೆ ತಲೆಬಾಗಬಾರದು. "ಜೈ ನರೇಂದ್ರ ಮೋದಿ" ಹೇಳಿಸಲು ದೊಣ್ಣೆ ಹಿಡಿದು ಬರುವವರು, "ಢುಂಢಿ" ಕಾದಂಬರಿಯನ್ನು ಪೂರ್ತಿ ಓದದೆಯೇ "ಮನಸ್ಸು ನೋಯಿಸಿಕೊಳ್ಳುವವರು" ಇನ್ನಾದರೂ ಸ್ವಲ್ಪ ಬೆಳಕಿನತ್ತ ಮುಖಮಾಡುವುದು ಆರೋಗ್ಯಕರ, ಸೂರ್ಯರಶ್ಮಿಯ ಸ್ಪರ್ಶವಿಲ್ಲದಿದ್ದರೆ ಅನಾರೋಗ್ಯ ಬೆಳೆಯುತ್ತದಂತೆ, ಅದಕ್ಕೆ 'ಡಿ–ವಿಟಮಿನ್' ಕೊಡಬೇಕಾಗುತ್ತದಂತೆ.

'ಢುಂಢಿ' ಕಾದಂಬರಿಯನ್ನು ನಾನು ಓದಿದೆ. ಅದರಲ್ಲಿ ಅಂಥ ಆಕ್ಷೇಪಾರ್ಹವಾದದ್ದೇನೂ ಕಾಣಲಿಲ್ಲ. ಗಣ, ಗಣಪತಿ ಕುರಿತಾಗಿ ಇತಿಹಾಸದ ಪ್ರಜ್ಞೆ ಇಲ್ಲದಿರುವವರು ಕಾದಂಬರಿಯನ್ನು ಅರ್ಥಮಾಡಿಕೊಂಡಿಲ್ಲ. ನಮ್ಮ ಇತಿಹಾಸದಲ್ಲಿ ಜನಸಮುದಾಯಗಳು ಎಂದರೆ ಗಣಗಳು ಅಸ್ತಿತ್ವದಲ್ಲಿದ್ದವು. ಅಂಥ ಗಣಗಳ ನಾಯಕ ಗಣಪತಿ. ಈ ಗಣಪತಿಗಳಿಗೂ ಧಾರ್ಮಿಕ ಕಲ್ಪನೆಯ ಮೂರ್ತಿಗೂ ಸಂಬಂಧವಿಲ್ಲ. ಈ ಸೂಕ್ಷ್ಮವನ್ನು ಅರಿಯದವರು ಹುಯಿಲೆಬ್ಬಿಸಿರುವುದರಲ್ಲಿ ಆಶ್ಚರ್ಯವೇನಿಲ್ಲ. 'ಢುಂಢಿ' ಅಂಥ ಘನಂದಾರಿ ಸಾಹಿತ್ಯ ಕೃತಿ ಏನಲ್ಲ. ಅದು ಸಂಶೋಧನಾ ಕೃತಿಯಂತೂ ಅಲ್ಲವೇ ಅಲ್ಲ. ಅದು ಲೇಖಕನ ಕಲ್ಪನೆಯ ಕೂಪ. ಅದನ್ನೂ ಮೌಲೀಕರಿಸುವ ಹಕ್ಕು ಓದುಗರು ಮತ್ತು ವಿಮರ್ಶಕರಿಗೆ ಬಿಟ್ಟರು. ಕೃತಿ ಒಳ್ಳೆಯದಾಗಿದ್ದರೆ ಓದುಗರ ಗಮನ ಸೆಳೆದರೆ ಅದು ಉಳಿದುಕೊಂಡು ಮರುಮುದ್ರಣಗೊಳ್ಳುತ್ತದೆ. ಇಲ್ಲದಿದ್ದರೆ ಮೂಲೆ ಗುಂಪಾಗುತ್ತದೆ. ಸರಕಾರದ ಪ್ರವೇಶಕ್ಕೆ ಅವಕಾಶವೇ ಇಲ್ಲ. ಸರಕಾರ ಇನ್ನಾದರೂ ಇಂಥ ವಿಷಯಗಳಲ್ಲಿ ತಲೆ ಹಾಕುವುದನ್ನೂ ನಿಲ್ಲಿಸಿದರೆ ಒಳ್ಳೆಯದು. ಇಲ್ಲದೇ ಹೋದಲ್ಲಿ ಸಾಹಿತ್ಯ ಕೃತಿಗಳ ರಚನೆಗೇ ಸಂಚಕಾರವಾಗುತ್ತದೆ. ಲೇಖಕನ ಸ್ವಾತಂತ್ರ್ಯದ ಹರಣವಾಗುತ್ತದೆ.

* * *

ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವುದಕ್ಕೆ, ಭದ್ರತೆಗೆ ಅಮೇರಿಕ ಎಂಥ ನೀಚಕೃತ್ಯ ಎಸಗುವುದಕ್ಕೂ ಹಿಂಜರಿಯುವುದಿಲ್ಲ. 'ವಿಕಿಲೀಕ್ಸ್' ಬಯಲಿಗೆಳೆದ ದಸ್ತಾವೇಜುಗಳು, ಈಚೆಗೆ ಸಿಐಎ ಸಂಸ್ಥೆಯಲ್ಲಿ (ಅಮೇರಿಕದ ಗೂಢಚರ್ಯೆ ಸಂಸ್ಥೆ) ಕೆಲಸ ಮಾಡುತ್ತಿದ್ದ ಸ್ನೋಡೆನ್ ಹೊರಗೆಡಹಿದ ಟೆಲಿಫೋನ್ ಕದ್ದಾಲಿಕೆ, ಇ–ಮೇಲ್, ಫೇಸ್‌ಬುಕ್ ಹಾಗೂ ಇತರ ವೈಯಕ್ತಿಕ ವ್ಯವಹಾರಗಳ ಮೇಲೆ ನಿಗಾ, ಇವು ಇಪ್ಪತ್ತೊಂದನೆ ಶತಮಾನದ ಪ್ರಕರಣಗಳು. ಗೂಢಚರ್ಯೆ ಸಂಸ್ಥೆಗಳು ಮುಖ್ಯವಾಗಿ ಅಮೇರಿಕದ ಸಿಐಎ, ಬ್ರಿಟನ್ನಿನ ಎಂ–೧೬, ಪಾಕಿಸ್ತಾನದ ಐಎಸ್ಐ, ಇಸ್ರೇಲಿನ ಮೊಸ್ಸಾದ್ ಮುಂತಾದುವು ನಡೆಸಿರುವ, ನಡೆಸುತ್ತಿರುವ ಹೀನಕೃತ್ಯಗಳಿಗೆ ಕೊನೆಯೇ ಇಲ್ಲ. ಭಾರತದ ಚಾಣಕ್ಯನ ಕಾಲದಿಂದ ಇಂಥ ಸಂಸ್ಥೆಗಳು ಹೀನಕೃತ್ಯ ಎಸಗುವುದಕ್ಕೇ ಹುಟ್ಟಿಕೊಂಡಂಥವು ಎಂದು ತೋರುತ್ತದೆ.

ಕಳೆದ ಶತಮಾನದಲ್ಲಿ, ಅದರಲ್ಲೂ ಶೀತಯುದ್ಧದ ಕಾಲದಲ್ಲಿ ಅಮೇರಿಕದ ಸಿಐಎ ನಡೆಸಿರುವ ಅತ್ಯಾಚಾರಗಳಿಗೆ ಸಾಟಿಯೇ ಇಲ್ಲ. ತನ್ನ ಹಿತಾಸಕ್ತಿಗೆ ಅಡ್ಡಬರುವಂಥ ರಾಜಕಾರಣಿಗಳ ಹತ್ಯೆಯಿಂದ ಹಿಡಿದು, ತನಗೆ ಪ್ರತಿಕೂಲವಾಗಿರುವ ಅನ್ಯದೇಶಗಳ ಸರಕಾರಗಳನ್ನು ಉರುಳಿಸುವುದು, ಅವುಗಳ ವಿರುದ್ಧ ಜನರನ್ನು ಎತ್ತಿಕಟ್ಟುವುದು, ಅಂತರ್ಯುದ್ಧ ಪರಿಸ್ಥಿತಿ ಉಂಟುಮಾಡಿ, ದುರಾಕ್ರಮಣ ನಡೆಸುವುದು ಇವೆಲ್ಲ ಅಮೇರಿಕದ ಆಡಳಿತಾಧಿಕಾರಿಗಳಿಗೆ ಕರಗತವಾಗಿರುವ ತಂತ್ರ. ಅನ್ಯದೇಶಗಳಲ್ಲಷ್ಟೇ ಅಲ್ಲ, ಅಮೇರಿಕದಲ್ಲೇ ಸಿಐಎ, ಎಫ್‌ಬಿಐಗಳು ಸಂಶಯಾತ್ಮಕರು ಎಂದು ಪರಿಗಣಿತರಾಗುವ ವ್ಯಕ್ತಿಗಳನ್ನು ನಾಪತ್ತೆಯಾಗಿಸುತ್ತವೆ. ಅಮೇರಿಕದ ಅಧ್ಯಕ್ಷ ಕೆನ್ನಡಿ ಹಾಗೂ ಅವರ ಸೋದರನ ಕೊಲೆ ಮಾಡಿದವರು ಯಾರು ಎಂಬುದು ಈಗಲೂ ನಿಗೂಢ. ಮುಂದೆ ಎಂದಾದರೂ ಈ ರಹಸ್ಯ ಭೇದ್ಯವಾದೀತು.

ಇರಲಿ, ಈಗ ಹೇಳಹೊರಟಿರುವುದು ಬೇರೆಯೇ ಸಂಗತಿ. ಒಂದೊಂದಾಗಿ ಸಿಐಎ ಕಣಜದಿಂದ ರಹಸ್ಯಗಳು ಹೊರಬರುತ್ತಿವೆ. ಅರವತ್ತು ವರ್ಷಗಳಾದ ಮೇಲೆ, ಇರಾನಿನಲ್ಲಿ ಮೊಸಾದೆಕ್ ಸರಕಾರವನ್ನು ಪದಚ್ಯುತಗೊಳಿಸುವುದರಲ್ಲಿ ಸಿಐಎ ತನ್ನ ಕೈವಾಡ ಇತ್ತೆಂಬುದನ್ನು ಒಪ್ಪಿಕೊಂಡಿದೆ. ಇದಕ್ಕೆ ಸಂಬಂಧಪಟ್ಟ ಡಾಕ್ಯುಮೆಂಟುಗಳು ಈಗ ಬಹಿರಂಗ ಗೊಂಡಿವೆ. ಬ್ರಿಟಿಷ್ ಸರಕಾರ ಈ ಡಾಕ್ಯುಮೆಂಟುಗಳ ಬಿಡುಗಡೆಯನ್ನು ತಡೆಹಿಡಿಯಲು ಪ್ರಯತ್ನಿಸಿದರೂ ಸಫಲವಾಗಲಿಲ್ಲ, ಮುಂದೆ ಯಾವಾಗಲಾದರೂ ಡಾಗ್ ಹ್ಯಾಮರ್ಷೀಲ್ಡ್, ಚಿಲಿಯ ಅಲೆಂದೆ ಮೊದಲಾದವರ ಕೊಲೆ ಹಾಗೂ ಫೀಡಲ್ ಕ್ಯಾಸ್ಟ್ರೋ ಹತ್ಯೆ ಪ್ರಯತ್ನಗಳು, ಮತ್ತಿತರ ರಾಜಕೀಯ ನಾಯಕರುಗಳ ಕೊಲೆ ಸಂಚು ಬಯಲಾದೀತು. ಇವೆಲ್ಲದರಲ್ಲೂ ಸಿಐಎ ಪಾತಕವಿದೆ.

ಇರಾನಿನಲ್ಲಿ ಅರಸೊತ್ತಿಗೆಯನ್ನು ಪದಚ್ಯುತಗೊಳಿಸಿದ ಮೇಲೆ ನಡೆದ ಚುನಾವಣೆಗಳಲ್ಲಿ ಬಹುಮತ ಗಳಿಸಿ ಅಧಿಕಾರ ವಹಿಸಿಕೊಂಡ ಸರಕಾರದ ಪ್ರಧಾನ ಮಂತ್ರಿ ಮಹಮದ್ ಮೊಸಾದೆಕ್. ೧೯೫೩ರಲ್ಲಿ ಈತ ಮಾಡಿದ ದೊಡ್ಡ ಅಪರಾಧ ಎಂದರೆ ವಿದೇಶೀ ಪೆಟ್ರೋಲಿಯಮ್ ಕಂಪೆನಿಗಳನ್ನು, ಮುಖ್ಯವಾಗಿ ಬ್ರಿಟಿಷ್‌ರಿಗೆ ಸೇರಿದ್ದ ಬ್ರಿಟಿಷ್ ಪೆಟ್ರೋಲಿಯಮ್ ಕಂಪೆನಿಯನ್ನು ದೇಶದ ಹಿತದೃಷ್ಟಿಯಿಂದ ರಾಷ್ಟ್ರೀಕರಣ ಮಾಡಿದ್ದು, ಆಗ ಅಮೇರಿಕದಲ್ಲಿ ಅಧಿಕಾರದಲ್ಲಿದ್ದುದು ಜನರಲ್ ಐಸೆನ್‌ಹೋವರ್. ಮೊಸಾದೆಕ್ ಸರಕಾರವನ್ನು ಪದಚ್ಯುತಗೊಳಿಸಿ ಅಮೇರಿಕದಲ್ಲಿ ತಲೆಮರೆಸಿಕೊಂಡಿದ್ದ ಅರಸ್ ಷಾನನ್ನು ಅಧಿಕಾರದಲ್ಲಿ ಕುಳ್ಳಿರಿಸಲಾಯಿತು. ಮುಂದಿನ ೨೬ ವರ್ಷಗಳು ನಿರಾತಂಕವಾಗಿತ್ತು. ೧೯೭೯ರಲ್ಲಿ ಇಸ್ಲಾಮಿಕ್ ಕ್ರಾಂತಿಯಾಗಿ ಷಾ ಸರಕಾರ ಹೋದಮೇಲೆ ಅಮೇರಿಕ ಬ್ರಿಟನ್‌ಗಳಿಗೆ ಈಗ ಮತ್ತೆ ತಲೆನೋವು. ಇರಾನಿನ ವಿರುದ್ಧವಾಗಿ ಅವು ಕತ್ತಿ ಮಸೆಯುತ್ತಿವೆ ಈಗ.

* * *

ಮುಂಬರುವ ಚುನಾವಣೆಗಳ ಲೆಕ್ಕಾಚಾರ ಎಲ್ಲ ಪಕ್ಷಗಳಲ್ಲೂ ಪ್ರಾರಂಭವಾಗಿದೆ ಈಗಲೇ. ಇದು ಸಹಜವಾದ್ದೆ ಅನ್ನಿ. ನಮ್ಮ ರಾಜ್ಯದಲ್ಲಿ ವಿರೋಧ ಪಕ್ಷದ ಸ್ಥಾನದಲ್ಲಿರುವ ಜೆಡಿಎಸ್ ಮೊನ್ನೆ ನಡೆದ ಉಪ ಚುನಾವಣೆಗಳಲ್ಲಿ ಅನುಭವಿಸಿದ ಸೋಲಿನಿಂದ ಚೇತರಿಸಿಕೊಂಡಿಲ್ಲ. ಪಕ್ಷದಲ್ಲಿ ತಳಮಳ ಇನ್ನೂ ಹೋಗಿಲ್ಲ. ಅಧ್ಯಕ್ಷ ಸ್ಥಾನವನ್ನೂ ತ್ಯಜಿಸಿದ ಕುಮಾರಸ್ವಾಮಿಗೆ ವಿಪಕ್ಷದ ನಾಯಕನ ಸ್ಥಾನವೂ ಅಲುಗಾಡುತ್ತಿದೆ. ಪಕ್ಷದ ಒಬ್ಬ ಸದಸ್ಯ ಹೋದರೂ ಸ್ಥಾನ ಕಳೆದುಕೊಳ್ಳುತ್ತಾರೆ. ಭಾಜಪದ ಬಾಗಿಲು ಬಡಿಯುತ್ತಿರುವ ಯಡಿಯೂರಪ್ಪ ಸಫಲನಾದರೂ ಸ್ಥಾನಕ್ಕೆ ಮುಳುವು ಇದ್ದೇ ಇದೆ. ಯಡಿಯೂರಪ್ಪ ಮೋದಿಗೆ ಜೈಕಾರ ಹಾಕಿದ್ದಾರೆ. ತಮ್ಮ ಕೆಜೆಪಿಯ ಪೂರ್ಣ ಬೆಂಬಲವನ್ನು ಪ್ರಕಟಿಸಿದ್ದಾರೆ. ಎನ್‌ಡಿಎ ಸರಕಾರವೇನಾದರೂ ಬಂದರೆ ತಮಗೂ ಏನಾದರೂ ಸ್ಥಾನ ದೊರೆತೀತೆಂಬ ಹಂಬಲ ಇರಬಹುದು. ಅದಕ್ಕೇ ಯಡಿಯೂರಪ್ಪ ಈಶ್ವರಪ್ಪನ ಜೊತೆ ಕೈ ಜೋಡಿಸುತ್ತಿದ್ದಾರೆ. ರಾಜಕೀಯದಲ್ಲಿ ಏನು ಬೇಕಾದರೂ ಆಗಬಹುದು ತಾನೆ. ಜೆಡಿಎಸ್ ಪಾರ್ಲಿಮೆಂಟ್ ಚುನಾವಣೆಗಳಲ್ಲಿ ಹತ್ತು ಹದಿನೈದು ಸ್ಥಾನಗಳನ್ನು ಗಳಿಸುವ ಕನಸು ಕಾಣುತ್ತಿದೆ. ಹಾಗೆ ನೋಡಿದರೆ ಭಾಜಪ ಮತ್ತು ಕಾಂಗ್ರೆಸ್‌ಗಳು ತಲಾ ಹತ್ತೊಂಬತ್ತು ಇಪ್ಪತ್ತು ಸ್ಥಾನಗಳನ್ನು ಪಡೆದುಕೊಳ್ಳುವ ಸನ್ನಾಹದಲ್ಲಿವೆ. ಹಾಗಿದ್ದರೆ ಕರ್ನಾಟಕದಲ್ಲಿ ಬಿಟ್ಟಿರುವ ಪಾರ್ಲಿಮೆಂಟರಿ ಸೀಟುಗಳು ಎಷ್ಟು? ದೇವೇಗೌಡರು ತೃತೀಯ ರಂಗವೇನಾದರೂ ಸರಕಾರ ರಚಿಸುವ ಸಾಧ್ಯತೆ ಇದ್ದರೆ ತಾನು ಮತ್ತೆ ಪ್ರಧಾನಿಯಾದೇನು ಎಂದುಕೊಂಡಿದ್ದಾರೆ. ಉಗ್ರ ಹಿಂದುತ್ವದ ಬೆನ್ನೇರಿರುವ ಮೋದಿ ಪ್ರಧಾನಿ ಪಟ್ಟ ತನಗೇ ಎಂದು ಎಗರಾಡುತ್ತಿದ್ದಾರೆ. ಮಾಧ್ಯಮಗಳಂತೂ ಮೋದಿ ಹಿಂದೆ ಬಿದ್ದಿವೆ. ಭಾಜಪದ ವರಿಷ್ಠರಲ್ಲಿ ಏನೇ ಅಸಮಾಧಾನಗಳಿದ್ದರೂ ಆರೆಸ್ಸೆಸ್ ಮತ್ತು ವಿಎಚ್‌ಪಿಗಳಿಗೆ ತೃಪ್ತಿ. ಅಂತೂ ಯಾವ ಲೆಕ್ಕಾಚಾರ ಬುಡಮೇಲಾಗುವುದೋ ನೋಡಬೇಕು.




### ಪ್ರತಿಕ್ರಿಯೆಗೆ ಉತ್ತರ

‘ಹೊಸತು’ವಿನ ಜುಲೈ ೨೦೧೩ರ ಸಂಚಿಕೆಯ ನನ್ನ ಲೇಖನಕ್ಕೆ ಪ್ರತಿಕ್ರಿಯೆಯಾಗಿ ಮಾನ್ಯ ಶ್ರೀ ಗಿರೀಶ್ ವಿ. ವಾಘ್‌ರವರು ಆಗಸ್ಟ್ ಸಂಚಿಕೆಯಲ್ಲಿ ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾ, “ಸಿಎಸ್‌ಎಲ್‌ಸಿ ಸಂಶೋಧಕರ ವಿಚಾರಗಳನ್ನು ಆಧುನಿಕೋತ್ತರ ವಾದಗಳೊಂದಿಗೆ ಸಮೀಕರಿಸಿ ಅವುಗಳನ್ನು ತಿರುಚಿದ್ದಾರೆ ... ಜಾತಿಪದ್ಧತಿ ಬಗ್ಗೆ ... ಆಂದೋಲನಗಳು ವಿಫಲವಾಗಿರುವುದಕ್ಕೆ ... ವೈಚಾರಿಕ ಧೋರಣೆಗಳಲ್ಲಿರುವ ... ತಪ್ಪುಗಳನ್ನು ... ಲೇಖನದಲ್ಲಿ ... ವಿಮರ್ಶಿಸಿಲ್ಲ” ಎಂದಿದ್ದಾರೆ.

ಮೊದಲನೆಯದಾಗಿ, ಸಿಎಸ್‌ಎಲ್‌ಸಿ ಚಿಂತನಾ ಕ್ರಮದ ವಿವರಗಳನ್ನು ಸಮಗ್ರವಾಗಿ ವಿಶ್ಲೇಷಿಸಲು ಪ್ರಮಾಣದ ದೃಷ್ಟಿಯಿಂದ ನನ್ನ ಲೇಖನಕ್ಕೆ ಅವಕಾಶ ಕಡಿಮೆ. ಹೀಗಾಗಿ ಅದರ ಒಟ್ಟಾರೆ ಸಾರಾಂಶವನ್ನು ಗ್ರಹಿಸಬೇಕಾಗಿದೆ. “ಶೇ. ೦.೩ರಷ್ಟು” ವಾದವನ್ನು ಕನ್ನಡದ ಚಿಂತನಾ ಲೋಕ ಎಳೆಎಳೆಯಾಗಿ ಹರಿದು ವಿಮರ್ಶಿಸಿರುವುದನ್ನು ನಾನು ಪುನರಾವರ್ತಿಸುವ ಕೆಲಸ ಮಾಡಿಲ್ಲ. ಜಾತಿಪದ್ಧತಿಯ ‘ವಿರುದ್ಧ’ (ವಿರುದ್ಧ– ಎಂದು ಕರೆಯಲೂ ಗಿರೀಶ್ ಅವರಿಗೆ ಯಾಕೋ ಮನಸು ಬಂದಿಲ್ಲ) ಶತಮಾನಕ್ಕೂ ಹೆಚ್ಚಿನ ಆಂದೋಲನಗಳು ವಿಫಲವಾಗಿವೆ ಎಂದು ಸಾರಾ ಸಗಟಾಗಿ ಸರ್ಟಿಫಿಕೇಟ್ ನೀಡುವ ಚಿಂತನಾಕ್ರಮದ ಮೂಲದ್ದೇ ಇಲ್ಲಿನ ಪ್ರಶ್ನೆ. ಜಾತಿಪದ್ಧತಿಯನ್ನು ಗ್ರಹಿಸುವ ವಿಚಾರದಲ್ಲಿ ಏಕಮೇವ ವಾದ ಇಲ್ಲದಿರಬಹುದು. ಹಾಗೆಂದು ಜಾತಿಪದ್ಧತಿಯೇ ಇಲ್ಲವೆಂದು ಯಾವುದೇ ‘ವಾದ’ ವಾದಿಸಿಲ್ಲ. ಜಾತಿಪದ್ಧತಿಯು ಶೇ. ೧೦೦ರಷ್ಟು ನಾಶ ಆಗದಿರಬಹುದು. ಆದರೆ ಆಂದೋಲನಗಳಿಂದ ಅದು ಅಲುಗಾಡಿಲ್ಲ ಎಂದು ಹೇಳಲಾದೀತೆ? ಈ ಶೇ. ೦.೩ರ ವಾದದ ಹಿಂದಿನ ಹೂರಣವಾದರೂ ಎಂತಹುದು?

ಜಾತಿಪದ್ಧತಿಯು ಕೇವಲ ಸಾಮಾಜಿಕ, ಸಾಂಸ್ಕೃತಿಕ ದೌರ್ಜನ್ಯದ ಸಮಸ್ಯೆ ಮಾತ್ರವಲ್ಲ. ಅದು ಆರ್ಥಿಕ ಮತ್ತು ರಾಜಕೀಯ ಶೋಷಣೆಯ ಅಸ್ತ್ರವೂ ಆಗಿದೆ. ಆಳುವ ವರ್ಗಗಳು ಕಾಲಕಾಲಕ್ಕೆ ಅವುಗಳ ಪೋಷಣೆ ಮಾಡಿರುವುದನ್ನು, ಯಥಾಸ್ಥಿತಿ ಕಾಯ್ದುಕೊಳ್ಳಲು ಹೆಣಗಾಡಿರುವುದನ್ನು ಮತ್ತು ಈಗಲೂ ಹೆಣಗಾಡುತ್ತಿರುವುದನ್ನು ಯಾರಿಗಾದರೂ ತಿಳಿಯದ ವಿಚಾರವೆಂದು ಹೇಳಲಾಗದು. ಆಳುವ ವರ್ಗಗಳು ಕಾಲಕಾಲಕ್ಕೆ ದೌರ್ಜನ್ಯದ ಮತ್ತು ಶೋಷಣೆಯ ಆಯುಧಗಳನ್ನು ಅಪ್‌ಡೇಟ್ ಮಾಡಿಕೊಂಡಿವೆ. ಈಗಲೂ ಜಾಗತೀಕರಣದ ಹಿನ್ನೆಲೆಯಲ್ಲಿ ಅದನ್ನೇ ಮಾಡುತ್ತಿವೆ. ಅದಕ್ಕಾಗಿಯೇ ಆಧುನಿಕೋತ್ತರ ವಾದವನ್ನು ಹುಟ್ಟಿಸಿವೆ ಮತ್ತು ಅದರ ಸಹಾಯವನ್ನು ಪಡೆದುಕೊಳ್ಳುತ್ತಿವೆ. ಇದಕ್ಕಾಗಿ ಅಸಂಖ್ಯಾತ ಎನ್‌ಜಿಓಗಳು, ಸಂಶೋಧನಾ ಸಂಸ್ಥೆಗಳು ಮತ್ತು ಸಂಶೋಧನೆಗಳಿಗೆ ಅಪಾರ ಹಣ ಸುರಿಯುತ್ತಿವೆ. ಸಿಎಸ್‌ಎಲ್‌ಸಿ ವಾದವು ಮೇಲ್ನೋಟಕ್ಕೆ ಪಾಶ್ಚಿಮಾತ್ಯ–ವಿರೋಧಿ ಅಥವಾ ವಸಾಹತು–ವಿರೋಧಿ ನೆಲೆಗಟ್ಟನ್ನು ಪ್ರತಿಪಾದಿಸಿದರೂ ಅದು ಕೇವಲ ಶಬ್ದಗಳ ಒಣಾಡಂಬರವಷ್ಟೆ. ಅದರ ಹೊಟ್ಟೆ ಬಗೆದರೆ ಕಾಣುವುದು, ಬಂಡವಾಳಶಾಹಿ ಜಾಗತೀಕರಣದ ‘ಪಾಶ್ಚಿಮಾತ್ಯ’ದ ಶಿಶುವನ್ನಷ್ಟೆ ಎಂದು ನಾನು ಹೇಳಲು ಪ್ರಯತ್ನಿಸಿದ್ದೇನೆ. ಇಂತಹ ಸಮೀಕರಣದ ಸೈದ್ಧಾಂತಿಕ ಆಳ–ಅಗಲಗಳನ್ನು ಅರಿಯಲು ಸಹಾಯವಾಗುವ ಆಯುಧವಾಗಿ ಪ್ರೊ॥ ಐಜಾಜ್ ಅಹ್ಮದ್‌ರ ಪುಸ್ತಕದ ಬಗ್ಗೆ ಪ್ರಸ್ತಾಪಿಸಿದ್ದೇನೆ ಅಷ್ಟೆ.

ಆಧುನಿಕೋತ್ತರವಾದಗಳೆಲ್ಲವೂ ಯೂರೋ–ಅಮೇರಿಕನ್ ಸಾಮ್ರಾಜ್ಯಶಾಹಿಗಳ ಪ್ರಯೋಜಕತ್ವದಲ್ಲಿ ಸೃಷ್ಟಿಯಾದ ವಿಚಾರಗಳೆಂದು ಜರೆದಿದ್ದೇನೆಂದು ಗಿರೀಶ್‌ರವರು ಹೇಳಿದ್ದಾರೆ. ಅವರು ಒಂದಂಶವನ್ನು ಗಮನಿಸಬೇಕು: ಬಂಡವಾಳಶಾಹಿ ಜಾಗತೀಕರಣದ ಮೂಲ ಪ್ರೇರಕ ಶಕ್ತಿಗಳು ಜಾಗತಿಕ ಹಣಕಾಸು ಬಂಡವಾಳದಾರರು. ಅವರ ಹಿತವೇ ಇದರಲ್ಲಿ ಪ್ರಧಾನವಾದುದು. ಹಾಗೆಂದು ಇದರ ಫಲಾನುಭವಿ




ಗಳು ಅವರು ಮಾತ್ರವಲ್ಲ. ನಮ್ಮ ದೇಶದ ಬಂಡವಾಳದಾರರು, ನಮ್ಮೂರಿನ ಶ್ರೀಮಂತ ಜಮೀನ್ದಾರಿ ವರ್ಗಗಳೂ ಫಲಾನುಭವಿಗಳೇ. ಇದೊಂದು ರೀತಿಯ ಜಾಗತೀಕರಣದ ಶೋಷಣೆ ಮತ್ತು ಜಾತಿ ದಮನ ಎರಡರ ಮಿಶ್ರಣ. ಈಗಿನ ಜಾಗತೀಕರಣದ ಶೋಷಣೆಯ ವಿರುದ್ಧ ಜನರ ಪ್ರತಿರೋಧ ಸಹಜವಾಗಿಯೇ ಎರಡರ ವಿರುದ್ಧವೂ ಇರಬೇಕಾಗುತ್ತದೆ. ಇದನ್ನು ಇಲ್ಲದ ಹಾಗೆ ಮಾಡುವ ಪ್ರಯತ್ನದ ಒಂದಂಶವೇ ಆಧುನಿಕೋತ್ತರವಾದ. ಜಾತಿಪದ್ಧತಿ ಎಂಬುದೇ ಒಂದು ಮಿಥ್ಯೆ, ವಚನಗಳು ಜಾತಿಪದ್ಧತಿ ವಿರೋಧಿಯಲ್ಲ ಎಂಬ ‘ಗಂಭೀರ ಸಂಶೋಧನೆಯ’ ಹಿಂದಿನ ಸಂಬಂಧವನ್ನು ಈ ಹಿನ್ನೆಲೆಯಲ್ಲೇ ಕಂಡುಕೊಳ್ಳಬೇಕಾಗಿದೆ. ಕೆಲವರಿಗೆ ಈ ಸಂಬಂಧ ಗೊತ್ತಿಲ್ಲದಿರಬಹುದು. ಹಾಗೆಂದು ಸಂಬಂಧವಿಲ್ಲವೆನ್ನಲಾದೀತೆ? ಸಿಎಸ್‌ಎಲ್‌ಸಿಗೆ ಬೆಲ್ಜಿಯಂ ಹಣ ಬರುತ್ತಿಲ್ಲವೆಂದು ಗಿರೀಶ್‌ರವರು ಬಹುಶಃ ವಾದಿಸಲಾರರು ಎಂದುಕೊಳ್ಳುತ್ತೇನೆ.

ಈ ಮೂಲಭೂತ ಅಂಶಗಳ ಬಗ್ಗೆ ಗಮನ ಹರಿಸಿದರೆ, ‘ಕಟ್ಟರ್ ಕಮ್ಯುನಿಸ್ಟ್’ ಇತ್ಯಾದಿ ಬಂಡವಾಳಶಾಹಿ ‘ಪಾಶ್ಚಾತ್ಯ’ ಸೃಷ್ಟಿಯ ಭೀತಿಗಳಿಂದ ಹೊರಬರಲು ಗಿರೀಶ್‌ರವರಿಗೆ ಸಹಾಯವಾಗಬಹುದು.

*ಬೆಂಗಳೂರು* **ಪ್ರಕಾಶ್ ಕೆ.**

ಆಗಸ್ಟ್ ಸಂಚಿಕೆಯ ‘ಈ ತಿಂಗಳು’ ಶೀರ್ಷಿಕೆಯಲ್ಲಿ ಭೂ ಕಬಳಿಕೆಯ ವಿಚಾರವಿದೆ. ನನಗೆ ತಿಳಿದಿರುವ ಪ್ರಸಂಗ **ಹೊಸತು**ವಿನ ಓದುಗರೊಂದಿಗೆ ಹಂಚಿಕೊಳ್ಳಬಯಸುತ್ತೇನೆ.

ಬೆಂಗಳೂರು ನಗರದ ಸದಾಶಿವನಗರದಲ್ಲೊಂದು ೪೦ ವರ್ಷದಿಂದ ನಡೆಯುತ್ತಿರುವ ಜನತಾ ಬಜಾರ್ ಇದೆ. ಇಲ್ಲಿ ರಾಗಿ, ಅಕ್ಕಿ, ಎಣ್ಣೆ, ಹಿಟ್ಟು, ಈರುಳ್ಳಿ, ಪೆನ್ಸಿಲ್ಲು, ನೋಟ್ ಬುಕ್, ಸೋಪು, ಕರ್ಪೂರ, ಕಾಫಿಪುಡಿ, ಪಾತ್ರೆ, ಬಲ್ಬು, ಬಕೆಟ್ಟು, ಪೊರಕೆ, ಚಪ್ಪಲಿ, ಕಾಲೊರಸುವ ತೆಂಗಿನ ನಾರಿನ ಚಾಪೆ ಇತ್ಯಾದಿ ಎಲ್ಲಾ ಸರಕುಗಳೂ ದೊರೆಯುತ್ತವೆ. ಸಾವಿರಾರು ಜನ ತಿಂಗಳ ಸಾಮಾನೆಲ್ಲ ಒಂದು ಕಡೆ ಸಿಗುವುದರಿಂದ ತಮ್ಮ ಅವಶ್ಯಕತೆಗಳೆಲ್ಲವನ್ನೂ ಒಟ್ಟಿಗೆ ಕೊಳ್ಳುತ್ತಾರೆ. ಪಕ್ಕದಲ್ಲೇ ಪಾರ್ಕು, ಆಟದ ಮೈದಾನ, ದೇವಸ್ಥಾನ, ಪೂರ್ಣಪ್ರಜ್ಞ ಶಾಲೆ ಇರುವುದರಿಂದ ಎಲ್ಲಾ ತರಹದಲ್ಲೂ ಜನರಿಗೆ ಅನುಕೂಲವಾಗಿದೆ. ಬಸ್ ಸ್ಟಾಪು, ಆಟೋಗಳು ಕೂಡ ಹತ್ತಿರ.

ಇದು ಇರುವುದು ನಾಗರಿಕ ಸೌಲಭ್ಯಕ್ಕೆಂದು ಸಿಐಟಿಬಿ ನಕ್ಷೆಯಲ್ಲಿ ಮೀಸಲಾಗಿಟ್ಟ ಸಿಎ ಜಾಗದಲ್ಲಿ. ಇದರ ಮೇಲೆ ಇಲ್ಲಿ ಕೆಲವು ವರಿಷ್ಠರ ದೃಷ್ಟಿ ಬಿದ್ದಿದೆ. ಮೂರು ವರ್ಷಗಳ ಹಿಂದೆ ಸ್ಥಳೀಯ ನಾಗರಿಕ ಕ್ಷೇಮಾಭಿವೃದ್ಧಿ ಸಂಘದ ವಾರ್ಷಿಕ ವರದಿಯಲ್ಲಿ ಸಣ್ಣ ಅಕ್ಷರಗಳಲ್ಲಿ “ಜನತಾ ಬಜಾರ್ ಕಟ್ಟಡ ಒಡೆಯುವುದಕ್ಕೆ ಶಾಸಕರ ಅಸ್ತು” ಎಂದು ಹಾಕಿತ್ತು. ನಾನು ಇದನ್ನು ತಿಳಿಯಲು ಶಾಸಕರೊಂದಿಗೆ ದೂರವಾಣಿಯಲ್ಲಿ ಮಾತಾಡಿದಾಗ ‘ನಿಮ್ಮ ಏರಿಯ ಡಲ್ಲೂರಿ. ನಾನು ಒಳ್ಳೆ ಮಾಡರ್ನ್ ಬಿಲ್ಡಿಂಗ್ ಕಟ್ಟಿಸ್ತೀನಿ’ ಎಂದರು. ನಮ್ಮ ಅನುಕೂಲದ ಬಗ್ಗೆ ವೀಡಿಯೊ ಪಾರ್ಲರ್, ಹತ್ತು ಹಾಸಿಗೆಯ ಆಸ್ಪತ್ರೆ, ಯೂತ್ ಸೆಂಟರ್, ಪಾರ್ಕಿಂಗ್ ಲಾಟ್ ಕಟ್ಟಿಸುತ್ತೇನೆ. ನಿಮಗೆ ವಯಸ್ಸಾಗಿದೆ. ಅಭಿವೃದ್ಧಿ ಬೇಡ. ಯುವಕರಿಗೆ ಬೇಕು. ಡೆಮಾಲಿಶನ್‌ಗೆ ಆರ್ಡರ್ ಕೊಟ್ಟಿದ್ದೇನೆ ಎಂದರು.

ಇನ್ನೂರಕ್ಕೂ ಹೆಚ್ಚು ಗ್ರಾಹಕರ ಸಹಿ ಇರುವ, ನಮಗೆ ಜನತಾ ಬಜಾರ್ ಅಗತ್ಯವಿರುವ ಬಗ್ಗೆ ಬರೆದ ಪತ್ರವೊಂದು ಸರ್ಕಾರದಿಂದ ತಡೆ ಆಜ್ಞೆ ತಂದಿತು.

ಈಗ ೨೬ನೇ ಜುಲೈಯಲ್ಲಿ ನಡೆದ ಸಭೆಯಲ್ಲಿ ‘ಡಿಸೆಂಬರ್‌ನಲ್ಲಿ ಡೆಮಾಲಿಷನ್‌ಗೆ ಆರ್ಡರ್ ಕೊಟ್ಟಿದ್ದೇನೆ’ ಎಂದು ಹೇಳಿದರು. ಇಲ್ಲಿ ಬೇರೆ ಯಾವ ದಿನಸಿ ಅಂಗಡಿಯೂ ಇಲ್ಲ, ರಸ್ತೆ ದಾಟಿ ಬೇರೆ ಕಡೆಗೆ ಹೋಗುವುದು ಯಮಸಾಹಸ ಎಂದು ನಾನು ಹೇಳಿದ್ದಕ್ಕೆ ‘ಜನತಾ ಬಜಾರ್ ಓಬಿರಾಯನ ಕಾಲದ್ದು. ಈಗ ಫುಡ್ ವರ್ಲ್ಡ್, ನೇಚರ್ ಬ್ಯಾಸ್ಕೆಟ್ ಇವೆಲ್ಲಾ ಬೇಕಾದಷ್ಟಿದೆ’ ಎಂದರು.

ಈ ಎಲ್ಲ ‘ಅಭಿವೃದ್ಧಿ’ಯ ಹಪಹಪದ ಹಿಂದಿರುವುದು ಬೇರೆಯದೇ ಸಮಾಚಾರ. ನಾಗರಿಕ

ಸೌಲಭ್ಯಕ್ಕೆಂದು ಮೀಸಲಾದ, ಇದೇ ರಸ್ತೆಯ, ಇನ್ನೊಂದು ನಿವೇಶನದಲ್ಲಿ ಕ್ಲಬ್ ಇದೆ. ಕ್ಷೇಮಾಭಿವೃದ್ಧಿ ಸಂಘದ ಹೆಸರಿನಲ್ಲಿ ತೆಗೆದುಕೊಂಡು ಈ ಜಾಗದಲ್ಲಿ ಕ್ಲಬ್ ಕಟ್ಟಡ ಕಟ್ಟಿದ್ದಾರೆ. ಇಲ್ಲಿರುವ ಅನೇಕ ಆಕರ್ಷಣೆಗಳಿಗೆ ಶ್ರೀಮಂತರು ಮುಗಿಬೀಳುವುದರಿಂದ ಸುತ್ತಮುತ್ತೆಲ್ಲ ರಸ್ತೆಗಳಲ್ಲಿ ಜನರಿಗೆ ಕಾಲಿಡಲಾರದಷ್ಟು ಕಾರುಗಳು ನಿಲ್ಲಿಸಿರುತ್ತಾರೆ. ಈಗ ಇನ್ನೂ ಹೆಚ್ಚು ಸದಸ್ಯರನ್ನು ತೆಗೆದುಕೊಳ್ಳುವ ನಿರೀಕ್ಷೆಯಿದೆ. ಅವರಿಗೆ ೩೦೦ ಕಾರು ನಿಲ್ಲಿಸುವ ನಿಲ್ದಾಣ ಬೇಕಂತೆ. ಜನತಾ ಬಜಾರ್ ಒಡೆದು ಕ್ಲಬ್ಬಿನ ಸದಸ್ಯರಿಗೆ ಕಾರು ನಿಲ್ಲಿಸಲು ಜಾಗಮಾಡುವುದು ಇಲ್ಲಿರುವ ಹುನ್ನಾರ.

ಸದಾಶಿವನಗರದಲ್ಲಿ ಅನೇಕ ಬೃಹತ್ ಕಟ್ಟಡಗಳು ಯಾವಾಗಲೂ ಕಟ್ಟುತ್ತಾ ಇರುವ ಸಂದರ್ಭವಿದೆ. ಇದರಿಂದ ನೂರಾರು ಜನ ಗುಳೆ ಬಂದವರು ಈ ಕಟ್ಟಡಗಳ ಕಾಮಗಾರಿಯಲ್ಲಿ ತೊಡಗಿರುತ್ತಾರೆ. ಮರಳಿನ ರಾಶಿಯ ಪಕ್ಕದಲ್ಲಿ ಮೂರು ಇಟ್ಟಿಗೆ ಇಟ್ಟು ಸಾಯಂಕಾಲ ಅಡಿಗೆ ಮಾಡುವ ಇವರು ಅಕ್ಕಿ, ರಾಗಿ, ಜೋಳ ಕೊಳ್ಳುವುದು ಜನತಾ ಬಜಾರಿನಲ್ಲಿ, ಫುಡ್ ವರ್ಲ್ಡ್‌ನ, ನೇಚರ್ ಬಾಸ್ಕೆಟ್‌ನ ಆಮದು ಮಾಡಿದ ಇಟಾಲಿಯನ್ ಡೇನಿಷ್ ಆಹಾರ ಪುಡಿಕೆಗಳನ್ನಲ್ಲಿ, ನೆಲದ ಮೇಲೆ ನಡೆದು ಗೊತ್ತಿಲ್ಲದ, ಕಾರು, ಕುಡಿತವೇ ಜೀವನದ ಪರಮೋದ್ದೇಶ ಎನ್ನುವವರಿಗೆ ನಮ್ಮ ಕಾಳಜಿಗಳು ಅರಣ್ಯರೋದನ.

ಗುಳೆ ಬಂದ ಸಾವಿರಾರು ಜನ ಕೆಲಸ ಮಾಡುತ್ತಿರುವ ಈ ಪ್ರದೇಶದಲ್ಲಿ ಒಂದು ಸಾರ್ವಜನಿಕ ಶೌಚಾಲಯ ಬೇಕು ಎಂದು ಕೇಳಿದರೆ 'ಜನ ಅದರ ಗೋಡೆಗೆ ಮೂತ್ರ ಮಾಡುತ್ತಾರೆ. ಶೌಚಾಲಯ ಉಪಯೋಗ ಇಲ್ಲ' ಎಂದು ಕೊಡವಿ ಹಾಕಿದರು.

ಉಪಯೋಗ, ಅಭಿವೃದ್ಧಿ ಎಲ್ಲ ಕಾರು, ಹಣ ಇರುವವರಿಗೆ. ಕ್ಲಬ್ಬು, ಕುಡಿತ, ಕುಣಿತ ಉಪಯುಕ್ತ ಕೆಲಸಗಳು. ಕಾರು ನಿಲ್ದಾಣ ಅಭಿವೃದ್ಧಿ.

ಎರಡು ದೇವಸ್ಥಾನ, ಒಂದು ಬಾಲಬಾಲಿಕೆಯರ ಶಾಲೆ, ಆಟದ ಮೈದಾನ (ಎರಡು) ಇವುಗಳ ನೂರು ಅಡಿ ವ್ಯಾಸದಲ್ಲಿ ಕ್ಲಬ್ಬು, ಅದರ "ಚಟುವಟಿಕೆ"ಗಳು. ಈ ಅಪದ್ಧ ಸಾಲದೆಂದು ಸಿವಿಕ್ ಅಮೆನಿಟಿಯಲ್ಲಿ ಇರುವ ಅತ್ಯವಶ್ಯಕವಾದ ವಸ್ತುಗಳನ್ನೊದಗಿಸುತ್ತಿರುವ ಜನತಾ ಬಜಾರನ್ನು ಒಡೆದು ಅಲ್ಲಿಯೂ ಕ್ಲಬ್ಬಿನ ಕಬಂಧ ಬಾಹುಗಳನ್ನು ಚಾಚುವುದಕ್ಕೆ ಒಳಸಂಚು ನಡೆದಿದೆ.

"ಅಭಿವೃದ್ಧಿ" ಎಂದು ಹಾತೊರೆಯುತ್ತಿರುವ ಪ್ರಜಾ ಪ್ರತಿನಿಧಿಗಳಿಗೆ ಸದಾಶಿವನಗರವೇ "ಅಭಿವೃದ್ಧಿ"ಯಾಗ ಬೇಕು. ಒಂದು ಕಿಲೋಮೀಟರ್ ದೂರದ ಗುಟ್ಟಹಳ್ಳಿಯಲ್ಲಿ ಮಳೆ ಬಂದಾಗ ಕಟ್ಟಿಕೊಂಡ ಚರಂಡಿಗಳ ನೀರು ಮನೆಗಳ ಒಳಗೆ ತುಂಬಿಕೊಂಡು ಈಗ ಎರಡು ತಿಂಗಳಲ್ಲಿ ತುಂಬ ಹಾನಿಯಾಗಿದೆ. ಅವರ ಮೊರೆ ಯಾರ ಕಿವಿಗೂ ಬಿದ್ದಿಲ್ಲ, ಮ್ಯಾನ್ ಹೋಲ್‌ಗಳಿಗೆ ಜೆಟ್ಟಿಂಗ್ ಮೆಷೀನ್ ಕಳಿಸಿಲ್ಲ. ಚುನಾವಣೆ ಸಮಯದಲ್ಲಿ ಪುಂಗಿ ಊದಿದವರು ಯಾರೂ ಪತ್ತೆ ಇಲ್ಲ.

*ಬೆಂಗಳೂರು* **ವಿಮಲಾ ರಾಮರಾವ್**

ಸೆಪ್ಟೆಂಬರ್ ತಿಂಗಳ ಸಂಚಿಕೆಯಲ್ಲಿ ಪ್ರಕಟ ವಾಗಿರುವ ಡಾ॥ ಜಿ. ರಾಮಕೃಷ್ಣ ಅವರ ಲೇಖನ "ಋಗ್ವೇದ ಪ್ರವೇಶಿಕೆ..." ಲೇಖನ ತುಂಬ ಇಷ್ಟವಾಯಿತು. ವೇದೋಪನಿಷತ್ತುಗಳೆಂದರೆ ದೂರ ಸರಿದು ಹೋಗುವ ಕಾಲದಲ್ಲಿ ಅವುಗಳ ಅಂತರಾರ್ಥವನ್ನು ಸಾಮಾನ್ಯರಿಗೂ ಮುಟ್ಟುವಂತೆ ಲೇಖಕರು ಕುತೂಹಲ ಹುಟ್ಟಿಸುವ ಹಾಗೆ ವೇದದ ಕೆಲವು ಭಾಗಗಳ ವ್ಯಾಖ್ಯಾನವನ್ನೂ ಮಾಡಿದ್ದಾರೆ. ಓದುಗರಲ್ಲಿ ಆಸಕ್ತಿ ಹುಟ್ಟಿಸಿ ತಮ್ಮ ವಿದ್ವತ್ಪೂರ್ಣ ಲೇಖನದಿಂದ ವೇದಗಳನ್ನು ಅಭ್ಯಸಿಸುವ ಆಸೆ ಹುಟ್ಟಿಸಿದ್ದಾರೆ. ಇದೊಂದು ಸೊಗಸಾದ ಲೇಖನ.

ನಾನು ಚಿತ್ರದುರ್ಗದವನು. ಆ ಊರಿನ ಬಗ್ಗೆ ಹೊಸ ಬೆಳಕನ್ನು ಬೀರಿದ್ದಾರೆ ಶ್ರೀ. ಕ. ವೆಂ. ರಾಜಗೋಪಾಲ. ಹಾಗೆಯೇ 'ಎದೆಗೆ ಬಿದ್ದ ಅಕ್ಷರ'ದ ಬಗ್ಗೆಯ ಲೇಖನ – ಡಾ॥ ಕಾ. ವೆಂ. ಶ್ರೀನಿವಾಸ ಮೂರ್ತಿ ಲೇಖನವೂ ವಿಮರ್ಶಾತ್ಮಕವಾಗಿದೆ. ಈ ಸಂಚಿಕೆಯಲ್ಲಿರುವ ಇತರ ಲೇಖನಗಳು ಮೌಲಿಕವಾಗಿವೆ.

*ಬೆಂಗಳೂರು* **ಎಚ್. ಜಿ. ಸೋಮಶೇಖರ ರಾವ್**

ಸೆಪ್ಟೆಂಬರ್ ೨೦೧೩ರ 'ಹೊಸತು' ಹೊಸತನವನ್ನೇ ಹೊತ್ತು ತಂದ 'ಜನಪದ ಸಾಹಿತ್ಯದಲ್ಲಿ ಸ್ತ್ರೀ ಸಂವೇದನೆ' ಡಾ॥ ಆರ್. ಬಿ. ಚಿಲುಮಿಯವರ ಲೇಖನಿಯಿಂದ ಮೂಡಿಬಂದು ಇಂದು ಸ್ತ್ರೀಯರಿಗೆ ಕೊಟ್ಟಿರುವ ಸ್ವಾತಂತ್ರ್ಯ, ಭದ್ರತೆ, ಸಾಮಾಜಿಕ ಸ್ಥಾನ–ಮಾನ ಹೆಚ್ಚಿದ್ದರೂ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ಸಿಕ್ಕ ಮಹಿಳೆ ನಲುಗಿ, ಸ್ವಾತಂತ್ರ್ಯವೇ ಇಲ್ಲದಂತಾಗಿ 'ನ ಸ್ತ್ರೀ ಸ್ವಾತಂತ್ರ್ಯ ಮರ್ಹತಿ' ಎಂಬುದು ವೇದಕಾಲದಿಂದ ಬಂದ ಮಾತಾಗಿದೆ. ದಿನವು ಮಾಧ್ಯಮದಲ್ಲಿ ನೋಡುವ, ಕೇಳುವ ಸ್ತ್ರೀಯರ ಮೇಲಿನ ಲೈಂಗಿಕ ಕಿರುಕುಳ, ಅತ್ಯಾಚಾರ, ಮಾನಸಿಕ–ದೈಹಿಕ ಹಿಂಸೆ, ಕೊಲೆ, ಅಪಹರಣ ಇವೇ ಕೇಂದ್ರಬಿಂದುಗಳಾಗಿರುತ್ತವೆ. ಗ್ರಾಮೀಣ ಪ್ರದೇಶದ ಜನ, ನಗರ ಪ್ರದೇಶ ಜನ ಬಡತನದಿಂದಾಗಿ ಯುವತಿಯರು ಪೋಷಕರು ಒಪ್ಪಿದರೆ ಸಾಕು ೨೦ ವರ್ಷದ ಹುಡುಗರಿಂದ ೭೦ ವರ್ಷದ ಮುದುಕರೂ ಇಲ್ಲಿ ಮದುವೆಯ ಗಂಡುಗಳೇ ! ಇಲ್ಲಿ ಮದುವೆಯಾಗಲು ಬರುವ ವರನ ಮೂಲಸ್ಥಾನದ ಮೇಲೆ ಮದುವೆಗಳನ್ನು 'ಅರಬ್ಬಿ ಕಲ್ಯಾಣಂ', 'ಮೈಸೂರು ಕಲ್ಯಾಣಂ', 'ಮಲೈ ಕಲ್ಯಾಣಂ' ಎಂಬ ವೈವಿಧ್ಯಮಯ ಹೆಸರುಗಳಿಂದ ಕರೆಯಲಾಗುವ ಇಂಥ ಮದುವೆಗಳು ಕೇವಲ ಒಂದು ತಿಂಗಳ ಅವಧಿಗೆ ಬರುವ ಕೊಲ್ಲಿ ರಾಷ್ಟ್ರಗಳ ವರಗಳು ಶಾಸ್ತ್ರ ಮುಗಿಸಿ ವಧುವನ್ನು ಮಧುಚಂದ್ರಕ್ಕೆ ವಾರ ಅಥವಾ ಒಂದು ತಿಂಗಳೋ ಕರೆದೊಯ್ದು ಮಧು ಹೀರಿ ಪತ್ನಿಯನ್ನು ತವರಿನಲ್ಲಿ ಬಿಟ್ಟು ಕೊಲ್ಲಿಗೆ ತೆರಳುತ್ತಾರೆ. ಮಧು ಹೀರಿದ ದುಂಬಿ ಮತ್ತೆಂದೂ ಮುಖ ತೋರದೆ ಹೋದರೆ ಇತ್ತ ಹದಿಹರೆಯದ ಅಮಾಯಕ ಯುವತಿ ಜೀವನಪೂರ್ತಿ ಕಣ್ಣೀರಿಡುತ್ತಾ ವಿಧವೆಯಂತೆ ದಿನ ದೂಡುತ್ತಾಳೆ. (ಲೇ : ಲಕ್ಷ್ಮೀ ಗೋಪಾಲಕೃಷ್ಣನ್ : ಪ್ರಜಾವಾಣಿ – ದಿನಾಂಕ ೦೨.೦೯.೨೦೧೩) ಇದೇ ರೀತಿ ೭೩ ವರ್ಷದ ಸ್ವಯಂಘೋಷಿತ 'ದೇವಮಾನವ' ಅಸಾರಾಮ್ ಬಾಪು ಬಾಲಕಿಯ ಮೇಲೆ ಲೈಂಗಿಕ ದೌರ್ಜನ್ಯ ನಡೆಸಿದ ಆರೋಪ ಇನ್ನೂ ವಿಚಾರಣೆ ಹಂತದಲ್ಲಿರುವಾಗಲೇ ಮತ್ತೊಬ್ಬ 'ದೇವಮಾನವ' ಮಧ್ಯಪ್ರದೇಶದ ಸೆಹೋರ್ ಜಿಲ್ಲೆಯ ನೀಲಖಂಡ್ ಗ್ರಾಮದಲ್ಲಿನ ಆಶ್ರಮದ ೬೫ ವರ್ಷದ ಮಹೇಂದ್ರಗಿರಿ ಅಲಿಯಾಸ ತುನ್ನುಬಾಬಾ ೨೪ ವರ್ಷದ ಮಹಿಳೆಯನ್ನು ಆಕೆಯ ಪತಿ ಮತ್ತು ಅತ್ತೆಯವರ ಕುಮ್ಮಕ್ಕಿನೊಂದಿಗೆ ಅತ್ಯಾಚಾರ, ಲೈಂಗಿಕ ಕಿರುಕುಳ ಎಸಗುತ್ತಿರುವುದು ನೋಡಿದರೆ, ಕೇಳಿದರೆ ಸೋಜಿಗವೆನಿಸುವುದು ಸಹಜ. ಇಂಥ ದೇವಮಾನವರು ಎಲ್ಲೆಲ್ಲೂ ಕಾಣಸಿಗಬಹುದು. ಇಂತಹ ದೇವಮಾನವರಾದಿಯಾಗಿ ಯಾರೇ ಆಗಿರಲಿ ಅವರಿಗೆ ಗಲ್ಲು ಶಿಕ್ಷೆ, (ಮರಣದಂಡನೆ) ವಿಧಿಸಲಿ. ಸ್ತ್ರೀಯರೂ ನಿರ್ಭಯದಿಂದ ಓಡಾಡುವಂತಹ ವಾತಾವರಣವು ಬರಲಿ. ಇದಕ್ಕೆ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು (ಪಕ್ಷಭೇದ ಮರೆತು) ಕಠಿಣಕ್ರಮಗಳ ಕಾನೂನುಗಳನ್ನು ರಚಿಸಿ ಸ್ತ್ರೀಯರಿಗೆ ಸಂಪೂರ್ಣ ರಕ್ಷಣೆ ಕೊಡಿಸಲಿ.

*ಬಳ್ಳಾರಿ* **ಗುಗ್ರಿ ಪಂಚಾಕ್ಷರಿ**

**ಹೊಸತೊಂದು ದೃಷ್ಟಿಕೋನದಲ್ಲಿ...**

ಗಾಂಧೀ ತತ್ವ ಪ್ರತಿಪಾದಕನೂ ಎಂಬ ಹಾಗೆ ಸರಳರೇಖೆಗಳಿಂದೊಳಗೊಂಡ ಜಗತ್ ವಂದ್ಯ ಭಗತ್ ಸಿಂಗ್‌ರವರ ಮುಖಚಿತ್ರದ ಆವಿಷ್ಕಾರವಿರುವ ಹೊಸತಿನ ಸೆಪ್ಟೆಂಬರ್ ಸಂಚಿಕೆ ಆರಂಭದಲ್ಲಿಯೇ ಕಣ್ಮನ ಸೂರೆಗೊಳಿಸಿಕೊಡಲಾರಂಭಿಸಿದುದೂ ನಿಜ. ನಿರಾಡಂಬರದ ನೈಸರ್ಗಿಕ ಬದುಕಿಗೆ ಹೊಂದಿಕೊಂಡ ಮಾತೃಹೃದಯೀಭವ ಎನ್ನುವ ಅನುಭಾವವೊಂದನ್ನು ತೋರಿಸಿಕೊಟ್ಟ ದಿಟ್ಟದಿರಿಸಿನ ಸ್ಪಷ್ಟ ನಿಲುವಿನ ಪತ್ರಿಕಾ ಧೋರಣೆಯ ಹೂರಣಗಳು ಕಾರಣವೆನಿಸಿದ್ದರೂ ಇರಬಹುದು. ಆದರೆ ಹಾಗನ್ನಿಸಿದುದಂತೂ ಸುಸ್ಪಷ್ಟ. ಇನ್ನಷ್ಟೂ ನಿಖರವಾಗಿ ಹೇಳುವುದಿದ್ದರೆ – ಈ ಪತ್ರಿಕೆಯ ಸಂಪಾದಕೀಯ ಬರಹವನ್ನೇ ನೋಡೋಣ. ಸರ್ವಸಾಮಾನ್ಯವಾಗಿ ನಾನು ಕಂಡ ಹಾಗೆ ಪತ್ರಿಕೆಗಳಿಗಿರುವುದು ಒಬ್ಬ ಸಂಪಾದಕ, ಸಾಧಾರಣವಾಗಿ ಸಂಪಾದಕ ಮಂಡಳಿ ಎಂದು ಇರುವುದು ಹೌದಾದರೂ ಪತ್ರಿಕಾ ಮುಖೇನ ವ್ಯಾಖ್ಯಾನ ಆಖಾಡದಲ್ಲಿ ದಾಖಲಾಗುವವರು ಓರ್ವರೇ ಎಂಬುದೂ ಖಚಿತ. ಆದರೆ ಹೊಸತು ಅಲ್ಲೊಂದು ಹೊಸಬಗೆಯ ಛಾಪು ತೋರಿಸಿಕೊಟ್ಟಿದೆ; ಈ ತಿಂಗಳು ಎಂಬೊಂದು ಮುಖ್ಯವೇದಿಕೆಯಲ್ಲಿ ಸರಳವಾಗಿ ಸಂಪಾದಕ ವರ್ಗದವರೆಲ್ಲವರೂ ಒಂದೊಂದು 'ಪ್ಯಾರಾ' ವ್ಯಾಖ್ಯಾನಿಸಿ ವಿಷಯ ಸ್ಪಷ್ಟೀಕರಿಸಿಕೊಟ್ಟರೆ ತದನಂತರದ ಒಂದೆರಡು ಪುಟಗಳಲ್ಲಿ ಪ್ರತ್ಯಪ್ರತ್ಯೇಕವಾಗಿ ವೈವಿಧ್ಯತೆಯ ಅಭಿಪ್ರಾಯ ಪ್ರತಿಪಾದನೆ ಇರುತ್ತದೆ. ಸ್ಪಷ್ಟ ನಿಲುವಿನ ಈ ಬರಹಗಳು ಅವರಿವರನ್ನು ಸಾರಿಕೊಂಡೇ ಓದುಗರ ಮನಸೂರೆಗೊಳಿಸುತ್ತವೆ. ಒಂದಿಗೇ ನಮ್ಮನಿಮ್ಮೆಲ್ಲರ ಅನಿಸಿಕೆ ಹೇಳಿಕೆಗಳೂ ಇರುತ್ತವೆ; ಹೊಗಳಿಕೆ ತೆಗಳಿಕೆ ಎಂಬ ಭಿನ್ನತೆಗೆ ಇಲ್ಲಿ ಎಡೆಗೊಡುಗೆಯೇ ಇರುವದಿಲ್ಲ.

ಒಂದರ್ಥದಲ್ಲಿ ನೋಡಿದಾಗ ಹೆಚ್ಚಿನ ನಿಯತ ಕಾಲಿಕೆಗಳಲ್ಲಿ ಕಾಣಿಸಿಕೊಂಡ ಹಾಗೆ ಜಾಹೀರಾತುಗಳ ಭರಾಭರಟೆ ಇದರಲ್ಲಿ ತುಂಬ ಕಡಿಮೆ ಎನ್ನಲು ಹೆಮ್ಮೆಯಾಗುತ್ತಿದೆ. ಯಾವುದೇ ಮಾಧ್ಯಮವಾದರೂ ಇಂದು ಮುನ್ನಡೆಯ ದಾರಿಗೆ ದೀವಟಿಕೆ ಹಿಡಿಯು ತ್ತಿರುವುದೇ ಜಾಹೀರಾತುಗಳ ಮೂಲಕ. ಹೊರಗಿನೆರಡು ಪುಟಗಳ ಜಾಹೀರಾತು ಬಿಟ್ಟರೆ ಇನ್ನೆಲ್ಲೂ ತೋರಿಸಿ ಕೊಳ್ಳದೆ ಪೂರ್ತಿಯಾಗಿ ವಿಷಯಾನುಕ್ರಮಣಿಕೆಗೇ ಮನ್ನಣೆ ನೀಡಿದೆ – ಎನ್ನುವುದು ಹೊಸತಿನ ಹೊಸದು.

*ಕಾಸರಗೋಡು* **ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ**

# ಋಗ್ವೇದ ಪ್ರವೇಶಿಕೆ

# ಐತಿಹ್ಯ ಮತ್ತು ವಾಸ್ತವ



ಜಿ. ರಾಮಕೃಷ್ಣ

"ನಮ್ಮ ಆ ಪ್ರಾಚೀನ ಕಾಲದ 'ಋತ' ಎಲ್ಲಿ ಹೋಯಿತು" ಎಂದು ಕೆಲ ವೇಳೆ ಋಗ್ವೇದದ ಕವಿಗಳು ಹಲುಬುತ್ತಾರೆ. ಅವರ ಜೀವನಕ್ರಮದಲ್ಲಿ ಅಂತಹ ಅಗಾಧ ವಿರೂಪದ ವ್ಯತ್ಯಾಸಗಳು ಆಗಿಹೋಗುತ್ತಿರುವುದು ಅವರ ಗಮನಕ್ಕೆ ಬಂದಿದೆ, ಅದರಿಂದ ಕಸಿವಿಸಿಗೊಂಡಿದ್ದಾರೆ. 'ಗಣ' ಎಂದು ಕರೆಯಲಾಗುತ್ತಿದ್ದ ಅವರ ಬುಡಕಟ್ಟು , ಅದರ ವ್ಯವಸ್ಥೆ, ಅದರಲ್ಲಿನ ಮೌಲ್ಯಗಳು ಮತ್ತು ಸಂಬಂಧಗಳು ಮಸುಕಾಗುತ್ತಿರುವುದು ಅವರಿಗೆ ವ್ಯಾಕುಲ ಉಂಟುಮಾಡುತ್ತದೆ. ಅದಕ್ಕೇ ಅವರು ಋತಕ್ಕಾಗಿ ಹಲುಬುತ್ತಾರೆ. ಆದರೆ 'ಋತ' ಎನ್ನುವುದು ಅಷ್ಟಕ್ಕೆ ಸೀಮಿತವಾಗಿಲ್ಲ. ಋಗ್ವೇದದಲ್ಲಿನ ಅಮೂಲ್ಯ ಪರಿಕಲ್ಪನೆಗಳಲ್ಲಿ 'ಋತ'ವು ಅತಿ ಮಹತ್ವದ್ದು. ಪ್ರಸ್ತುತ ಲೇಖನಮಾಲೆಯಲ್ಲಿ ಇದು ನಾಲ್ಕನೆಯ ಕಂತು.

ವಿಶ್ವದ ಅನೇಕ ಕವಿಗಳಂತೆ ಇಬ್ಬರು ಇಂಗ್ಲಿಷ್ ಕವಿಗಳು ಪ್ರಕೃತಿಯ ನಿಗದಿತ ನಿಯಮಗಳನ್ನು ಅಬಾಧಿತವೆಂದು ನಿರೂಪಿಸಿದ್ದಾರೆ. ಅವರಿಬ್ಬರೇ ಅಲ್ಲ, ಬಹುಶಃ ಎಲ್ಲ ಕವಿಗಳಿಗೂ ಆ ಪ್ರಜ್ಞೆಯುಂಟು. ನಾವು ಪ್ರಕೃತದಲ್ಲಿ ಇಬ್ಬರನ್ನು ಮಾತ್ರ ಹೆಸರಿಸುತ್ತಿದ್ದೇವೆ, ಅಷ್ಟೆ. "ಹೈಪೀರಿಯನ್" ಎಂಬ ದೀರ್ಘ ಕವನದಲ್ಲಿ (I. ೨೯೧-೨) ಜಾನ್ ಕೀಟ್ಸ್ ಹೇಳುತ್ತಾನೆ: "ಅವನೆಂತಹ ಆದಿಯುಗದ ದೇವರೇ ಇರಬಹುದು, ಅವನಿಂದಲೂ ಋತುಗಳ ಅನುಕ್ರಮವನ್ನು ಪಲ್ಲಟಗೊಳಿಸಲು ಸಾಧ್ಯವಿಲ್ಲ," ಎಂದು. ಇನ್ನೊಬ್ಬ ಕವಿ ರಾಬರ್ಟ್ ಬ್ರಿಡ್ಜಸ್. "ದ ಟೆಸ್ಟಮೆಂಟ್ ಆಫ಼್ ಬ್ಯೂಟಿ" ಎಂಬ ಕೃತಿಯಲ್ಲಿ (I. ೫೬೨-೩) ಅವನೆನ್ನುತ್ತಾನೆ, "ವಿವೇಕಿಗಳು ಶ್ರದ್ಧಾವಂತರು, ಅವರು ಪ್ರಕೃತಿಯ ಕ್ರಮ ಅಥವಾ ನಿಯಮದಲ್ಲಿ ನಂಬಿಕೆ ಇರಿಸಿಕೊಳ್ಳುತ್ತಾರೆ, ಆ ಕ್ರಮವು ಒಳಿತೆಂಬುದನ್ನು ನಂಬುತ್ತಾರೆ", ಎಂದು. ಪ್ರಾಚೀನ ಗ್ರೀಸ್‌ನ ಚಿಂತಕ ಪ್ಲೇಟೋ ತನ್ನ "ರಿಪಬ್ಲಿಕ್" ಎಂಬ ಗ್ರಂಥದಲ್ಲಿ ಇಂಥದೇ ಭಾವನೆಯನ್ನು ಬೇರೊಂದು ರೀತಿಯಲ್ಲಿ ಪ್ರಕಟಿಸಿದ್ದಾನೆ. ಅವನ ಮಾತಿನ ಸಾರಾಂಶ ಇದು: "ತನ್ನ ಆತ್ಮದ ಘನತೆಯನ್ನು ತಿಳಿದವನು, ಕಾಲ - ದೇಶಗಳನ್ನು ಆಮೂಲಾಗ್ರವಾಗಿ ವೀಕ್ಷಿಸಿರುವವನು, ಈ ಕುಬ್ಜ ಮಾನವ ಜೀವನವನ್ನು ಅಗಾಧವೆಂದು ತಿಳಿದಾನೆ? ಅವನು ಶಾಶ್ವತ ಸತ್ಯಗಳಿಗಾಗಿ ಕಣ್ಣುಗಳನ್ನು ಮೇಲಕ್ಕೆ ತಿರುಗಿಸುತ್ತಾನೆ. ಅಲ್ಲಿ ಕುತ್ಸಿತ ಸಂಬಂಧಗಳಿಲ್ಲ, ಎಲ್ಲವೂ ನೇರವಾದ ದೃಷ್ಟಿಯೇ. ಒಂದೊಂದೂ ತನ್ನ ನಿರ್ದಿಷ್ಟ ಪಥದಲ್ಲಿ ತನ್ನ ಕಾರ್ಯ ನಿರ್ವಹಿಸುವಂಥದೇ. ಅದರಿಂದ ನಾವು ಸ್ಫೂರ್ತಿ ಪಡೆಯಬೇಕಲ್ಲವೆ?" ಪ್ಲೇಟೋನ ಈ ಮಾತನ್ನು ಪ್ಲೋಟಿನಸ್ ಪುನರುಚ್ಚರಿಸಿದ್ದಾನೆ (೧.೮.೫). ಪ್ಲೇಟೋ ಮಾರ್ಗವನ್ನು ಅನುಸರಿಸಿ, ಅಧ್ಯಾಪನದಲ್ಲಿ ತೊಡಗಿದ್ದ ಡಯೋಕ್ರಿಸಸ್ಟೋಮಸ್ ಎಂಬುವನು ಈ ಸೂತ್ರವನ್ನು ಧ್ಯೇಯವಾಕ್ಯವಾಗಿಸಿಕೊಂಡು ಮಧ್ಯ ಏಷ್ಯದ ಕಲಹ ಪೀಡಿತ ರಾಜರಿಗೆ ಬುದ್ಧಿ ಹೇಳುತ್ತಿದ್ದನಂತೆ. ಪರ್ಷಿಯಾದ ರಾಜ ಡೇರಿಯಸ್‌ನ ನಂತರದವರಲ್ಲಿ ಆರ್ಟಕ್ಸರ್ಸಸ್ ಎಂಬುವವನೊಬ್ಬನಿದ್ದ; ಅವನಿಗೆ ನೀಡಲಾಗಿದ್ದ ಬುದ್ಧಿವಾದ ಹೀಗಿದೆ: "ಅಲ್ಲಯ್ಯಾ ರಾಜ, ತಲೆಯೆತ್ತಿ ಒಮ್ಮೆ ಆಕಾಶ ನೋಡಬಾರದೇ ನೀನು! ಅಲ್ಲಿ ಅವೆಷ್ಟು ಕಾಯಗಳಿವೆ, ನಿರಂತರವಾಗಿ ಅವು ತಮ್ಮ ತಮ್ಮ ಕಕ್ಷೆಗಳಲ್ಲಿ ಹೇಗೆ ಚಲಿಸುತ್ತಿವೆ, ನೋಡು. ಎಂದಾದರೂ ಅವು ಪರಸ್ಪರ ಸಂಘರ್ಷದಲ್ಲಿ ತೊಡಗಿರುವುದುಂಟೆ? ಅದೆಂತಹ ಅದ್ಭುತ ಸಾಮರಸ್ಯ, ಅಲ್ಲವೆ? ಒಂದು ಯಃಕಶ್ಚಿತ್ ಬಣದವರಾದ ನೀವು, ಏಷ್ಯದ ಒಂದು ಸಣ್ಣ ಭಾಗದವರು, ಎಲ್ಲೋ ಒಂದು ಮೂಲೆಯಲ್ಲಿದ್ದೀರಿ, ವಿಶ್ವದಲ್ಲಿ ನಿಮ್ಮ ರಾಜ್ಯ ಒಂದು ಹಳ್ಳಿಗಿಂತಲೂ ವಿಶಾಲವಾದುದಲ್ಲ. ಹೀಗಿರುವಾಗ ಪರಸ್ಪರರಲ್ಲಿ



ಶಾಂತಿಯಿಂದ ಜೀವಿಸಲು ನಿಮಗೇನು ಧಾಡಿ ?" ಈ ಪ್ರಶ್ನೆಯನ್ನು ನಾವೆಲ್ಲ ನಮಗೆ ಹಾಕಿಕೊಳ್ಳಲು ಯೋಗ್ಯವಾಗಿದೆ. ಒಬಾಮ, ಒಸಾಮ, ನರೇಂದ್ರ ಮೋದಿ, ಇಸ್ರೇಲಿನ ನೆಟನ್ಯಾಹು, ಹೀಗೆ ಯಾರು ಬೇಕಾದರೂ ಆರ್ಟರ್ಕ್ಸರ್ಸಸ್ ಎದುರಿಸಿದ ಪ್ರಶ್ನೆಯಿಂದ ಉದಾತ್ತ ಜೀವಿಗಳಾಗಲು ಯತ್ನಿಸಲಡ್ಡಿಯಿಲ್ಲ. ಮೂಲತಃ ಋತದ ಅರ್ಥವ್ಯಾಪ್ತಿ ಅದೇ : ಅಖಂಡ ಚಲನೆ ಇರುವ ವಿಶ್ವದಲ್ಲಿ ನಿಯಮಗಳು ಎಷ್ಟು ಅಬಾಧಿತವಾಗಿವೆ, ಅಮೋಘವಾಗಿವೆ, ಎಂಬುದು. ನಿಜ ಜೀವನದಲ್ಲಿ ಇಂತಹ ನಿಮಯಗಳು ಕಟ್ಟುನಿಟ್ಟಾಗಿ ಪಾಲಿಸಲ್ಪಡುವುದು ಬುಡಕಟ್ಟುಗಳಲ್ಲಿ. ಋಗ್ವೇದವು ಅವನ್ನು 'ಗಣಗಳು' ಎಂದು ಕರೆಯುತ್ತದೆ. ಪ್ರಾಚೀನ ಸಮಾಜಗಳ ರಚನೆ ಮತ್ತು ಜೀವನಕ್ರಮಗಳನ್ನು ಅಸಾಧಾರಣವಾಗಿ ನಿರೂಪಿಸಿರುವ ಲೂಯಿ ಹೆನ್ರಿ ಮೋರ್ಗನ್‌ನನ್ನು ಅನುಸರಿಸಿ ಫ್ರೆಡ್ರಿಕ್ ಏಂಗೆಲ್ಸ್ ಪ್ರಾಚೀನ ಸಮಾಜಗಳಲ್ಲಿ ಎದ್ದುಕಾಣುತ್ತಿದ್ದ ಗುಣವನ್ನು "ಪ್ರಾಚೀನ ಕುಲೀನ ಸಮಾಜದ ಸರಳ ನೈತಿಕ ಗಾಂಭೀರ್ಯ" ಎಂದು ಹೆಸರಿಸಿದ್ದಾನೆ. ಋಗ್ವೇದದ 'ಋತ' ಪ್ರತಿನಿಧಿಸುವುದು ಅಂತಹ ಗಾಂಭೀರ್ಯವನ್ನು , ಮತ್ತು ಅದು ಅನಿವಾರ್ಯವಾಗಿ ಬದಲಾವಣೆಗೆ ತುತ್ತಾಗುತ್ತಿದ್ದ ಸಂಧಿಕಾಲದಲ್ಲಿ ಕವಿಗಳು "ಅಯ್ಯೋ, ನಮ್ಮ ಪ್ರಾಚೀನ ಕಾಲದ ಋತ ಎಲ್ಲಿ ಹೋಯಿತು ?" ಎಂದು ಬಿಸುಸುಯ್ದಿದ್ದಾರೆ; "ನಮ್ಮ ಕಾಲದಲ್ಲಿ ಹೇಗಿತ್ತು ಗೊತ್ತೆ? ಹೀಗೆಲ್ಲಾ ಅನಾಚಾರಗಳಿರಲಿಲ್ಲ" ಎಂದು ನಮ್ಮ ವೃದ್ಧರು ಹೇಳುತ್ತಿರುವುದಿಲ್ಲವೆ, ಹಾಗೆ.

'ಋತ'ವು ಇಷ್ಟಕ್ಕೇ ಸೀಮಿತವಾಗಿಲ್ಲ. ಅದರ ಗಮನಾರ್ಹ ಆಯಾಮವು ಇನ್ನೊಂದಿದೆ : ಮಾನವ ಮತ್ತು ಪ್ರಕೃತಿಯ ನಡುವಣ ಸಂಬಂಧವು ಅವಿಭಾಜ್ಯ. ಅದು ಸೆಣಸಾಟವೂ ಇರಬಹುದು, ಸಾಮರಸ್ಯವೂ ಇರಬಹುದು. ಪ್ರಕೃತಿಯ ನಿಯಮಗಳನ್ನು ಗುರುತಿಸುವುದು ಮತ್ತು ಗ್ರಹಿಸುವುದು ಕ್ರಮೇಣ ಮಾನವನಿಗೆ ಪ್ರಕೃತಿಯಿಂದ ಅನನ್ಯ ಫಲಗಳನ್ನು ಪಡೆಯಲು ಸಾಮರ್ಥ್ಯ ನೀಡುತ್ತದೆ. ಆ ನಿಯಮಗಳು ಸಾರ್ವಕಾಲಿಕ ಮತ್ತು ಸರ್ವವ್ಯಾಪ್ತಿ ಉಳ್ಳಂಥವು. ನಾವಿಂದು ಯಾವುದನ್ನು ಆಧುನಿಕ ವಿಜ್ಞಾನವೆಂದು ಕರೆಯುತ್ತೇವೋ ಅದರ ಉಗಮಸ್ಥಾನವೆಂದರೆ ಪ್ರಾಚೀನ ಸಮಾಜ. ಅಂದಿನ ತಿಳಿವಳಿಕೆಯ ನಿರಂತರ ವಿಸ್ತಾರದಿಂದ ಊಹಾತೀತವಾದ ಬೆಳವಣಿಗೆಗಳಾಗಿವೆ. ಅಂದೇ ಇಂದಿನ ಜ್ಞಾನದ ಖನಿಯು ತೆರೆದುಕೊಳ್ಳಬಹುದಿತ್ತೆಂದಾಗಲಿ, ತೆರೆದುಕೊಂಡೇಬಿಟ್ಟಿದ್ದಿತು ಎಂದಾಗಲಿ ಭಾವಿಸಿದರೆ ಅದು ಅನಗತ್ಯವಾದ ಭ್ರಮೆಯ ಹೊರೆಯಾಗುತ್ತದೆ, ಅತಾರ್ಕಿಕ ಪ್ರಮೇಯವಾಗುತ್ತದೆ. ವಿಜ್ಞಾನದ ಅಂಕುರವು ವಿಜ್ಞಾನದ ಬೃಹತ್ ವೃಕ್ಷದ ಆವಿರ್ಭಾವಕ್ಕೆ ಅಗತ್ಯ. ಅಂಕುರವನ್ನು ನಗಣ್ಯವೆಂದು ತಳ್ಳಿಹಾಕುವುದು ಅವೈಚಾರಿಕವಾದ್ದು. ಈ ದೃಷ್ಟಿಯಿಂದ ಋತದ ಸರ್ವತೋಮುಖೀ ಪರಿಕಲ್ಪನೆಗೆ ಅಮೂಲ್ಯವಾದ ಸ್ಥಾನವಿದೆ. ಒಂದು ಕಡೆ ಸಮಷ್ಟಿ ಜೀವನದ ಪ್ರತೀಕ, ಇನ್ನೊಂದು ಕಡೆ ವೈಜ್ಞಾನಿಕ ಶಿಸ್ತಿನ ಮೂಲ : ಅದು ಋತದ ವೈಶಿಷ್ಟ್ಯ. ದೇವತೆಗಳು ಸಹ ಋತವನ್ನು ಮೀರಲಾರರು; ಅಂತಹ ಘನಿಷ್ಠ ನಿಯಮ ಅದು. ಪ್ರಕೃತಿ ನಿಯಮವು ಏಕಪ್ರಕಾರವಾಗಿ ಸದಾ ಸಿಂಧುವಾಗಿರುತ್ತದೆಂಬುದು ಋತದ ಇಂಗಿತ. ವಿಜ್ಞಾನದ ಮೂಲ ಪೂರ್ವಗ್ರಹಿಕೆ ಅದು. ಕಾರ್ಯ – ಕಾರಣ ಭಾವವು ಅಂಥದೇ ಇನ್ನೊಂದು ಮೂಲ ಪೂರ್ವಗ್ರಹಿಕೆ, ಆದರೆ ಅದನ್ನು ಋಗ್ವೇದವು ಸರ್ವಾಂಗೀಣವಾಗಿ ಚಿತ್ರಿಸಿಲ್ಲ. ಅದಕ್ಕೆ ಬೀಜವನ್ನು ಬಿತ್ತಿದೆಯೆನ್ನಬಹುದು. ಇಂದಿನ 'ಆಧುನಿಕೋತ್ತರ ಚಿಂತಕರು' ಪ್ರಕೃತಿಯ ಏಕಪ್ರಕಾರತೆಯನ್ನು ಅಂಗೀಕರಿಸಲು ಸಿದ್ಧರಿಲ್ಲವಾದ್ದರಿಂದ ಅವರಿಗೆ ವಿಜ್ಞಾನವು ಸಿಂಧುವಾದ ಶಿಸ್ತಿನಂತೆ ತೋರುವುದಿಲ್ಲ. "ನಾಳೆ ಬೆಳಿಗ್ಗೆ ಸೂರ್ಯೋದಯ ಆಗುತ್ತದೆಂಬುದು ಸಾಧ್ಯತೆಯೇ ಹೊರತು ಖಚಿತವಲ್ಲ" ಎನ್ನುವ ನಿಲುವನ್ನು ಹೊಂದಿರುವ ಇವರು ವಾದದಲ್ಲಿ ನಿಷ್ಣಾತರೆಂಬ ಬಿರುದನ್ನು ಹೊಂದಿದ್ದಾರೆಂಬುದು ಸಾಧ್ಯತೆಯಾಗಿ ಸಹ ಸ್ಥಾಪನೆಗೊಂಡಿಲ್ಲ. ಇರಲಿ, ಅದು ಬೇರೆ ಮಾತು.

"ನಮ್ಮ ಪೂರ್ವಜರು ಋತದ ಹಾದಿಯಲ್ಲಿ ಹೆಜ್ಜೆ ಹಾಕುತ್ತಾ ದೇವತೆಗಳೊಂದಿಗೆ ಕಲೆತರು, ಸವಿಯುಂಡರು; ಎಂದೋ ಮರೆಯಾಗಿ ಹೋಗಿದ್ದ ತೇಜಸ್ಸನ್ನು ಅವರು ಹೊಂದಿದರು. ಅವರೇ ಉಷೋದೇವಿಯ ಜನಕರು. ಅವರು ಮೇಧಾವಿಗಳು, ಪೂರ್ವಕಾಲದಲ್ಲಿ ಉತ್ಪನ್ನರಾಗಿದ್ದವರು. ಗೋ ಸಮೂಹವು ಸಿಕ್ಕಿದಾಗ ಒಟ್ಟಾಗಿ ಅವರೆಲ್ಲಾ ಒಂದೇ ಮನಸ್ಸನ್ನುಳ್ಳವರಾದರು, ಪರಸ್ಪರ ವಿರುದ್ಧವಾದ ಯತ್ನಗಳಲ್ಲಿ ತೊಡಗಲಿಲ್ಲ" (ಋ. ೭.೭೬.೪–೫). ಇದು ಗಣಗಳ ಸಮಷ್ಟಿ ಜೀವನದ ಒಂದು ಚಿತ್ರಣ. ಋಗ್ವೇದದ ಕಡೆಯ ಸೂಕ್ತದಲ್ಲಿ (೧೦.೧೯೧) ಈ ಆಶಯವನ್ನು ಇನ್ನೂ ಸಾಂದ್ರವಾಗಿ ವ್ಯಕ್ತಮಾಡಲಾಗಿದೆ : "ನೀವು ಒಟ್ಟಾಗಿ ಇರಿ. ಒಟ್ಟಾಗಿ ಮಾತಾಡಿ, ಪರಸ್ಪರ ಒಬ್ಬರನ್ನೊಬ್ಬರು ಸ್ಫುಟವಾಗಿ ತಿಳಿದುಕೊಳ್ಳಿ" (೧೦.೧೯೧.೨ : ಸಂ ಗಚ್ಛಧ್ವಂ ಸಂ ವದಧ್ವಂ ಸಂ ವೋ ಮನಾಂಸಿ ಜಾನತಾಮ್ ॥). "ನಿಮ್ಮ ಸಂಕಲ್ಪವು ಸಮಾನವಾಗಿರಲಿ, ನಿಮ್ಮ ಹೃದಯ ಮತ್ತು ಮನಸ್ಸುಗಳು ಸಮಾನವಾಗಿರಲಿ. ಆಗ ನಿಮಗೆ ಶುಭವುಂಟಾಗುತ್ತದೆ" (೧೦.೧೯೧.೪ : ಸಮಾನೀ ವ ಆಕೂತಿಃ ಸಮಾನಾ ಹೃದಯಾನಿ ವಃ। ಸಮಾನಮಸ್ತು ವೋ ಮನೋ ಯಥಾ ವಃ ಸುಸಹಾಸತಿ ॥).

ಋಗ್ವೇದ ಕಾಲದ ಸಮುದಾಯಕ್ಕೆ ಮತ್ತು ಅದರ ಕವಿಗಳಿಗೆ 'ಧರ್ಮ' ಎಂಬುದೇನಾದರೂ ಇದ್ದರೆ ಅದು ಋತದಿಂದ ಪ್ರತಿಪಾದಿತವಾದದ್ದು, ಅಷ್ಟೆ. ದೇವತೆಗಳನ್ನು ಪೂಜಿಸಿ, ಅವರಿಂದ ಬೇಡಿ ಏನನ್ನಾದರೂ ಪಡೆಯುವ ಬಯಕೆ ಮತ್ತು ಅದರ ಸುತ್ತಮುತ್ತ ಬೆಳೆಯುವ ಆಚರಣೆಗಳು ನಿಜಾರ್ಥದಲ್ಲಿ ಧರ್ಮವಲ್ಲ; ಬೇಕಾದರೆ ಅದನ್ನು 'ಧರ್ಮ ವ್ಯಾಪಾರ' ಎಂದು ಕರೆಯಬಹುದೇನೊ ! ಅದು ಇಂದು ನಮ್ಮಲ್ಲಿ ಹೇರಳವಾಗಿ ಕಂಡುಬರುತ್ತಿದೆ. ಬ್ಲೂಂಫೀಲ್ಡ್ ಎಂಬ ವಿದ್ವಾಂಸನ ಪ್ರಕಾರ ಋತದಷ್ಟು ಪ್ರಮುಖವಾದ ಪರಿಕಲ್ಪನೆ ವೇದದಲ್ಲಿ ಬೇರೊಂದಿಲ್ಲ, ವೈದಿಕ ಧರ್ಮದ ಸಾರಸರ್ವಸ್ವವೂ ಅದರಲ್ಲೇ ಅಡಗಿದೆ. ಈ ಸಂಬಂಧದಲ್ಲಿ ಋಗ್ವೇದದ ಕೆಲವು ಮಂತ್ರಗಳನ್ನು ಪರಿಚಯಿಸಿಕೊಳ್ಳುವುದು ಅನುಚಿತವಾಗಲಾರದು.

"ನಮ್ಮ ಶರೀರಗಳಲ್ಲಿನ ದಾರ್ಢ್ಯಕ್ಕೆ ಆದಿತ್ಯನ ತೇಜಸ್ಸು ಕಾರಣ, ಆ ತೇಜಸ್ಸನ್ನು ಬುದ್ಧಿಪೂರ್ವಕವಾಗಿ ನಾನು ವರಿಸುತ್ತೇನೆ. ಅಗ್ನಿಯು ತೇಜೋರೂಪ,

ಅವನನ್ನು ಸುಲಲಿತವಾಗಿ ಹೊರಹೊಮ್ಮಿಸುವುದು ಋತ ಸಂಬಂಧಿಯಾದ ಮಂತ್ರ" (೧.೧೪೧.೧: ಬಳಿತ್ಥಾ ತದ್ವಪುಷೇ ಧಾಯಿ ದರ್ಶತಂ ದೇವಸ್ಯ ಭರ್ಗಃ ಸಹಸೋ ಯತೋ ಜನಿ। ಯದೀಮುಪ ಹ್ವರತೇ ಸಾಧತೇ ಮತಿರ್ಋತಸ್ಯ ಧೇನಾ ಅನಯಂತ ಸಸ್ರುತಃ॥). "ಮಿತ್ರಾವರುಣರೇ, ನಿಮ್ಮನ್ನು ಸ್ತುತಿಸುವವನ ಋತಕ್ಕೆ ಪ್ರತಿಯಾಗಿ ನೀವು ಅವನಿಗೆ ಫಲ ನೀಡಿದ್ದೀರಿ... ಈ ನಮ್ಮ ಪ್ರಿಯಕರವಾದ ಭೂಮಿಯು ಋತೋಪಾಸಕರಾದ ನಿಮ್ಮನ್ನು ಸ್ವೀಕರಿಸಲು ಸಿದ್ಧವಾಗಿದೆ" (೧.೧೫೧.೩-೪). "ಋತದ ರೂಪವು ಉತ್ತಮವಾದ್ದು. ಅದು ದೃಢವಾದ್ದು, ಲೋಕಧಾರಕ ಶಕ್ತಿಯನ್ನುಳ್ಳದ್ದು. ಅದು ಬಹು ಪ್ರಕಾಶಯುಕ್ತವಾದ್ದು, ಮನೋಜ್ಞವಾದ್ದು. ಋತದ ಸಹಾಯದಿಂದ ಅನ್ನ ದೊರೆಯುತ್ತದೆ; ಋತದಿಂದ ಗೋವುಗಳು ಋತವನ್ನು ಪ್ರವೇಶಿಸುತ್ತವೆ" (೪.೨೩.೯:ಋತಸ್ಯ ದೃಳ್ಹಾ ಧರುಣಾನಿ ಸಂತಿ ಪುರೂಣಿ ಚಂದ್ರಾ ವಪುಷೇ ವಪೂಂಷಿ। ಋತೇನ ದೀರ್ಘಮಿಷಣಂತ ಪೃಕ್ಷ ಋತೇನ ಗಾವ ಋತಮಾವಿವೇಶುಃ॥). "ಒಂದು ಸಂವತ್ಸರದಲ್ಲಿ ಆರು ಋತುಗಳೂ ತಪ್ಪದೆ ಕ್ರಮವಾಗಿ ಬರುತ್ತವೆ. ಸೂರ್ಯರಶ್ಮಿಗಳೂ ಎಲ್ಲೆಡೆ ಹರಡಿಕೊಳ್ಳುವುದು ಋತದಿಂದ" (೩.೫೦.೨: ಷಡ್ಭಾರಾನೇಕೋ ಅಚರನ್ ಬಿಭರ್ತಿ ಋತಂ ವರ್ಷಿಷ್ಠಮುಪ ಗಾವ ಆಗುಃ). "ಇಂದ್ರನು ನಿತ್ಯನಿಯಮವಾದ ಋತವನ್ನು ಸ್ಥಾಪಿಸಿ ಅದನ್ನು ಎತ್ತಿಹಿಡಿಯುತ್ತಾನೆ. ಆ ನಿಯಮದ ಶಕ್ತಿ ಅಪಾರ. ಅದರ ಪ್ರಭಾವದಿಂದ ನಮಗೆ ಸಂಪತ್ತು ದೊರೆಯುತ್ತದೆ. ಪೃಥ್ವಿಯು ಋತದ ಅಧೀನ, ಅಂತೆಯೇ ಗೋವು ಹಾಲು ಕೊಡುವುದೂ ಋತದಿಂದಲೇ" (೪.೨೩.೧೦: ಋತಂ ಯೇಮಾನ ಋತಮಿದ್ವನೋತಿ ಋತಸ್ಯ ಶುಷ್ಮಸ್ತುರಯಾ ಉ ಗವ್ಯುಃ। ಋತಾಯ ಪೃಥ್ವೀ ಬಹುಲೇ ಗಭೀರೇ ಋತಾಯ ಧೇನೂ ಪರಮೇ ದುಹಾತೇ॥).

ಪ್ರಕೃತಿ ವ್ಯಾಪಾರದ ವಿವಿಧ ಮಗ್ಗುಲುಗಳನ್ನು ಪ್ರತಿನಿಧಿಸುವಂತೆ ಋತವು ವೇದಕಾಲದ ಜನಜೀವನವನ್ನೂ ಪ್ರತಿಬಿಂಬಿಸುತ್ತದೆ. ಆ ಜೀವನದಲ್ಲಿ ಗಣವು ಕೇಂದ್ರ ಸ್ಥಾನದಲ್ಲಿರುತ್ತದೆ. ಅದರ ಅಧಿಪತಿಯೆಂದರೆ ಬ್ರಹ್ಮಣಸ್ಪತಿ. ಗಣವು ಅವನನ್ನು ಸ್ತುತಿಸಿ ಮೊರೆಯಿಡುತ್ತದೆ. ಅವನು ಪ್ರಜ್ಞಾವಂತರಲ್ಲಿ ಅತಿ ಶ್ರೇಷ್ಠ. ಎಲ್ಲ ವಿಧದ ಆಹಾರವನ್ನೂ ಕಲ್ಪಿಸುವವನು ಅವನೇ. ಗಣಕ್ಕೆ ಅವನ ಪಾಲನೆಯು ಅವಶ್ಯಕ. (೨.೨೩.೧: ಗಣಾನಾಂ ತ್ವಾ ಗಣಪತಿಂ ಹವಾಮಹೇ ಕವಿಂ ಕವೀನಾಂ ಉಪಮಶ್ರವಸ್ತಮಂ। ಜ್ಯೇಷ್ಠರಾಜಂ ಬ್ರಹ್ಮಣಾಂ ಬ್ರಹ್ಮಣಸ್ಪತ ಆ ನಃ ಶೃಣ್ವನ್ ಊತಿಭಿಃ ಸೀದ ಸಾದನಮ್॥). ಹೀಗೆ ಸ್ತುತಿಸಲಾಗಿರುವ ಗಣ-ಪತಿ ಋಗ್ವೇದದಲ್ಲಿ ಕಾಣಿಸಿಕೊಳ್ಳುವುದು ಕೆಲವು ಬಾರಿ ಮಾತ್ರ; ಆದರೆ ಗಣಗಳ ಬಗೆಗಿನ ಉಲ್ಲೇಖ ಅಪಾರ. ಅವುಗಳ ಸಾಮೂಹಿಕ ಜೀವನವನ್ನು ಮರುದ್ದೇವತೆಗಳ ಸಾಮೂಹಿಕ ಜೀವನವು ಸಂಕೇತಿಸುತ್ತದೆ. "ಮುಕ್ತ




ಸ್ತುತಿಗಳಿಂದ ಗಣಗಳನ್ನು ವಿಶ್ವೇದೇವತೆಗಳು ಶ್ಲಾಘಿಸುತ್ತಾರೆ" (ಗಣಂ ಭಜತೇ ಸುಪ್ರಯಾವಭಿಃ॥ ೫.೪೪.೧೨). "ಎಲೈ ಉಷೋದೇವತೆಯೇ, ನಿನ್ನ ಜನ್ಮವು ಉನ್ನತ ಮಟ್ಟದ್ದು, ನಿನಗೆ ಕುದುರೆಗಳೆಂದರೆ ಪ್ರೀತಿ. ನಮ್ಮ ಗಣಗಳ ಮುಖೇನ ಧನ-ಧಾನ್ಯಕ್ಕಾಗಿ ನಿನ್ನನ್ನು ಬೇಡುತ್ತೇವೆ" (೫.೭೯.೫: ಯಚ್ಚಿದ್ಧಿ ತೇ ಗಣಾ ಇಮೇ ಛದಯಂತಿ ಮಘತ್ತಯೇ। ಪರಿ ಚಿದ್ವಷ್ಟಯೋ ದಧುಃ ದದತೋ ರಾಧೋ ಅಹ್ರಯಂ ಸುಜಾತೇ ಅಶ್ವಸೂನೃತೇ॥). "ಇಂದ್ರನೇ, ಗಣಗಳ ಮಧ್ಯೆ ಬಂದು ಕೂಡು ಮತ್ತು ನಮಗೆ ಆಹಾರ ದೊರಕುವಂತಾಗಲು ಗಾನ ಮಾಡು" (೬.೫೬.೫: ಸೀಷಧೋ ಗಣಂ).

ಋಗ್ವೇದದಲ್ಲಿ "ಗಣ"ಶಬ್ದವು ವಿವಿಧ ವಿಭಕ್ತಿ ರೂಪಗಳಲ್ಲಿ ಮತ್ತು ಸಮಾಸಗಳಲ್ಲಿ ಸುಮಾರು ಐವತ್ತು ಬಾರಿ ಬಂದಿದೆ. ಆ ಪದವನ್ನು ಅರ್ಥೈಸುವಲ್ಲಿ ಹಲವು ಪ್ರಭೇದಗಳು ಕಂಡುಬಂದಿವೆ. ಸಾಯಣನು ಅದಕ್ಕೆ ದೇವತೆಗಳ ಸಂಘ, ಮನುಷ್ಯ ಸಂಘ, ಯಜ್ಞಾದಿಗಳನ್ನು ಮಾಡುವ ಯಜಮಾನಗಣ, ಸಂಘಭೂತ (ಅಂದರೆ, ಸಾಮೂಹಿಕ ಸಂಘಟನೆ), ಒಟ್ಟಾಗಿ ಗಾನಮಾಡುವ ಸ್ತೋತೃಸಂಘ, ಇತ್ಯಾದಿ ಅರ್ಥಗಳನ್ನು ನೀಡಿದ್ದಾನೆ. ಯಾವ ಅರ್ಥವನ್ನು ಸ್ವೀಕರಿಸಿದರೂ ಆಯಾ ಸಂದರ್ಭಗಳಲ್ಲಿ ಸಾಮೂಹಿಕತೆಯನ್ನೇ ಸೂಚಿಸುವಂತಹ ಪದ ಅದು. ಬುಡಕಟ್ಟಿನ ಜನಾಂಗದ ಲಕ್ಷಣ ಅದರಲ್ಲಿ ಮೈವೆತ್ತಿದೆ. ಅಂತಹ ಜನಾಂಗದ ಸಾಮೂಹಿಕ ಜೀವನ ಧರ್ಮದ ಸ್ಥಾನದಲ್ಲಿ ಕ್ರಮೇಣ ತೋರಿಬರುವ ವಿಕಾಸಗಳನ್ನು ಗಮನಿಸೋಣ: ಸಮಾನತೆಯ ಲಕ್ಷಣವುಳ್ಳ ಗಣವು ಒಂದು ಹಂತದ್ದು; ಅದೇ ಗಣದಲ್ಲಿ ಮೇಲು - ಕೀಳೆಂಬ ಭೇದಗಳಿಂದ ವಿವಿಧ ಬಣಗಳು ಅಸ್ತಿತ್ವಕ್ಕೆ ಬಂದಾಗ ಹಿಂದಿನ ಜೀವನಧರ್ಮಗಳಿಗೆ ಬದಲಾಗಿ ಬೇರೊಂದು ವ್ಯವಸ್ಥೆಯು ಸಹಜವಾಗಿಯೇ ಕಾಣಿಸಿಕೊಳ್ಳುತ್ತದೆ. ಗಣದ ಮುಂಚಿನ ಉತ್ಪಾದನೆ ಮತ್ತು ವಿಭಜನೆಯ ವಿಧಾನವು ಬದಲಾಗಿ ಬೇರೆ ಬೇರೆ ಸ್ತರದ ಬಣಗಳು ಕಾಣಿಸಿಕೊಳ್ಳುತ್ತವೆ. ವಿಶ್ವದ ಎಲ್ಲ ಬುಡಕಟ್ಟು ಸಮಾಜಗಳ ಚರಿತ್ರೆಯೂ ಇದೇ. ಹೀಗೆ ವಿಂಗಡಣೆಗೊಳ್ಳುವ ಮುನ್ನ ಬುಡಕಟ್ಟಿನ ಸಾಮೂಹಿಕ ಜೀವನದ ಚರ್ಯೆ ಇದೆಯಲ್ಲಾ, ಅದನ್ನು ಸೂಚಿಸುವುದು ಋತ. ಅಂದಿದ್ದು, ಇಂದು ಇಲ್ಲವಾಗಿರುವ ವಿಶಿಷ್ಟ ವ್ಯವಸ್ಥೆ ಮತ್ತು ಜೀವನಧರ್ಮವನ್ನು ಕಂಡು ಋಗ್ವೇದದ ಕವಿ ಪರಿತಪಿಸುತ್ತಾನೆ. ಆಗ ಅವನ ಉದ್ಗಾರ "ನಮ್ಮ ಆ ಪ್ರಾಚೀನ ಕಾಲದ ಋತ ಎಲ್ಲಿ ಹೋಯಿತು?" ಎಂದು. ಋಗ್ವೇದದ ಮೊದಲನೆಯ ಮಂಡಲದ ಒಂದು ಪ್ರಸಂಗ ಹೀಗಿದೆ: ಸಾಮುದಾಯಿಕ ಜೀವನದ "ಸರಳ ನೈತಿಕ ಗಾಂಭೀರ್ಯ" ಮರೆಯಾಗಿದೆ. ಕುತ್ಸ ಎಂಬುವವನನ್ನು ಯಾರೋ ಬಾವಿಯೊಳಕ್ಕೆ ನೂಕಿಬಿಟ್ಟಿದ್ದಾರೆ. ಹಾಗೆನ್ನುವುದು ಒಂದು ರೂಪಕ: ಸಂಬಂಧಗಳು ಹಳಸಿವೆ, ಎಂದರ್ಥ. ಬಾವಿಯಲ್ಲಿ ಬಿದ್ದ ಕುತ್ಸ ಹೇಳುತ್ತಿದ್ದಾನೆ: ಆ ಪ್ರಾಚೀನ ಋತ ಹೋಯಿತೆಲ್ಲಿಗೆ? ಅದನ್ನೀಗ ಪೋಷಿಸುವವರು ಯಾರು? ಋತ - ಅನೃತಗಳ ವ್ಯಾಖ್ಯಾನವಾದರೂ ಏನು? (೧.೧೦೫.೪: ಕ್ವ ಋತಂ ಪೂರ್ವ್ಯಂ ಕಸ್ತದ್ಬಿಭರ್ತಿ ನೂತನಃ). ಮುಂದುವರಿದು ಕುತ್ಸ ಕೇಳುತ್ತಾನೆ: ಋತದ ಧಾರಣ ಶಕ್ತಿ ಎಲ್ಲಿ ಹೋಯಿತು? ವರುಣನ ದರ್ಶನವಾದರೂ ಉಂಟೆ? (೧.೧೦೫.೬: ಕದ್ವ ಋತಸ್ಯ ಧರ್ಣಸಿ ಕದ್ವರುಣಸ್ಯ ಚಕ್ಷಣಂ). ಪಲ್ಲಟವೆನ್ನಿ, ಪತನವೆನ್ನಿ, ಅಂತೂ ಸಮುದಾಯದ ವ್ಯವಸ್ಥೆಯಲ್ಲಿ ಗುಣಾತ್ಮಕ ಬದಲಾವಣೆ ಉಂಟಾಗಿದೆ.

ವಿಶ್ವದಲ್ಲಿ ಒಂದು ಪ್ರಕೃತಿ ನಿಯಮವಿದ್ದರೆ, ವಿಶ್ವದಲ್ಲಿ ಬಾಳುವವನು ನಿಯಮಾತೀತನಾಗಿ ಬಾಳುವುದು ಶಕ್ಯವೇ ಮತ್ತು ಸಾಧುವೇ? ಬಾಹ್ಯ ಪ್ರಪಂಚದ ನಿಯಮಗಳಿಂದ ಸ್ಫೂರ್ತಿ - ಪ್ರೇರಣೆಗಳನ್ನು ಪಡೆದು ತನ್ನ ಮತ್ತು ತನ್ನೊಡನಿರುವ ಇತರರ ಜೀವನವನ್ನೂ ನಿಯಮನಗೊಳಿಸಿಕೊಳ್ಳುವುದು ಮುಂದಿನ ಹೆಜ್ಜೆ. ಆ ಅರ್ಥದಲ್ಲಿ ಋತದ ಅರ್ಥವ್ಯಾಪ್ತಿಯೂ ಹಿಗ್ಗುತ್ತದೆ, ಅದು ನೈತಿಕ ನಿಯಮವೆನಿಸಿಕೊಳ್ಳುತ್ತದೆ. ಅನೃತಭಿನ್ನವಾದ ಋತ ಅದು; ಅದನ್ನೇ ಸತ್ಯವೆನ್ನುವುದು. ಮುಂದುವರಿದು, ಬೇರೊಂದು ನಿಯಮವನ್ನೂ ಅದು ಅಂತರ್ಗತ ಗೊಳಿಸಿಕೊಳ್ಳಬಲ್ಲದು. ಅದು ಆಚರಣೆಗಳಲ್ಲಿನ ನಿಯಮ ಅಥವಾ ನಿಷ್ಕೃಷ್ಟ ವಿಧಾನ. 'ಯಜ್ಞವನ್ನು ಅಥವಾ ಬೇರಾವುದೇ ಆಚರಣೆಯನ್ನು ಹೀಗೇ ಆಗುಮಾಡಬೇಕು' ಎಂಬುದು ಆಗ ಋತದ ಇನ್ನೊಂದು ವಿಸ್ತೃತಾರ್ಥವಾಗುತ್ತದೆ. ಮಹಾಮಹೋಪಾಧ್ಯಾಯ ಪಿ. ವಿ. ಕಾಣೆ ಗುರುತಿಸಿರುವಂತೆ "ಉದಾತ್ತ ಪರಿಕಲ್ಪನೆಯಾದ ಋತಕ್ಕೆ ಮೂರು ಆಯಾಮ ಗಳುಂಟು: ಪ್ರಕೃತಿಯ ಗತಿ ಅಥವಾ ಚಲನೆ, ಅಂದರೆ ವಿಶ್ವದ ನಿಯಮ ಬದ್ಧ ಅಸ್ತಿತ್ವ; ಆಚರಣೆಯಲ್ಲಿನ ಕಟ್ಟುನಿಟ್ಟು ವಿಧಾನ; ಮತ್ತು ಮಾನವನ ನೈತಿಕ

ನಡವಳಿಕೆ.” ದೇವತೆ, ಪ್ರಕೃತಿ ಮತ್ತು ಮಾನವ, ಹೀಗೆ ಮೂರೂ ಘಟಕಗಳ ಮೂಲ ನಿಯಮಕ್ಕೆ ‘ಋತ’ ಎಂಬ ಹೆಸರಿದೆ. ಆದಿಮ ಹಂತದಿಂದ ಆಗತಾನೆ ಹೊರಬಂದಿದ್ದ ವೇದಕಾಲೀನ ಜನಕ್ಕೆ ಅದೊಂದು ಜೀವನಮೌಲ್ಯವಾಯಿತು. ಅದರಲ್ಲಿ ನಿಗೂಢವಾದದ್ದೇನೂ ಇಲ್ಲ, ‘ಪರಮಾತ್ಮ’ನೆಂಬೊಬ್ಬನ ಕೈವಾಡವೂ ಇಲ್ಲ. ಚಲನೆ ಅಥವಾ ಕ್ರಿಯೆ, ಪ್ರಕೃತಿ ನಿಯಮ, ಮತ್ತು ನೈತಿಕ ಮೌಲ್ಯ, ಇವು ಋತದಲ್ಲಿ ಕ್ರೋಡೀಕರಿಸಲ್ಪಟ್ಟಿವೆ, ಅಷ್ಟೆ. ಇದರ ಪ್ರತಿರೂಪಗಳು ಪ್ರಾಚೀನ ಪರ್ಷಿಯಾದ ‘ಅವೆಸ್ತಾ’ ಮತ್ತು ಪ್ರಾಚೀನ ಚೀಣಾದ ‘ತವೋ’ ಸಿದ್ಧಾಂತಗಳಲ್ಲೂ ಕಾಣ ಬರುತ್ತವೆಂಬುದನ್ನು ಮುಂದೆ ನೋಡೋಣ. ಅಂತೆಯೇ, ಪ್ರಾಚೀನ ಗ್ರೀಸಿನ ಪರಿಕಲ್ಪನೆಗಳಲ್ಲಿ ಯಾವುವು ಋತಕ್ಕೆ ಸಂವಾದಿಯಾಗಿರುವಂತೆ ತೋರುತ್ತವೆಂಬುದನ್ನೂ ಚರ್ಚಿಸೋಣ. ಎಲ್ಲ ಸಂಸ್ಕೃತಿಗಳಲ್ಲೂ ಈ ಕಾಣ್ಕೆಯು “ಪರಿಶುದ್ಧ ಚಿಂತನೆ”ಯನ್ನು ಸಂಕೇತಿಸುತ್ತದೆ. ಪ್ರೊಫೆಸರ್ ಎಂ. ಹಿರಿಯಣ್ಣನವರು ಋತಕ್ಕೆ ಕೊಡುವ ಅಂತಿಮ ಅರ್ಥ ಅದೇ ಆಗಿದೆ.

ಋಗ್ವೇದದ ದೇವತೆಗಳು ಋತದ ನಿಯಂತ್ರಕರಲ್ಲ; ಅವರೆಲ್ಲಾ ಕೇವಲ ಋತದ ಪಾಲಕರು, ರಕ್ಷಕರು. ಪ್ರತಿದಿನ ಉಷೋದೇವಿಯು ಆವಿರ್ಭವಿಸುವುದು ಋತ, ಸೂರ್ಯನು ಆಕಾಶಸ್ಥನಾಗಿರುವುದು ಋತ, ಸಂವತ್ಸರದ ಹನ್ನೆರಡು ಅರೆಗಳು ಋತ, ಅರಣಿಗಳಿಂದ (ಅಂದರೆ, ಚಕಮಕಿ ಕಲ್ಲುಗಳಿಂದ) ಬೆಂಕಿ ಉದ್ಭವಿಸುವುದು ಋತ, ಹೊಳೆ ಹರಿಯುವುದು ಋತ. ಇವನ್ನು ಪ್ರತಿರೋಧಿಸುವುದು ಯಾರಿಂದಲೂ ಆಗದು. ಅರ್ಥಾತ್, ಪ್ರಕೃತಿಯಲ್ಲಿನ ಎಲ್ಲ ಘಟನೆಗಳೂ ತಮ್ಮದೇ ಸ್ವತಂತ್ರ ನಿಯಮಗಳಿಗೆ ಬದ್ಧವಾಗಿವೆ. ಅವು ಸಾರ್ವಕಾಲಿಕ, ಅಬಾಧಿತ. ಋತವು ವಿಜ್ಞಾನದ ಮೊದಲ ಮೆಟ್ಟಿಲಾಗುವುದು ಅದರ ಇಂತಹ ಲಕ್ಷಣದಿಂದಾಗಿ. ವರುಣ ಮುಂತಾದ ಋಗ್ವೇದದ ದೇವತೆಗಳು ಋತದಿಂದ ಜನಿಸಿದವರು, ಋತವನ್ನು ಮೈಗೂಡಿಸಿಕೊಂಡಿರುವವರು, ಋತದ ರಕ್ಷಕರು. ಆದ್ದರಿಂದಲೇ ಅವರೆಲ್ಲಾ ಅನೃತದ ದ್ವೇಷಿಗಳು (೭.೬೬.೧೩ : ಋತಾವಾನ ಋತಜಾತಾ ಋತಾವೃಧೋ ಘೋರಾಸೋ ಅನೃತದ್ವಿಷಃ). ಹಾಗಿದ್ದಾಗ್ಯೂ, ಋತವು ವಿಶೇಷವಾಗಿ ವರುಣನ ಪೋಷಣೆಯಲ್ಲಿದೆ. ಋಗ್ವೇದದ ವರುಣನು ನಂತರದ ಸಮುದ್ರ ದೇವತೆಯಾದ ವರುಣನಲ್ಲ, ಮಳೆಯ ಅಧಿಷ್ಠಾತೃ ದೇವತೆಯೂ ಅಲ್ಲ. ಋಗ್ವೇದದಲ್ಲಿ ಅವನು ಅಂತಹ ಸಂಕುಚಿತ ಪ್ರಾಂತ್ಯದ ಆಡಳಿತಗಾರನಲ್ಲ. ಅವನ ವ್ಯಾಪ್ತಿ ಅಮೋಘವಾದುದು, ಅನಂತವಾದುದು. ಅವನು ಆಡಳಿತ ನಡೆಸುವ ಸಾರ್ವಭೌಮನಲ್ಲ, ಆದರೆ ಪ್ರತಿಯೊಂದನ್ನೂ ಎವೆಯಿಕ್ಕದೆ ದೃಷ್ಟಿಸುತ್ತಿರುವ ಸಾರ್ವಭೌಮ ಅವನು; ಅಂದರೆ ಮಾನವನು ನೀತಿಯನ್ನು ಪಾಲಿಸುವುದನ್ನು ಅವನು ಗಮನಿಸುತ್ತಾನೆಯೇ ವಿನಾ ಅದನ್ನು ನಿರ್ದೇಶಿಸುವುದಿಲ್ಲ. ನೀತಿಯು ಆಂತರಿಕ ಪ್ರೇರಣೆಯಿಂದ ಬರುವಂಥದು, ಯಾರೋ ಬಲವಂತವಾಗಿ

# ಸುಮ್ಮನೇ ಕೂರುತ್ತೇನೆ !




ಕುಂಟೆಬಿಲ್ಲೆ ಆಡುವ
ಮೋಟು ಜಡೆ ಹುಡುಗಿಯರ
ಕಂಡಾಗ ಹಾಗೇ
ಜಿಗಿಯಬೇಕೆನ್ನಿಸುತ್ತದೆ ನನಗೆ
ಆದರೆ
ಸದಾ
ಮೌನ, ಸಹನೆ, ನಿಬಂಧನೆ
ಗಳ ಸಾವಿರ ಕೋಟೆಗಳಿಂದ
ಬಿರುಸು ಬಾಣ, ಗರ್ನಾಲುಗಳಂತೆ
ಎಲ್ಲಾ ಆಸೆಗಳು ಏರಿ ಏರಿ ಮೇಲೇರಿ
ಟಪ್ಪೆನ್ನುತ್ತವೆ.
ಸುಟ್ಟು ಭಸ್ಮವಾಗುತ್ತವೆ
ಅವರಿಗೆ ಆನಂದ ನೀಡುತ್ತದೆ.

ನನ್ನದೇ ಕತೆಗಳಿವೆ ಹೇಳಲು
ಅವೆಲ್ಲ ಇವರಿಗೆ ಸೋಲಿನ ಕತೆಗಳಂತೆ
ಹೇಳಿದರೆ ನನಗೆ ನಾನೇ ಹಳಿದುಕೊಂಡಂತೆ
ಹೇಳದಿರಲಾರೆ ಹೇಳಲಾರೆ
ಹೇಳಲು ಇಷ್ಟವಿಲ್ಲ ನನಗೆ
ಜೋರು ದನಿಯಿಂದ
ಅಹಂಕಾರದ ಮಡುವಿನಲ್ಲಿ ಓಲಾಡುವ
ಅವರ ಒಡನಾಟ ಮಾಡಲಾರೆ
ಆದರೆ
ಸದಾ
ಅವರ ಜೋರುದನಿಯ ಪಡೆಯಬೇಕಿದೆ.

ಹೇಳಲೇಬೇಕಿದೆ ನನ್ನದೇ ಕತೆಗಳ
ಕಾಯುತ್ತಿದ್ದೇನೆ ಮೌನವಾಗಿ
ಅವರ ನಿಂದೆ, ಗದರಿಕೆ, ನಿರಾಕರಣೆಗಳ
ಮಳೆ ತಡೆದು,
ಸುಮ್ಮನೇ ಕೂರುತ್ತೇನೆ
ಏನೂ ಆಗಿಲ್ಲವೆಂಬಂತೆ.

ಇನ್ನೂ, ಎಷ್ಟು ದಿನ
ಉರುಳಬೇಕು ?
ಉರುಳಲಿ
ಏನೂ ಆಗಿಲ್ಲವೆಂಬಂತೆ ಕೂರುತ್ತೇನೆ.
ಕಾಯುತ್ತೇನೆ
ನನಗೆ ನನ್ನದೇ ಕತೆಗಳ ಹೇಳಬೇಕಿದೆ.

**ಭವ್ಯ ಪಿ.**
ನಂ. ೩೪೩, ೩ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ
ಕಮಲಾನಗರ, ಬೆಂಗಳೂರು – ೫೬೦ ೦೭೯

ಹೊರಗಿನಿಂದ ಹೇರುವುದರಿಂದ ಬಂದುದಲ್ಲ. ನಮ್ಮ ದೇಶ ಉಪದೇಶಗಳ ದೇಶವಾಗಿ ಹೋಗಿದೆ; ಮತ್ತು ಉಪದೇಶ ನೀಡುವವರ ವೇಷಭೂಷಣಗಳು, ಅವರು ಕೂಡುವ ಅಧಿಕಾರಸ್ಥಾನ, ಅವರ ಲಜ್ಜೆಗೆಟ್ಟ ನಡತೆಯ ಹೊರತಾಗಿಯೂ ಶ್ರೇಷ್ಠರೆಂಬ ಪಾತಕದಲ್ಲಿ ವೈಭವದಿಂದ ಇರುವುದು, ಇವೆಲ್ಲಾ ಋಗ್ವೇದದ ನಿರೀಕ್ಷೆಗೆ ಹಲವು ಗಾವುದಗಳ ದೂರದ ಸಮಾಚಾರ. ಋಗ್ವೇದದ ಮಹತ್ವ ಅದರಲ್ಲಿದೆ, ಏಕೆಂದರೆ ವರುಣನು ಯಾರನ್ನೂ ಅಂಕೆಯಲ್ಲಿಡಲು ಪಾಶವನ್ನು ಬಳಸುವುದಿಲ್ಲ; ಬದಲಾಗಿ ಮಾನವನು ಸ್ವಯಂ ಅಂಕೆಯನ್ನು ಹಾಕಿಕೊಳ್ಳುತ್ತಾನೆಯೇ ಎಂಬುದನ್ನು ವೀಕ್ಷಿಸುತ್ತಾನೆ. ಹಾಗೆ ಅಂಕೆಯನ್ನು ವಿಧಿಸಿಕೊಳ್ಳದವನು ವರುಣನ ಪಾಶಕ್ಕೆ ಸಿಲುಕುತ್ತಾನೆ, ಅಷ್ಟೆ. ತತ್ವಶಾಸ್ತ್ರ ಪ್ರಣಾಲಿಕೆಗಳಲ್ಲಿ ಯಾವುದನ್ನು "ಸ್ವತಂತ್ರ ಇಚ್ಛೆ" (ಫ್ರೀ ವಿಲ್) ಎನ್ನುತ್ತಾರೋ ಅದು ಋಗ್ವೇದದ ನೈತಿಕ ಇಂಗಿತದ ಆಧಾರ. ಹಾಗೆ ನೋಡಿದರೆ, ಮತ್ತೆ ಇದು ಗಣಗಳ ಜೀವನಕ್ರಮದ ಅವಿಭಾಜ್ಯ ಅಂಗವಾಗಿರುವುದರತ್ತ ನಮ್ಮನ್ನು ಕೊಂಡೊಯ್ಯುತ್ತದೆ. ಋಗ್ವೇದದ ಇಂತಹ ಮೂಲಭೂತ ಕವಚವನ್ನು ಕಳಚಿ, ಅಲ್ಲಿಯ ದೇವತೆಗಳ "ನಿಗೂಢ" ಅವತಾರಗಳ ಬಗ್ಗೆ ಅಪಲಪಿಸುವುದು ಎಷ್ಟು ಅಸಂಬದ್ಧ ಎನಿಸುತ್ತದೆ!

ವರುಣನನ್ನು ಕುರಿತು ಋಗ್ವೇದದಲ್ಲಿ ಪ್ರಾರ್ಥನೆಗಳೇ ಇಲ್ಲವೆಂದಲ್ಲ, ಆದರೆ ಇರುವುವೆಲ್ಲಾ ಉತ್ತರೋತ್ತರ ಬಂದಿರುವಂಥವು. ಮೂಲತಃ, ಪ್ರಕೃತಿಯ ಆಗುಹೋಗುಗಳನ್ನೆಲ್ಲಾ ಋತವು ಪ್ರತಿನಿಧಿಸುತ್ತದೆ ಮತ್ತು ವರುಣನು ಆ ಸಂಗತಿಗಳನ್ನೆಲ್ಲಾ ತಿಳಿದಿರುತ್ತಾನೆ. ಆಕಾಶದಲ್ಲಿ ಹಕ್ಕಿ ಹಾರಿದಾಗ ಅದು ಕಾಣುತ್ತದೆ, ಆದರೆ ಅದು ಹಾರಿಹೋದ ತರುವಾಯದಲ್ಲಿ ಅದು ಹಾರಿದ ಹಾದಿಯನ್ನು ಸರಿಯಾಗಿ ಗುರುತಿಸಲಾಗದು. ಆದರೆ ವರುಣನಿಗೆ ಅದೂ ತಿಳಿಯುತ್ತದೆ (೧.೨೫.೭ : ವೇದಾ ಯೋ ವೀನಾಂ ಪದಂ ಅಂತರಿಕ್ಷೇಣ ಪತತಾಂ); ಸಂವತ್ಸರದ ಹನ್ನೆರಡು ತಿಂಗಳುಗಳ ಬದಲಾವಣೆಗಳನ್ನೆಲ್ಲಾ ಅವನು ತಿಳಿದಿರುತ್ತಾನೆ (೧.೨೫.೮ : ವೇದ ಮಾಸೋ ಧೃತವ್ರತೋ ದ್ವಾದಶ ಪ್ರಜಾವತಃ। ವೇದಾ ಯ ಉಪಜಾಯತೇ); ಗಾಳಿಯ ಹಾದಿ ಸಹ ಅವನಿಗೆ ಗೊತ್ತು (೧.೨೫.೯ : ವೇದ ವಾತಸ್ಯ ವರ್ತನಿಂ). ಅಷ್ಟೇ ಏಕೆ, ವಿಶ್ವದಲ್ಲಿ ಜರುಗಿರುವುದು ಮತ್ತು ಮುಂದೆ ಜರುಗುವುದು, ಎಲ್ಲಾ ಅವನ ಜ್ಞಾನಪರಿಧಿಗೆ ಸೇರಿದೆ (೧.೨೫.೧೧ : ಅತೋ ವಿಶ್ವಾನಿ ಅದ್ಭುತಾ ಚಿಕಿತ್ವಾನ್ ಅಭಿ ಪಶ್ಯತಿ। ಕೃತಾನಿ ಯಾ ಚ ಕರ್ತ್ವಾ॥).

ಹೀಗೆ ಇನ್ನೂ ಹತ್ತಾರು ಮಂತ್ರಗಳನ್ನು ಹೆಕ್ಕಿ ತೆಗೆಯಬಹುದು, ಆದರೆ ಅದರ ಅಗತ್ಯವಿಲ್ಲ. ಮುಖ್ಯವಾಗಿ ತಿಳಿಯಬೇಕಾದ್ದಿದು : ಋತದ ಶಕ್ತಿಯು ಆಂತರಿಕವಾದ್ದು, ಅದನ್ನು ಯಾರೂ ಅದರೊಳಕ್ಕೆ ತುಂಬಿಕೊಟ್ಟಿಲ್ಲ. ಅದನ್ನು ಮಾಡುವ ಜವಾಬ್ದಾರಿ ಯಾವ ದೇವತೆಯೂ ಹೊರಬೇಕಾಗಿಲ್ಲ. ಇದರ ವಿಸ್ತೃತಾರ್ಥವೇನು? ಪ್ರಕೃತಿಯು ಅಸ್ತಿತ್ವದಲ್ಲಿದೆ, ಅದರ ಅಸ್ತಿತ್ವವು ವಸ್ತುನಿಷ್ಠವಾದ್ದು. ಇದು ಭೌತವಾದಿ ಚಿಂತನೆಯ ಅಸ್ತಿಭಾರ. ಇಲ್ಲಿ ವ್ಯಕ್ತಿನಿಷ್ಠ ಸತ್ಯದ ಗೋಜಿಲ್ಲ, ಮಾಯೆ – ಅವಿದ್ಯೆ ಇತ್ಯಾದಿಗಳ ಪ್ರಸ್ತಾಪವಿಲ್ಲ. ಸ್ಪಷ್ಟ ವಿಜ್ಞಾನ ಮೀಮಾಂಸೆಗೆ ಇದಕ್ಕಿಂತಲೂ ಹೆಚ್ಚಿನ ಅಡಿಪಾಯ ಅನಗತ್ಯ. ನ್ಯೂಟನ್ ೧೭೮೬ರಲ್ಲಿ ಹೇಳಿದ್ದ, "ದೇವರು ನಿಗದಿಗೊಳಿಸಿದ ನಿಯಮಗಳನ್ನು ಪ್ರಕೃತಿಯು ಅನುಸರಿಸುತ್ತದೆ", ಎಂದು. ಋಗ್ವೇದದ ಪ್ರಕೃತಿ ಮಾತೆಗೆ ಅಂತಹ ಬೇರೊಬ್ಬ ದೇವರ ಅವಶ್ಯಕತೆಯೇ ಇಲ್ಲ; ಏಕೆಂದರೆ, ಪ್ರಕೃತಿಯ ಸಾರ್ವಕಾಲಿಕ ಏಕತಾನಕತೆಯು ಸಂಪೂರ್ಣವಾಗಿ ಸ್ವಾಯತ್ತವಾದ್ದು. ಹತ್ತನೆಯ ಮಂಡಲದ ಒಂದು ಪದ್ಯದಲ್ಲಿ ಅಂಗೀರಸರು "ಸೂರ್ಯನನ್ನು ಆಕಾಶದಲ್ಲಿ ತಮ್ಮ ಋತದಿಂದ ಸ್ಥಾಪಿಸಿದರು, ಅಂತೆಯೇ ಭೂಮಿತಾಯಿಯನ್ನು ಸಿದ್ಧಿಗೊಳಿಸಿದರು," ಎಂಬ ಮಾತಿದೆ (ಯ ಋತೇನ ಸೂರ್ಯ ಮಾರೋಹಯನ್ ದಿವಿ ಅಪ್ರಥಯನ್ ಪೃಥಿವೀಂ ಮಾತರಂ ಚ॥ – ೧೦.೬೨.೩). ಪ್ರಕೃತಿಯ ಸ್ವಾಯತ್ತತೆಯ ಬಗ್ಗೆ ಬೇರಿನ್ನೇನು ಸಮರ್ಥನೆ ಬೇಕು? ಅದರಲ್ಲಿ ತಿಳಿಯಲಾಗದಂತಹ ನಿಗೂಢ ಸತ್ಯವೇನಿದೆ? ವೇದ ವಾಕ್ಯಗಳನ್ನು ಅಧಿಕೃತ ಸತ್ಯವೆಂದು ಘೋಷಿಸುವ ಶಂಕರಾಚಾರ್ಯ, ಪ್ರಕೃತಿಯ ಸ್ವತಂತ್ರ ಅಸ್ತಿತ್ವವನ್ನು ನಿರಾಕರಿಸುವಾಗ ಆತನಿಗೆ ಇಂತಹ ವೇದವಾಕ್ಯಗಳ ಅರಿವಿರಲಿಲ್ಲವೆ ಎಂಬ ಶಂಕೆ ಅಸಹಜವೇನಲ್ಲ. ಪ್ರಶಸ್ತ ಪ್ರಾಚೀನ ವೈದ್ಯಕೀಯ ಗ್ರಂಥವಾದ ಚರಕ ಸಂಹಿತೆಯು ಪ್ರಕೃತಿಯನ್ನು ವಾಸ್ತವವಾಗಿ ಇರುವಂತೆಯೇ ಗ್ರಹಿಸಿತು ಮತ್ತು ಸ್ವೀಕರಿಸಿತು. ತಾನು ವೇದಕ್ಕೆ ಬದ್ಧವೆಂದೇನೂ ಅದು ಘೋಷಿಸಿಕೊಳ್ಳಲಿಲ್ಲ. ಆದರೆ 'ವೇದಕ್ಕೆ ಬದ್ಧವಾದ' ಬ್ರಹ್ಮಸೂತ್ರ ಮತ್ತು ಶಂಕರ, ಪ್ರಕೃತಿಯನ್ನು ಅದಿರುವಂತೆ ಸ್ವೀಕರಿಸಲು ಹಿಂದೇಟು ಹಾಕಬೇಕಾಯಿತು. ನಮ್ಮ ಸಮಾಜದ ವಿಕಾಸ ಮತ್ತು ಬೌದ್ಧಿಕ ಚಿಂತನೆಯ ಒಂದು ವಿಪರ್ಯಾಸ ಇದು. ವಿಶೇಷವೆಂದರೆ ಋಗ್ವೇದದ ಉತ್ತರಕಾಲದಲ್ಲಿ ಋತ ಮತ್ತು ವರುಣ ಕ್ರಮೇಣ ತಮ್ಮ ವರ್ಚಸ್ಸನ್ನು ಕಳೆದುಕೊಂಡು ಬೇರೆಯೇ ಸ್ವರೂಪವನ್ನು ಧರಿಸುವಂತಾಯಿತು. ಋತದ ಪ್ರಜ್ಞೆಯು ಕಾಡುವಂತಹ ಆರಂಭಿಕ ದೆಸೆಯಿಂದ 'ಏನಾದರೇನಂತೆ, ನನಗೆ ಸಂಪತ್ತು ಲಭ್ಯವಾಗಲಿ' ಎಂಬ ಮನಃಸ್ಥಿತಿ ತೋರಿ ಬಂದಿತು. ಬುಡಕಟ್ಟಿನ ಸಮಷ್ಟಿಯ ಹಿತದ ಬದಲು ವಿಭಜಿತ ಸಮಾಜದ ವೈಯಕ್ತಿಕ ಆಶಯಗಳು ಪ್ರಧಾನವಾದವು. ಇಂದ್ರನನ್ನು ಉದ್ದೇಶಿಸಿ ಹೇಳುವ ಒಂದು ಮಂತ್ರ ಹೀಗಿದೆ : "ಎಲೈ ಇಂದ್ರ, ಯಾರು ನಿನಗೆ ಯಜ್ಞಾದಿಗಳಲ್ಲಿ ಆಹುತಿ ನೀಡುವುದಿಲ್ಲವೋ, ಅದರಿಂದಾಗಿ ನಿನಗೆ ಪ್ರಿಯನಲ್ಲವೋ, ಅಂಥವನನ್ನು ಚಚ್ಚಿಹಾಕು; ಅವನ ಸಂಪತ್ತನ್ನು ನನಗೆ ಕೊಡಮಾಡು, ಏಕೆಂದರೆ ನಿನ್ನನ್ನು ಸ್ತುತಿಸುವ ನಾನು ಅದನ್ನು ಪಡೆಯಲು ಯೋಗ್ಯ" (೧.೧೭೬.೪ : ಅಸುನ್ವಂತಂ ಸಮಂ ಜಹಿ ದುಣಾಶಂ ಯೋ ನ ತೇ ಮಯಃ। ಅಸ್ಮಭ್ಯಂ ಅಸ್ಯ ವೇದನಂ ದದ್ಧಿ ಸೂರಿಶ್ಚಿತ್ ಓಹತೇ॥).

ಋಗ್ವೇದದ ವರುಣನ ಸಂಬಂಧದಲ್ಲಿ ಇದು ಅನೂಹ್ಯ; ಅವನು ಬುಡಕಟ್ಟು ಸಂಪ್ರದಾಯದ ಋತದ ಪೋಷಕ. ಅವನನ್ನು ಕುರಿತ ಒಂದು ಇಡೀ ಸೂಕ್ತ (೧.೨೫) ಅಧ್ಯಯನ ಯೋಗ್ಯವಾಗಿದೆ. ಅಲ್ಲಿಯ ನೈತಿಕ ಪ್ರಜ್ಞೆಯ ಸೊಗಸನ್ನು ನೋಡಿ : "ನಾವು ಅತಿಸಾಮಾನ್ಯರು, ಅದರಿಂದಾಗಿ ನೀನು ಹಾಕಿಕೊಟ್ಟಿರುವ ವ್ರತದ ಗೆರೆಯನ್ನು ದಾಟಿ ಹೋಗಿಬಿಡುತ್ತೇವೆ. ಎಷ್ಟೋ ವೇಳೆ ದೇವತೆಗೆ ಹಾಗೂ ಕುಲದ ಜನರಿಗೆ ಕೆಟ್ಟದ್ದು ಮಾಡಿಬಿಡುತ್ತೇವೆ. ಅಷ್ಟಕ್ಕೂ, ನಾವು ಕೇವಲ ಮನುಷ್ಯರಲ್ಲವೆ! ಆದ್ದರಿಂದ ನೀನು ಹಾಕಿಕೊಟ್ಟ ಹಾದಿಯನ್ನು ಮೀರಿ ನಡೆದಾಗ, ಅಪಾಮಾರ್ಗವನ್ನು ಹಿಡಿದಾಗ, ಕೋಪಿಸಬೇಡ" (೧.೨೫.೧ : ಯಚ್ಚಿದ್ಧಿ ತೇ ವಿಶೋ ಯಥಾ ಪ್ರದೇವ ವರುಣ ವ್ರತಂ। ಮಿನೀಮಸಿ ದ್ಯವಿ ದ್ಯವಿ॥ ಮತ್ತು ಬೇರೊಂದೆಡೆ : ಯತ್ಕಿಂಚೇದಂ ವರುಣ ದೈವ್ಯೇ ಜನೇಽಭಿದ್ರೋಹಂ। ಮನುಷ್ಯಾಃ ಚರಾಮಸಿ॥ ಅಚಿತ್ತೀ ಯತ್ತವ ಧರ್ಮಾ ಯುಯೋಪಿಮ। ಮಾ ನಃ ತಸ್ಮಾದೇನಸೋ ದೇವ ರೀರಿಷಃ॥).

"ನಾವು ಸಾಧಾರಣ ಜನ, ಕೆಲವೊಮ್ಮೆ ಜೂಜಾಡಲು ಹೋಗಿಬಿಡುತ್ತೇವೆ. ಅಲ್ಲಿ ದಾಳಗಳನ್ನೆಸೆಯುತ್ತಾ ತಿಳಿದೋ ತಿಳಿಯದೆಯೋ ಮೋಸವೆಸಗಿಬಿಡುತ್ತೇವೆ. ಅಂತಹ ಕೃತ್ಯಗಳ ಫಲದಿಂದ ನಮ್ಮನ್ನು ಮುಕ್ತಗೊಳಿಸು, ನಾವು ನಿನ್ನ ಪ್ರಿಯರಲ್ಲವೆ!" (೫.೮೫.೮ : ಕಿತವಾಸೋ ಯದ್ರಿರಿಪುಃ ನ ದೀವೀ ಯದ್ವಾ ಘಾ ಸತ್ಯಂ ಉತ ಯನ್ನ ವಿದ್ಮ। ಸರ್ವಾ ತಾ ವಿಷ್ಯ ಶಿಥಿರೇವ ದೇವ ಅಧಾ ತೇ ಸ್ಯಾಮ ವರುಣ ಪ್ರಿಯಾಸಃ॥).

ಕೆಲವು ವಿದ್ವಾಂಸರು ಋಗ್ವೇದದಲ್ಲಿ ಪಾಪ ಮತ್ತು ಪುಣ್ಯಗಳ ಕಲ್ಪನೆ ಕುರಿತು ಚರ್ಚಿಸುವಾಗ ಆ ಎರಡು ಪದಗಳು ಎಷ್ಟು ಬಾರಿ ಬಂದಿವೆ ಎಂದು ಲೆಕ್ಕ ಹಾಕಿ ಹತಾಶರಾಗಿಬಿಡುತ್ತಾರೆ. ಏಕೆಂದರೆ 'ಪುಣ್ಯ' ಬರುವುದೇ ಒಂದು ಸಲ (೨.೪೩.೨ : .. ವಿಶ್ವತೋ ನಃ ಶಕುನೇ ಪುಣ್ಯಂ ಆ ವದ). ಇಲ್ಲಿ 'ಪುಣ್ಯ' ಎಂದರೆ ನಮ್ಮ ಪುಣ್ಯವಲ್ಲ ಮತ್ತು 'ಶಕುನೇ' ಎಂದರೆ ಶಕುನಗಳಿಗೆ ಸಂಬಂಧಿಸಿದ್ದಲ್ಲ. ಇನ್ನೊಂದು ಸಲ (೭.೫೫.೮) "ಪುಣ್ಯ ಗಂಧಾಃ" ಎಂಬ ಪದ ಬಂದಿದೆ; ಅದು ಸ್ತ್ರೀಯರ ಗುಣವಾಚಕವಾದ್ದು, ಅಷ್ಟೆ. ಇನ್ನು "ಪಾಪಃ" ಒಂದು ಬಾರಿ (೧೦.೧೬೪.೫) ಮತ್ತು "ಪಾಪಂ" ಒಂದು ಬಾರಿ (೧೦.೧೦.೧೨) ಬರುತ್ತವೆ. ಬೇರೆ ವಿಭಕ್ತಿ ರೂಪಗಳಲ್ಲಿ ಇನ್ನಷ್ಟು ಬಾರಿ ಬಂದಿದೆ. ಎರಡು ಬಾರಿಯೂ 'ಪಾಪ' ಶಬ್ದವು ನಮ್ಮ ಪಾಪದ ಅರ್ಥವನ್ನೇ ಹೊಂದಿದೆ. ಋಗ್ವೇದದ ಕರ್ತೃಗಳಿಗೆ ಪುಣ್ಯದ ವಾಂಛೆ ಇಲ್ಲವೆಂದು ನಾವೇನೂ ಭಗ್ನ ಹೃದಯಿಗಳಾಗಬೇಕಾಗಿಲ್ಲ; ಏಕೆಂದರೆ, ಅವರು ಬುಡಕಟ್ಟುಗಳ ನಿಯಮಗಳ ಪಾಲಕರು. ಬುಡಕಟ್ಟುಗಳ "ಸರಳ ಗಂಭೀರ ನೈತಿಕತೆ" ಸುಭದ್ರವಾದ್ದು, ಅನುಕರಣೀಯವಾದ್ದು. ಅದು ಸಮುದಾಯದ ಪರವಾಗಿ ರೂಪಿಸಲ್ಪಟ್ಟ ನೈತಿಕತೆ.

**ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧
೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ,
ಬೆಂಗಳೂರು – ೫೬೦ ೦೮೫

ಈ ಸಲದ ಚುನಾವಣೆಯಲ್ಲಿ ಕರ್ತವ್ಯನಿರತ ಮೂವರು ತೀರಿಕೊಂಡರು. ಹೃದಯಾಘಾತದಿಂದ ಸತ್ತರು. ಶಿಕ್ಷಕಿ ಲೀಲಾವತಿ ಹುಚ್ಚಪ್ಪ ಮೂಡಬಾಗಿಲು (33), ಎಂ. ಸಿ. ಮಹೇಂದ್ರ (50), ತಿಮ್ಮಯ್ಯ (57) ತೀರಿಕೊಂಡದ್ದನ್ನು ಮಾಧ್ಯಮಗಳು ಸುದ್ದಿ ಮಾಡಿದವು, ನಿಜ. ಯಾರಿಗೆ ತಟ್ಟಿದವು ಈ ಸಾವುಗಳು ! ಪಕ್ಷವೊಂದು ಅಧಿಕಾರಕ್ಕೆ ಬಂತು. ಮುಖ್ಯಮಂತ್ರಿ ಅವರು ಖುಷಿಯಿಂದ ಸಾಹಿತಿಗಳನ್ನು, ಹಿತೈಷಿಗಳನ್ನು ಭೇಟಿ ಮಾಡಿದರು. ಚುನಾವಣಾ ಕರ್ತವ್ಯಕ್ಕೆ ಹೋಗಿ ಮರಣಹೊಂದಿದವರನ್ನು ಮರೆತರು. ಮಾಧ್ಯಮಗಳೇ ಮರೆತವು. ಯಾರು ಮಂತ್ರಿಗಳಾಗುತ್ತಾರೆಂಬ ಸುದ್ದಿಗಳನ್ನು ಬಿತ್ತರಿಸಲು ಮಾಧ್ಯಮಗಳು ಬಿಜಿಯಾದವು. ಮೇ ತಿಂಗಳಲ್ಲಿ ಮದುವೆಗಳ ಸೀಜನ್ ಬಂದು, ಜನರು ಮದುವೆಗಳಲ್ಲಿ ಬಿಜಿಯಾದರು. ಮತದಾನ ಮಾಡಲು ಗಂಡ-ಹೆಂಡತಿಯರನ್ನು ಒಮ್ಮೆ ಬಿಟ್ಟದ್ದಕ್ಕೆ ಪ್ರಿಸೈಡಿಂಗ್ ಅಧಿಕಾರಿ ಅಮಾನತ್ತು ಆದ. ಈ ದುರಂತಕ್ಕೆ ಕೊನೆ ಇಲ್ಲವೇ ?

೨೦೧೩ರ ಮೇ ತಿಂಗಳಲ್ಲಿ ನಡೆದ ವಿದ್ಯಮಾನಗಳನ್ನು ಕರ್ನಾಟಕದ ಜನರು ಬಹುದಿನಗಳ ಕಾಲ ನೆನಪಿನಲ್ಲಿ ಇಟ್ಟುಕೊಳ್ಳುತ್ತಾರೆಂದು ಅನ್ನಿಸುತ್ತಿದೆ. ಅದರಲ್ಲೂ ಮತದಾನದ ಮೇ-೫ರ ದಿನ, ನಂತರದ ಎರಡು ದಿನ ಹಾಗೂ ಫಲಿತಾಂಶದ ಮೇ-೮ರ ದಿನಗಳಂತೂ ಕರ್ನಾಟಕದ ಜನರನ್ನೂ ಒತ್ತಡದಲ್ಲಿಟ್ಟಿದ್ದವು. ಈ ಸಲದ ಚುನಾವಣೆಯೇ ಹಾಗಿತ್ತು. ಕರ್ನಾಟಕಕ್ಕೆ ಚುನಾವಣೆ ದೆವ್ವ ಬಡಿದಿತ್ತು. ಈ ದೆವ್ವವನ್ನು ಬಡಿಸಿಕೊಂಡವರು ಕೇವಲ ರಾಜಕಾರಣಿಗಳು ಮಾತ್ರವಲ್ಲ, ಮತದಾರನೂ ಬಡಿಸಿಕೊಂಡು ಹುಚ್ಚೆದ್ದು ಕುಣಿದುಬಿಟ್ಟ. ಚುನಾವಣಾ ದೆವ್ವವನ್ನು ಬಡಿಸಿಕೊಂಡು ಹುಚ್ಚೆದ್ದು ಕುಣಿಯುವವರನ್ನು ಯಾರೂ ಯಾವ ಊರಿನ, ಯಾವ ಓಣಿ – ಪೇಟೆ – ಮನೆಯಲ್ಲಿ ನೋಡಿದರೂ ಸಿಗುತ್ತಿದ್ದರು. ಹುಚ್ಚರಿಗೆ ಅವರವರದೇ ಲೆಕ್ಕಾಚಾರ. ಈ ಲೆಕ್ಕಾಚಾರವನ್ನು ಈ ಹುಚ್ಚರಲ್ಲಿ ತುಂಬಿದ್ದು ಪತ್ರಿಕೆಗಳು ಮತ್ತು ಟಿ.ವಿ. ಚಾನಲ್‌ಗಳು. ಚುನಾವಣಾ ಲೆಕ್ಕಾಚಾರದಲ್ಲಿ ತೊಡಗಿದ್ದ ಜನರಿಗೆ ಖಬರೇ ಇರಲಿಲ್ಲ. ಆಟೋ, ಬಸ್, ಲಾರಿ ಚಾಲಕರಿಂದ ಹಿಡಿದು ಸಂತೆಯ ವ್ಯವಹಾರಿಗಳನ್ನು ಒಳಗೊಂಡು, ನೌಕರಸ್ಥರನ್ನು, ಶಿಕ್ಷಕರನ್ನು, ವಿದ್ಯಾರ್ಥಿ-ವಿದ್ಯಾರ್ಥಿನಿಯರನ್ನು ಬಿಡದೆ ಚುನಾವಣಾ ದೆವ್ವ ಹಿಡಿದಿತ್ತು. ಅದರಲ್ಲೂ ಪತ್ರಿಕೆಗಳಿಗೆ, ಟಿ.ವಿ. ಚಾನಲ್‌ಗಳಿಗೆ ಬ್ರಹ್ಮರಾಕ್ಷಸವೇ ಬಡಿದಿತ್ತೆಂದು ಕಾಣುತ್ತದೆ. ಕರ್ನಾಟಕದ ಮೂಲೆ ಮೂಲೆಗಳನ್ನು ಶೋಧಿಸಿ ತಂದ ಸುದ್ದಿಗಳನ್ನು ಪ್ರಕಟಿಸಿದವು; ಬಿತ್ತರಿಸಿದವು; ಪ್ರಸಾರ ಮಾಡಿದವು. ಈ ಸುದ್ದಿಗಳನ್ನು ಓದಿದ, ಕೇಳಿದ, ನೋಡಿದ ಜನರು ಹುಚ್ಚೆಡಿಸಿಕೊಳ್ಳುತ್ತಿದ್ದರು. ಇದರ ಮೇಲೆ ಈ ವರ್ಷದ ಬಿಸಿಲನ್ನು ಭೂಮಿಯೇ ತಡೆಯಲಾರದಾಗಿತ್ತು.

# ಯಾರನ್ನೂ ತಟ್ಟದ ಈ ಸಾವುಗಳು

ನಮಗೆ ಪ್ರತಿವರ್ಷದಂತೆ ಈ ವರ್ಷವೂ ಏಪ್ರಿಲ್-೧೫ಕ್ಕೆ ಬೇಸಿಗೆ ರಜೆ ಬಂತು. 'ಚುನಾವಣಾ ಕರ್ತವ್ಯಕ್ಕೆ ಕರೆ ಬಂದರೆ ಕಡ್ಡಾಯವಾಗಿ ಹಾಜರಾಗಿ' ಎಂಬ ಸುತ್ತೋಲೆಯೂ ಬಂದಿತ್ತು. ಸರ್ಕಾರಿ ನೌಕರರಿಗೆ ಚುನಾವಣಾ ಕರ್ತವ್ಯವೆಂದರೆ ಎದೆಯಲ್ಲಿ ಮುಳ್ಳುಮುರಿದ ಅನುಭವ. ಅದು ಅಳುಕುತ್ತಲೇ ಇರುತ್ತದೆ. ಅದು ವಾಸಿಯಾಗುವುದು ಚುನಾವಣಾ ಕೆಲಸ ಮುಗಿಸಿ ಬಂದ ಮೇಲೆಯೇ. ಮುರಿದ ಮುಳ್ಳನ್ನು ತೆಗೆಸಿಕೊಳ್ಳುವಾಗಿನ ನೋವನ್ನು ಅನುಭವಿಸಲೇಬೇಕು. ಚುನಾವಣಾ ಕೆಲಸದಿಂದ ಆದ ಗಾಯ ಮಾದರೂ ಅದರ ಕಲೆ ಇರುತ್ತದೆ. ನಾನು ೪ರಿಂದ ೫ ಸಲ ಚುನಾವಣಾ ಕೆಲಸಮಾಡಿ ಅನುಭವಿಸಿದ್ದೇನೆ. ಸರ್ಕಾರವೂ ಈ ಕೆಲಸ ಮಾಡುವವರ ಪರವಾಗಿ ಕನಿಷ್ಠ ಪ್ರಮಾಣದ ಕಾಳಜಿಯನ್ನೂ ತೋರಿಸುವುದಿಲ್ಲ. ಚುನಾವಣೆಯ ಜವಾಬ್ದಾರಿ ಹೊತ್ತ ಜಿಲ್ಲಾಧಿಕಾರಿಯಾಗಲಿ, ತಹಶೀಲ್ದಾರರಾಗಲಿ ನಮ್ಮ ಕೈಗೆ ಸಿಗುವುದಿಲ್ಲ. ಅದಕ್ಕಾಗಿ ದೇವರನ್ನು ಬೇಡುತ್ತೇನೆ; ಪ್ರಿಸೈಡಿಂಗ್ ಅಧಿಕಾರಿಯನ್ನಾಗಿ ಮಾಡಬೇಡ, ಮತದಾರರ ಕೈ ಬೆರಳಿಗೆ ಶಾಹಿ ಹಚ್ಚುವ ಕೆಲಸ ಕೊಡು ಎಂದು. ಆದರೆ ದೇವರಿಂದ ವರ ಸಿಕ್ಕಿಲ್ಲ. ಇರಲಿ, ಈ ವಿಷಯವನ್ನು ಕೊನೆಗೆ ವಿವರಿಸುತ್ತೇನೆ.

ಅದ್ಯಾಕೋ ಏನೋ ಗೊತ್ತಿಲ್ಲ, ಏಪ್ರಿಲ್ ತಿಂಗಳಲ್ಲಿಯೇ ನನಗೆ ತಿರುಗಾಡುವುದು ಬಂತು. ಅನಿವಾರ್ಯವಾಗಿ ಏಪ್ರಿಲ್ ಕೊನೆಯವರೆಗೆ ರಾಯಚೂರು, ವಿಜಾಪುರ, ಬಳ್ಳಾರಿ, ಗುಲಬರ್ಗಾ ನಗರಗಳಿಗೆ ಮತ್ತು ಶಿವಮೊಗ್ಗ, ಧಾರವಾಡ, ಬೆಂಗಳೂರು ನಗರಗಳಿಗೆ ಬಿಸಿಲಿನ ಧಗೆ, ಝಳ, ಉರಿ ಹೇಗೆ ಕರೆದರೂ ಈ ಬಿಸಿಲಿನ ಸ್ವರೂಪವನ್ನು ಹೇಳಲು ಸಾಧ್ಯವಿಲ್ಲ. ನನ್ನ ಪ್ರತಿ ಪ್ರಯಾಣದ ದಿನಗಳಲ್ಲಿ ಕಣ್ಣುರಿ, ಬಾಯುರಿ, ತಲೆಯುರಿ, ಹೇಳಲಾಗದ ಉರಿಗಳೆಲ್ಲ ಮೈ-ಮನಸ್ಸಿನಲ್ಲಿ ಕಾಣಿಸಿಕೊಂಡು, ಅದನ್ನು ತಣ್ಣಗಾಗಿಸಿಕೊಳ್ಳಲು ಲೀಟರ್‌ಗಟ್ಟಲೆ ಮಜ್ಜಿಗೆ, ಎಳೆನೀರು, ನಿಂಬೇರಸ ... ಹೀಗೆ ಏನು ಸಿಗುತ್ತದೋ ಅದೆಲ್ಲವನ್ನೂ ಕುಡಿದು



ಉರಿಯನ್ನು ತಣಿಸಿಕೊಳ್ಳಲು ಯತ್ನಿಸುತ್ತಿದ್ದೆ. ಬಳ್ಳಾರಿ, ರಾಯಚೂರು, ವಿಜಾಪುರ, ಗುಲಬರ್ಗಾ ಜಿಲ್ಲೆಯ ಜನಗಳು ಬಿಸಿಲಿನ ಧಗೆಗೆ, ಉರಿಗೆ ಅಂಜುತ್ತಾರೆಯೇ ? ಬಿಸಿಲನ್ನು ಲೆಕ್ಕಿಸದೆ ಮಕ್ಕಳು ಆಟದ ಬಯಲಿನಲ್ಲಿ ಆಡುತ್ತಲೇ ಇರುತ್ತಾರೆ. ಸಂತೆಗಳು ನಡೆಯುತ್ತಲೇ ಇರುತ್ತವೆ. ಜಾತ್ರೆಗಳು ಈ ಬಿಸಿಲ ಕಾಲದಲ್ಲಿಯೇ ಹೆಚ್ಚು. ಮೇ ತಿಂಗಳಲ್ಲಿ ಮದುವೆಗಳಂತೂ ಲೆಕ್ಕವಿಲ್ಲ. ಬಸ್ಸು – ರೈಲು ತುಂಬಿರುತ್ತವೆ. ಹೊಟೇಲ್‌ಗಳಲ್ಲಿ ಜನವೋ ಜನ. ಬಿಸಿಲನ್ನು ಲೆಕ್ಕಿಸದೆ ಮಕ್ಕಳು ಐಸ್‌ಕ್ಯಾಂಡಿಗಳನ್ನು ಚೀಪುತ್ತಿರುತ್ತವೆ. ಐಸ್ ಹಾಕಿದ ನೀರು, ಸೋಡಾ, ಲೆಮನ್ ರಸ, ಕಬ್ಬಿನ ಹಾಲು ಕುಡಿಯುತ್ತಲೇ ಇರುತ್ತಾರೆ. ಕೂಲ್‌ಡ್ರಿಂಕ್ಸ್‌ಗಳನ್ನೂ ಕುಡಿಯುತ್ತಾರೆ. ಇದರ ನಡುವೆ ಕರೆಂಟ್ ಇರುವುದಿಲ್ಲ. ಇಲ್ಲಿಯ ಜನರು ಬಿಸಿಲನ್ನು ಕೇರ್ ಮಾಡದೆ ತಮ್ಮ ಕೆಲಸ ಕಾರ್ಯಗಳಲ್ಲಿ ನಿರಾತಂಕವಾಗಿ ತೊಡಗಿರುವುದನ್ನು ನೋಡಿದರೆ ಬಿಸಿಲೇ ಅಂಜಬೇಕು ! ಸಂಜೆಯಾದರೆ ಸಾಕು ರಸ್ತೆ ಬದಿಯಲ್ಲಿ, ಓಣಿಗಳಲ್ಲಿ ಮೆಣಸಿನಕಾಯಿ ಮಿರ್ಚಿ ಕರಿಯುವ ಕಡಾಯಿಗಳು ಕುಂತಿರುತ್ತವೆ. ಮಾಡುವವರ ಕೈ ಸೋಲಬೇಕೇ ಹೊರತು ತಿನ್ನುವವರ ಬಾಯಿ ಸೋಲುವುದಿಲ್ಲ.

ನನಗೆ ಚುನಾವಣೆಯ ದಿನಗಳಲ್ಲಿಯೇ ತಿರುಗಾಡುವುದು ಬಂತು ಎಂದೆನಲ್ಲ... ರಾಯಚೂರಿಗೆ ಹೋಗುವ ಮುನ್ನ ಅಲ್ಲಿನ ಗೆಳೆಯರಿಗೆ, "ನಾನು ಬರ್ತಿದ್ದೀನಿ. ನಟಿ ಪೂಜಾ ಗಾಂಧಿ ನೋಡಲು ಸಿಗುತ್ತಾರೇನ್ರೋ" ಎಂದು ಕೇಳಿದ್ರೆ "ನೋಡುವುದೇನು ? ನೀನು ಬಾ. ನಟಿಯ ಕೈ ಕುಲಕಬಹುದು. ವ್ಯವಸ್ಥೆ ಮಾಡ್ತೀವಿ" ಅಂದರು. ರಾಯಚೂರಿನ ಜನ ಹಾವಾಡಿಸಿದರೆ ನೂರಾರು ಸಂಖ್ಯೆಯಲ್ಲಿ ನಿಂತು ತಾಸುಗಟ್ಟಲೇ ನೋಡುವವರು, ದೊಂಬರಾಟವನ್ನು ನೋಡುವವರು ಪೂಜಾ ಗಾಂಧಿಗೆ ಮರುಳಾಗುತ್ತಾರೆಂದು ನಾನು ತಿಳಿದಿದ್ದೆ. ತಮ್ಮ ಓಣಿಗೆ ಕರೆದು, ಮನೆಗೆ ಕರೆದು ಫೋಟೋ ತೆಗೆಸಿಕೊಂಡು, ಕೈ ಕುಲಕಿ ಕಳಿಸಿದರೇ ಹೊರತು ಓಟು ಹಾಕಲಿಲ್ಲ. ಈಕೆ ಸಾವಿರದ ಎಂಟನೂರ ಹದಿನೈದು ಓಟು ಪಡೆದು ಕಾಣೆಯಾದದ್ದು ಎಲ್ಲರಿಗೂ ಗೊತ್ತಿದ್ದ ಸಂಗತಿ.

ಪತ್ರಿಕೆಗಳು ಪ್ರಕಟಿಸಿದ ಚುನಾವಣಾ ಸುದ್ದಿಗಳನ್ನು, ಟಿ.ವಿ. ಚಾನಲ್‌ಗಳು ಹೇಳುವ ಸುದ್ದಿಗಳನ್ನು ಜನ ಓದಿದ್ದೇ ಓದಿದ್ದು; ಕೇಳಿದ್ದೇ ಕೇಳಿದ್ದು. ಸಾಲದೆಂಬಂತೆ ಓದಿದ್ದನ್ನು, ಕೇಳಿದ್ದನ್ನು ಚರ್ಚಿಸಿದ್ದೇ ಚರ್ಚಿಸಿದ್ದು. ಚುನಾವಣಾ ಆಯೋಗವು ಈ ವರ್ಷ ಬಲು ಕಟ್ಟುನಿಟ್ಟಿನ ನಿಯಂತ್ರಣವನ್ನು ಚುನಾವಣೆ ಕಣಕ್ಕಿಳಿದ ಅಭ್ಯರ್ಥಿಗಳ ಮೇಲೆ ಹೇರಿತ್ತು. ರಾಜಕಾರಣಿಗಳ ಅಕ್ರಮ ಹಣವನ್ನು ಜಪ್ತಿ ಮಾಡುವ, ಹೆಂಡ–ಸಾರಾಯಿ, ಸೀರೆ, ವಾಚ್ ಏನೇನೋ ಸಾಮಗ್ರಿಗಳು ಬಡ ಮತದಾರರ ಕೈ ಸೇರುವ ಬದಲು ಪೊಲೀಸರ ಕೈ ಸೇರುತ್ತಿದ್ದ ಸುದ್ದಿಗಳನ್ನು ಮಾಧ್ಯಮಗಳು ತೋರಿಸುತ್ತಿದ್ದವು. ಮಾಧ್ಯಮಗಳು ಮಾತ್ರ ಈ ಸಲದ ಚುನಾವಣೆಯನ್ನು ಹಬ್ಬದಂತೆ ಆಚರಿಸಿಬಿಟ್ಟವು. ಮೇ–೫ರಂದು ಮತದಾನ ಮುಗಿಯಿತು ಎಂದು ಜನರು ನಿಟ್ಟುಸಿರು ಬಿಟ್ಟು ಸುಮ್ಮನಿರಲು ಮಾಧ್ಯಮಗಳು ಬಿಡಲಿಲ್ಲ. ಮೇ–೬ ಮತ್ತು ೭ರಂದು ಎರಡು ದಿನಗಳ ಕಾಲ ಮತದಾನೋತ್ತರ ಪಕ್ಷಗಳ ಬಲಾಬಲ, ಅಭ್ಯರ್ಥಿಗಳನ್ನು ನಿರಂತರವಾಗಿ ವಿಶ್ಲೇಷಿಸಿದವು. ಗೆಲ್ಲುವ, ಸೋಲುವ ಪಕ್ಷಗಳ ಬಲಾಬಲ, ಅಭ್ಯರ್ಥಿಗಳ ಅದೃಷ್ಟ, ಮತದಾನದ ಅವಘಡಗಳನ್ನು ಬಿಂಬಿಸಿದವು. ಜನರು ವಿಶ್ವಾಸದಿಂದಲೇ ಕೇಳಿದರು, ಓದಿದರು. ಇದಕ್ಕಿಂತ ಸ್ವಾರಸ್ಯದ ವಿಷಯವೆಂದರೆ, ಬಳ್ಳಾರಿ ಜಿಲ್ಲೆಯಲ್ಲಿ ಚುನಾವಣೆ ಎಂದರೆ ಮತವನ್ನು ಕೊಳ್ಳುವುದು, ಮತವನ್ನು ಮಾರುವುದು ಆಗಿತ್ತು. ಗಣಿದಣಿಗಳು ಆರಂಭಿಸಿದ ಈ ವ್ಯವಸ್ಥೆಯನ್ನು ಪೋಷಿಸಿಕೊಂಡು ಬರಲಾಗಲಿಲ್ಲ. ಚುನಾವಣಾ ಆಯೋಗವು ಅಡ್ಡಗಾಲು ಹಾಕಿತು. ಮತ ಕೊಳ್ಳುವುದರಲ್ಲಿ ನಂಬಿಕೆ ಮಾಸತೊಡಗಿತ್ತು. ಹಾಗಿದ್ದರೂ ಬಡ ಮತದಾರರು ರುಚಿ ಕಂಡಿದ್ದರಲ್ಲ. ತಮ್ಮ ಮತವನ್ನು ಹೊತ್ತು ಮೇ ೩–೪ರಂದು ರಾತ್ರಿಯಿಡೀ ಓಣಿಗಳಲ್ಲಿ ಜಾಗರಣೆ ಮಾಡಿ ಕಾಯ್ದರೂ ಮತ ಕೊಳ್ಳುವ ದಲ್ಲಾಳಿಗಳೇ ಕಾಣಿಸಲಿಲ್ಲ. ಮತ ಮಾರುವವರು ದಂಗೆ ಏಳುತ್ತಾರೆಂದೇ ಭಾವಿಸಲಾಗಿತ್ತು. ಪೊಲೀಸರು ಈ ದಂಗೆ ಏಳದಂತೆ ಅಲ್ಲಲ್ಲೇ ಅಡಗಿಸಿದರು. ತಮ್ಮ ಮತಕ್ಕೆ ವ್ಯಾಪಾರವಾಗದೆ, "ಥೂತ್, ಓಟಿಗೆ ನೋಟು ಕೊಡಲಾಗದಿದ್ದರೆ ಚುನಾವಣೆಗೆ ಯಾಕ ನಿಲ್ಲಬೇಕು ?" ಎಂದು ಸಿಟ್ಟು, ಅಸಹಾಯಕತೆಯಿಂದ ಕುಂತರು. ಈ ಸಲ ಅಲ್ಲ. ಇದರ ಹಿಂದಿನ ಸಲದ ಚುನಾವಣೆಯಲ್ಲಿ ಮತಕ್ಕೆ ಭಾರಿ ಬೆಲೆ ಬಂದಿತ್ತು. ಮತದಾರರು ಮಾರಿಕೊಂಡಿದ್ದರಷ್ಟೆ. ನಾನು ಬಳ್ಳಾರಿಯ ಒಂದು ಹಳ್ಳಿಯ ಮತಗಟ್ಟೆಯಲ್ಲಿ ಪ್ರಿಸೈಡಿಂಗ್ ಅಧಿಕಾರಿಯಾಗಿ ಹೋಗಿದ್ದಾಗ, ಮತದಾನ ಮುಗಿಯಿತು. ನಿಟ್ಟುಸಿರು ಬಿಟ್ಟು ನಿಂತೆ. ಆಗ ಕೆಲವು ಬಡ ಮತದಾರರು ಬಂದರು. ನನ್ನ ಮುಂದೆ ನಿಂತು ಏನೇನೋ ಗೊಣಗಿದರು. ನನಗೆ ತಿಳಿಯಲಿಲ್ಲ. ಅಲ್ಲಿಂದ ಅವರನ್ನು ಓಡಿಸಲು ಪೊಲೀಸರನ್ನು ಕರೆದೆ. ಆಗ ಒಬ್ಬ, "ಸಾಹೇಬ್ರೇ, ಓಟು ಹಾಕಕ, ನಮ್ಮ ಹೆಸ್ರು ಓಟಿನ ಪಟ್ಟಿಯೊಳಗೆ ಇಲ್ಲ. ಓಟು ಹಾಕೀದ್ದೀವಿ ಎಂದು ದಣಿಗಳಿಗೆ ಹೇಳಿದ್ರ ದುಡ್ಡು ಕೊಡ್ತಾರ. ಅದ್ಕ ನೀವು ನಮ್ಮ ಬೆರಳಿಗೆ ಶಾಹಿ ಹಚ್ರಿ ಅಷ್ಟೆ. ತೋರಿಸಿ ದುಡ್ಡು ಇಸಗಂತೀವಿ", ಅಂತ ನಿಂತಿದ್ದ.

ನಾನು ನಾಲ್ಕು ಐದು ಸಲ ಚುನಾವಣೆ ಕರ್ತವ್ಯಕ್ಕೆಂದು ಹೋಗಿ ಬಂದಿದ್ದೇನೆ. ನರಕದ ಶಿಕ್ಷೆಗಳಿಗಿಂತ ಹೆಚ್ಚಿನವನ್ನು ಈ ಕೆಲಸದಿಂದ ನಾನು ಪಡೆದಿದ್ದೇನೆ. ಚುನಾವಣೆ ಘೋಷಣೆಯಾದರೆ ಸರ್ಕಾರಿ ನೌಕರರಿಗೆ ಜೀವ ಝಲ್ ಎನ್ನುತ್ತದೆ. ಯಾರೂ ಮನಃಪೂರ್ವಕವಾಗಿ ಈ ಕೆಲಸವನ್ನು ಮಾಡಲು ಬಯಸುವುದಿಲ್ಲ. ಚುನಾವಣಾ ಆಯೋಗದ ಆಜ್ಞೆಯಿಂದಾಗಿ, ಜಿಲ್ಲಾಡಳಿತ, ತಾಲ್ಲೂಕು ಆಡಳಿತದ ಒತ್ತಡಕ್ಕೆ ಮಣಿದು ಕಡ್ಡಾಯ ಎಂಬ ಬಾರುಕೋಲಿಗೆ ಅಂಜಿ ಸರ್ಕಾರಿ ನೌಕರರು ಚುನಾವಣಾ ಕೆಲಸಕ್ಕೆ ಖಂಡುಗ ಶಾಪ ಹಾಕುತ್ತಾ ಹಾಜರಾಗುತ್ತಾರೆ. ಕೆಲವು ನೌಕರರು ಜಾಣತನದಿಂದ ತಪ್ಪಿಸಿಕೊಳ್ಳುತ್ತಾರೆ. ಯಾಕೆ ಈ ಕೆಲಸ ನರಕದ ಕೆಲಸವೆಂದರೆ, ಮತದಾನಕ್ಕೆ ಸಂಬಂಧಿಸಿದ ಕೆಲಸಗಳಲ್ಲಿ ಸುಧಾರಣೆಯಾದದ್ದು ಕಮ್ಮಿ. ಮತಯಂತ್ರ ಬಂದಿದೆ ಎಂಬುದೊಂದನ್ನು ಬಿಟ್ಟರೆ ಉಳಿದ ರಗಳೆಗಳು




## ರಾಷ್ಟ್ರೀಯ ವನ್ಯಜೀವಿ ಸಪ್ತಾಹ

ಅನಾದಿಕಾಲದಿಂದಲೂ ನಮ್ಮ ನಾಡಿನ ವನ್ಯಜೀವನವು ಜನಪದ, ಪಾರಂಪರಿಕ ನಂಬಿಕೆ, ಪುರಾಣ, ಇತಿಹಾಸಗಳ ನಿಕಟ ಸಹವರ್ತಿ ಯಾಗಿದೆ. ಇಲ್ಲಿನ ಪ್ರಾಕೃತಿಕ ಸಮತೋಲನವನ್ನು ಸಾಧಿಸುವ ಈ ವೈವಿಧ್ಯಮಯ ಜೀವಿಗಳಿಲ್ಲದೆ ನಮ್ಮ ಬದುಕು ತೀರಾ ಬಡವಾಗಿರುತ್ತಿತ್ತು. ವನ್ಯಜೀವಿ ಸಂರಕ್ಷಣೆಯೆಂದರೆ, ಮಾನವನ ಅಭಿವೃದ್ಧಿಗೆ ಹೊಂದಿಕೊಂಡಂತೆಯೇ ಸಕಲ ವನ್ಯಜೀವಿಗಳ ಯೋಜಿತ ಹಾಗೂ ಸಕ್ರಿಯ ರಕ್ಷಣಾಕಾರ್ಯವಾಗಿದೆ. ಇದೇ ಉದ್ದೇಶದಿಂದಲೇ ನಾಡಿನ ವಿವಿಧೆಡೆ ವನ್ಯಜೀವಿ ಅಭಯಾರಣ್ಯಗಳನ್ನೂ ರಾಷ್ಟ್ರೀಯ ಉದ್ಯಾನಗಳನ್ನೂ ಹುಲಿ ಯೋಜನೆಯ ಪ್ರದೇಶಗಳನ್ನೂ ಸ್ಥಾಪಿಸಿ ರಕ್ಷಿಸಿಕೊಂಡು ಬರಲಾಗಿದೆ.

ಈ ನಿಟ್ಟಿನಲ್ಲಿ ಮಾನವಸಮಾಜದಲ್ಲಿ ವನ್ಯಜೀವಿ ಸಂರಕ್ಷಣೆಯ ಜಾಗೃತಿಯನ್ನು ಮೂಡಿಸುವ ಹಾಗೂ ನೆನಪಿಸುವ ಉದ್ದೇಶದಿಂದ ಭಾರತೀಯ ವನ್ಯಜೀವಿ ಮಂಡಳಿಯು (IBWL) ಪ್ರತಿವರ್ಷವೂ ಅಕ್ಟೋಬರ್ 2ನೇ ತಾರೀಕಿನಿಂದ 8ನೇ ತಾರೀಕಿನವರೆಗೆ ವನ್ಯಜೀವಿ ಸಪ್ತಾಹವನ್ನು ಆಚರಿಸಲು ನಿರ್ಧರಿಸಿದೆ. ಈ ಸಪ್ತಾಹದ ಅಂಗವಾಗಿ ವನ್ಯಜೀವಿ ಸಂರಕ್ಷಣೆಗೆ ಸಂಬಂಧಿಸಿದ ವಿವಿಧ ಸಾಮಾಜಿಕ ಚಟುವಟಿಕೆಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಜನಜಾಗೃತಿ ಕಾರ್ಯಕ್ರಮಗಳು, ವಿಚಾರ ಸಂಕಿರಣಗಳು, ಶಾಲಾ ಮಕ್ಕಳಿಗಾಗಿ ವನ್ಯಜೀವಿಗಳ ವಿಷಯವನ್ನು ಕುರಿತ ವಿವಿಧ ಸ್ಪರ್ಧೆಗಳು ಈ ಸಪ್ತಾಹದ ಮುಖ್ಯ ಚಟುವಟಿಕೆಗಳು. ಆದರೆ, ವನ್ಯಜೀವಿ ಸಪ್ತಾಹದ ಆಶಯವು ಇಂತಹ ಸಾಮಾನ್ಯ ಚಟುವಟಿಕೆಗಳಿಗಷ್ಟೇ ಸೀಮಿತವಾಗದೆ ಇಂದಿನ ಬದಲಾಗುತ್ತಿರುವ ಸಾಮಾಜಿಕ ಸ್ಥಿತಿ, ಒತ್ತಡ, ಮಾನವ–ವನ್ಯಜೀವಿಸಂಘರ್ಷಗಳ ನಡುವೆ, ವನ್ಯಜೀವಿಸಂರಕ್ಷಣಾ ಸಿದ್ಧಾಂತಗಳನ್ನು ಪರಿಣಾಮಕಾರಿಯಾಗಿ ಕಾರ್ಯರೂಪಕ್ಕೆ ತರುವ ಬಗೆಗೆ ವಿವಿಧ ಸಂಘಟನೆಗಳು ಸರ್ಕಾರದೊಡನೆ ಚರ್ಚಿಸಿ ಸಕಾರಾತ್ಮಕವಾಗಿ ಬೆಂಬಲಿಸುವ ಅವಶ್ಯಕತೆಯಿದೆ.

ಹಾಗೇ ಇವೆ. ಮತದಾನ ಪೂರ್ವದಲ್ಲಿ ಕೊಡುವ ಎರಡು ದಿನದ ತರಬೇತಿ ಕಾಟಾಚಾರದ್ದು. ಮತದಾನಕ್ಕೆ ಸಂಬಂಧಿಸಿದ ಸಾಹಿತ್ಯವಿದ್ದರೂ ಅದನ್ನು ಓದಲು ಸಾಧ್ಯವಿಲ್ಲ. ಓದಿದರೂ ತಲೆಗೆ ಇಳಿಯುವುದಿಲ್ಲ. ಎರಡು ದಿನಗಳ ತರಬೇತಿ, ಮತದಾನದ ಎರಡು ದಿನ ಮೊದಲೇ ಜಿಲ್ಲೆಯ ಸ್ಥಳಕ್ಕೆ ಹೋಗಬೇಕು. ಅಲ್ಲಿಯೂ ತರಬೇತಿ. ಮಾಸ್ಟರಿಂಗ್ ಸಾಮಗ್ರಿ ಪಡೆಯಬೇಕು. ಅವುಗಳನ್ನು ಬಿಸಿಲಲ್ಲಿ ಕುಳಿತು ನೋಡಿಕೊಳ್ಳಬೇಕು. ಪ್ರಿಸೈಡಿಂಗ್ ಅಧಿಕಾರಿಯ ಮಾತನ್ನು ಸಹ ಕೆಲಸಗಾರರು ಕೇಳುವುದಿಲ್ಲ. ಕೇಳಿದಂತೆ ಮಾಡುತ್ತಲೇ ತಪ್ಪಿಸಿಕೊಂಡು ತಿರುಗುತ್ತಾರೆ. ಎಲ್ಲ ಸಾಮಗ್ರಿ ಹೊತ್ತು ಮತಗಟ್ಟೆಯ ಊರಿಗೆ ಬಸ್ಸು ಹಿಡಿದು ಹೋಗಬೇಕು. ಅಲ್ಲಿ ಮತದಾನ ನಡೆಯುವ ಶಾಲೆಯನ್ನು ನೋಡಿಯೇ ನಮ್ಮ ಶಾಲೆಗಳ ಸ್ಥಿತಿಗತಿ ತಿಳಿಯಬೇಕು. ಒಂದು ಕೊಠಡಿಯನ್ನು ಬಿಟ್ಟಿರುತ್ತಾರೆ. ಅದಕ್ಕೆ ಬಾಗಿಲು, ಕಿಡಕಿ ಇರುವುದಿಲ್ಲ. ಚೌಕಟ್ಟುಗಳಿದ್ದರೂ ಮುಚ್ಚುವ ತೆರೆಯುವ ವ್ಯವಸ್ಥೆಯೇ ಇರುವುದಿಲ್ಲ. ಕುರ್ಚಿ, ಟೇಬಲ್‌ಗಳಿರುವುದಿಲ್ಲ. ಇದ್ದರೂ ಹಳೆಯವು. ಕುಂತರೆ ಅಲ್ಲ, ಕೈಯೂರಿದರೆ ಮಲಗುವಂಥವು. ಮುಖ್ಯವಾಗಿ ಕರೆಂಟ್ ವ್ಯವಸ್ಥೆಯೇ ಇರುವುದಿಲ್ಲ. ಇನ್ನು ಶೌಚಾಲಯ, ನೀರಿನ ವ್ಯವಸ್ಥೆ ಕೇಳಬೇಡಿ. ರಾತ್ರಿ ಮಲಗುವ ಸಮಸ್ಯೆ. ಮಹಿಳಾ ಸಿಬ್ಬಂದಿಗಳ ಗತಿಯೇನು? ಇನ್ನೊಂದು ಈ ಮಹಿಳಾ ಸಿಬ್ಬಂದಿಗಳು ಕೇಳುವ ರಿಯಾಯ್ತಿಯಿಂದ ಪ್ರಿಸೈಡಿಂಗ್ ಅಧಿಕಾರಿಗೆ ತಲೆನೋವು ಶುರುವಾಗುತ್ತದೆ. ಬೆಳಗ್ಗೆ ಆರು ಗಂಟೆಗೆಲ್ಲಾ ಹುಡುಕಾಡಿ ನಿತ್ಯಕರ್ಮಗಳನ್ನು ಮುಗಿಸಿ, ಮತದಾನಕ್ಕೆ ರೆಡಿ ಮಾಡಿಕೊಂಡು ಶುರುಮಾಡುವುದರಲ್ಲಿ ಕರ್ತವ್ಯ ನಿರತ ಸಿಬ್ಬಂದಿಗಳು ಬಸವಳಿದಿರುತ್ತಾರೆ.

ಮತದಾನ ನಡೆಯುತ್ತಿದ್ದರೆ ಪಕ್ಷಗಳ ಏಜಂಟರ ಕಿರುಕುಳ, ಮತದಾರರ ಕಿರುಕುಳ, ಗುರುತಿನ ಚೀಟಿ ಇಲ್ಲದೆ ಬರುವವರು, "ಇಲ್ಲೇ ಹುಟ್ಟಿ, ಇಲ್ಲೇ ಬೆಳೆದು, ಇಲ್ಲೇ ಸಾಯ್ತಿವಿ. ನಮ್ಮನ್ನು ಹೆತ್ತವರೂ ಇದೇ ಊರಾಗ ಬಾಳಿ ಸತ್ತಾರ. ಗುರುತು ಮತ್ತೇನು ಹೇಳಬೇಕ್ರೀ" ಅಂತ ಜಗಳಕ್ಕೆ ನಿಲ್ಲುವವರೇ ಜಾಸ್ತಿ. ಪಕ್ಷದ ಮುಖಂಡರು ಕೊಠಡಿಯ ಒಳಗೆ ಬರಬಾರದು, ನಿಜ. ಆದರೆ ಬರುತ್ತಾರೆ. ಮತದಾನ ಎಷ್ಟಾಯ್ತು ಎಂದು ಗಳಿಗೆಗೊಮ್ಮೆ ಪೀಡಿಸುತ್ತಾರೆ. ಜಗಳವಾದರೆ ಪೊಲೀಸರು ದೂರ ಹೋಗಿಬಿಡುತ್ತಾರೆ. ತರಬೇತಿ ಕೊಡುವಾಗ ಮಾತ್ರ ಪ್ರಿಸೈಡಿಂಗ್ ಆಫೀಸರನಿಗೆ ಸುಪ್ರೀಮ್ ಪವರ್ ಇರುತ್ತದೆ ಎಂದು ಊದಿರುತ್ತಾರೆ. ಮತಗಟ್ಟೆಯಲ್ಲಿ ಈ ಅಧಿಕಾರಿಯ ಪಾಡು ಅನುಭವಿಸಿದವರಿಗೇ ಗೊತ್ತು. ನೂರಾರು ಫಾರಂಗಳನ್ನು ತುಂಬಬೇಕು. ಮತದಾನ ಮುಗಿದು, ಸಾಮಗ್ರಿ ಹೊತ್ತು ಡಿಮಾಸ್ಟರಿಂಗ್ ಮಾಡಿ ಹೊರಬಂದಾಗ ಜೀವ ಉಳಿದರೆ ಅದೇ ಪುಣ್ಯ. ಊರು ಸೇರಿ, ಮನೆ ಸೇರಿದರೆ ವಾರವಾದರೂ ಚುನಾವಣೆಯ ಭೂತ ಕಾಡುತ್ತಲೇ ಇರುತ್ತದೆ.

ದುರಂತವೆಂದರೆ, ಯಾವ ಪತ್ರಿಕೆಗಳು, ಟಿ.ವಿ. ಚಾನಲ್‌ಗಳು ಚುನಾವಣೆ ಕರ್ತವ್ಯಕ್ಕೆ ಹಾಜರಾಗುವ ಸರ್ಕಾರಿ ನೌಕರರ ಕಷ್ಟಗಳನ್ನು ಅರಿತು ಬಿಂಬಿಸಿವೆಯೇ? ಮತಗಟ್ಟೆಗಳ ವ್ಯವಸ್ಥೆ ಬಗ್ಗೆ ಬರೆಯುತ್ತವೆಯೇ? ಅಲ್ಲಿ ಸಿಬ್ಬಂದಿಗಳಿಗೆ ಆಗುವ ಕಿರುಕುಳಗಳಿಗೆ ಯಾರ ಬೆಂಬಲವೂ ಇರುವುದಿಲ್ಲ. ದೌರ್ಜನ್ಯದ ಮತದಾನಗಳು ನಡೆಯುತ್ತಿರುತ್ತವೆ. ಮತಯಂತ್ರ ಕೆಟ್ಟುಹೋಯ್ತು, ಮತದಾನ ತಡವಾಯ್ತು. ಕರ್ತವ್ಯ ಲೋಪ. ಇಂಥವು ಮಾತ್ರ ಸುದ್ದಿಗಳಾಗುತ್ತವೆ. ಸಿಬ್ಬಂದಿಗಳಿಗೆ ಎರಡು ದಿನ ನಿತ್ಯಕರ್ಮಗಳಿಗೆ ತೊಂದರೆ, ನೀರು, ಅನ್ನದ ಕೊರತೆ, ನಿದ್ದೆಯೇ ಇಲ್ಲ, ಮತದಾನದ ದಿನ ಬೆಳಗ್ಗೆಯಿಂದ ಸಂಜೆವರೆಗೆ ಮತ್ತು ಡಿಮಾಸ್ಟರಿಂಗ್ ಮಾಡುವ ತನಕ ಅನ್ನ, ನೀರು, ವಿರಾಮ ಇರುವುದಿಲ್ಲ. ಒಟ್ಟಿನಲ್ಲಿ ಗೌರವವೇ ಇಲ್ಲಿ ಸಿಗುವುದಿಲ್ಲ.

ಈ ಸಲದ ಚುನಾವಣೆಯಲ್ಲಿ ಕರ್ತವ್ಯನಿರತ ಮೂವರು ತೀರಿಕೊಂಡರು. ಹೃದಯಾಘಾತದಿಂದ ಸತ್ತರು. ಶಿಕ್ಷಕಿ ಲೀಲಾವತಿ ಹುಚ್ಚಪ್ಪ ಮೂಡಬಾಗಿಲು (೩೩), ಎಂ. ಸಿ. ಮಹೇಂದ್ರ (೫೦), ತಿಮ್ಮಯ್ಯ (೫೭) ತೀರಿಕೊಂಡದ್ದನ್ನು ಮಾಧ್ಯಮಗಳು ಸುದ್ದಿ ಮಾಡಿದವು, ನಿಜ. ಯಾರಿಗೆ ತಟ್ಟಿದವು ಈ ಸಾವುಗಳು! ಪಕ್ಷವೊಂದು ಅಧಿಕಾರಕ್ಕೆ ಬಂತು. ಮುಖ್ಯಮಂತ್ರಿ ಅವರು ಖುಷಿಯಿಂದ ಸಾಹಿತಿಗಳನ್ನು, ಹಿತೈಷಿಗಳನ್ನು ಭೇಟಿ ಮಾಡಿದರು. ಚುನಾವಣಾ ಕರ್ತವ್ಯಕ್ಕೆ ಹೋಗಿ ಮರಣಹೊಂದಿದವರನ್ನು ಮರೆತರು. ಮಾಧ್ಯಮಗಳೇ ಮರೆತವು. ಯಾರು ಮಂತ್ರಿಗಳಾಗುತ್ತಾರೆಂಬ ಸುದ್ದಿಗಳನ್ನು ಬಿತ್ತರಿಸಲು ಮಾಧ್ಯಮಗಳು ಬಿಸಿಯಾದವು. ಮೇ ತಿಂಗಳಲ್ಲಿ ಮದುವೆಗಳ ಸೀಸನ್ ಬಂದು, ಜನರು ಮದುವೆಗಳಲ್ಲಿ ಬಿಸಿಯಾದರು. ಮತದಾನ ಮಾಡಲು ಗಂಡ–ಹೆಂಡತಿಯರನ್ನು ಒಮ್ಮೆ ಬಿಟ್ಟದ್ದಕ್ಕೆ ಪ್ರಿಸೈಡಿಂಗ್ ಅಧಿಕಾರಿ ಅಮಾನತ್ತು ಆದ. ಈ ದುರಂತಕ್ಕೆ ಕೊನೆ ಇಲ್ಲವೇ?

ಅಮರೇಶ ನುಗಡೋಣಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ

## ಕಟ್ಟೀಮನಿಯವರ ಕಾದಂಬರಿಗಳನ್ನು ಗುರುತಿಸಿ

ಸಮಾಜವಾದಿ ಚಿಂತನ, ಸ್ವಾಭಿಮಾನಿ ಹಾಗೂ ಕ್ರಾಂತಿಕಾರಿ ವಿಚಾರಧಾರೆಯ ಮೂಲಕ ಸ್ವಾತಂತ್ರ್ಯ ಹೋರಾಟದ ಹಿನ್ನೆಲೆಯ ಕಾದಂಬರಿಗಳನ್ನು ರಚಿಸಿದ ಬಸವರಾಜ ಕಟ್ಟೀಮನಿಯವರು ಕನ್ನಡ ಕಾದಂಬರಿ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನ ಗಳಿಸಿದ್ದಾರೆ. ಅವರು ರಚಿಸಿದ "ಜ್ವಾಲಾಮುಖಿಯ ಮೇಲೆ" ಕಾದಂಬರಿಗೆ ಸೋವಿಯತ್ ದೇಶದ ಪ್ರತಿಷ್ಠಿತ ಪ್ರಶಸ್ತಿಯಾದ "ಸೋವಿಯತ್ ಲ್ಯಾಂಡ್" ಪ್ರಶಸ್ತಿ ದೊರೆತ್ತಿತ್ತು.

ಅವರು ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ೪೦ ಕಾದಂಬರಿಗಳನ್ನು ಅವುಗಳ ಪೈಕಿ ೧೭ ಕಾದಂಬರಿಗಳ ಹೆಸರುಗಳನ್ನು ಕೆಳಗಿನ ನೂರಂಕಣಗಳಲ್ಲಿರುವ ಅಕ್ಷರಗಳ ಮಧ್ಯೆ ಬರೆಯಲಾಗಿದೆ. ಹೊಸತು ಪತ್ರಿಕೆಯ ಅಕ್ಟೋಬರ್ ಸಂಚಿಕೆಯಲ್ಲಿ ಕಟ್ಟೀಮನಿಯವರ ಕಾದಂಬರಿ ಗುರುತಿಸುವ ಮೂಲಕ ಅರ್ಥಪೂರ್ಣವಾಗಿ ಸ್ಮರಿಸೋಣ.

| | | | | | | | | | |
|---|---|---|---|---|---|---|---|---|---|
| ಸ್ವಾ | ತಿ | ಕೋ | ಹೆಂ | ಡ | ತಿ | ಗಾ | ತೆ | ಜೊ | ವಿ |
| ತಂ | ಬು | ಳಿ | ಪಾ | ಮ | ರು | ಳಿ | ವಿ | ತೆ | ದೇ |
| ತ್ರ | ಜ | ಲ | ತ | ರಂ | ಗ | ಗಾ | ಕ | ರೆ | ವಾ |
| ದೆ | ಡೆ | ಪಾ | ರ | ಸಿ | ಣಿ | ನ | ನ | ಸಾ | ಗೋ |
| ಡೆ | ಪ್ರ | ಟೀ | ಗಿ | ವಾ | ಅ | ಗಿ | ತಾ | ನು | ಕ |
| ಗೆ | ಕಾ | ಲ | ತ್ತಿ | ಮ | ರು | ಳ | ಸೈ | ಯಿ | ತ್ತ |
| ಜೆ | ವಿ | ರಾ | ಧಾ | ಶ್ರ | ಣ | ಬೆ | ಶಾಂ | ತಾ | ರಿ |
| ಶ | ಸೇ | ತಿ | ಶೃ | ಆ | ಜ್ಯೋ | ತಿ | ದ್ರೋ | ಗೀ | ಪ್ರ |
| ರ | ಮ | ಹ | ರಿ | ಜ | ನಾ | ಯ | ಣ | ಹಿ | ಯೋ |
| ಣು | ಗ್ರಾ | ಲೆ | ಮೇ | ಯ | ಖಿ | ಮು | ಲಾ | ಜ್ವಾ | ಗ |

(ಉತ್ತರಗಳು : ಆಶ್ರಮವಾಸಿ, ಕತ್ತರಿ ಪ್ರಯೋಗ, ಗ್ರಾಮಸೇವಿಕಾ, ಗೋವಾದೇವಿ, ಜಲತರಂಗ, ಜೊತೆಗಾತಿ, ತಿರುಗಣಿ, ದ್ರೋಹಿ, ಪ್ರಪಾತ, ಪಾತರಗಿತ್ತಿ, ಜ್ವಾಲಾಮುಖಿಯ ಮೇಲೆ, ಸ್ವಾತಂತ್ರ್ಯದೆಡೆಗೆ, ಸೈತಾನ, ಹೆಂಡತಿ, ಹರಿಜನಾಯಕ, ಮಗನ ತಾಯಿ, ಬೆಳಗಿನ ಗಾಳಿ)

**(ಅಕ್ಟೋಬರ್ ೫ – ಬಸವರಾಜ ಕಟ್ಟೀಮನಿ ಜನ್ಮದಿನದ ನೆನಪಿಗಾಗಿ)**

*ಬೆಂಗಳೂರು* **ಬಸವರಾಜ ಹುಡೇದಗಡ್ಡಿ**





# ಜಾಗತೀಕರಣ ಮತ್ತು ಕನ್ನಡ ಭಾಷೆಯ ಸವಾಲುಗಳು

ಎಂ. ರೇಖಾ

ಇಡೀ ವಿಶ್ವವನ್ನೇ ಒಂದು ಬಿಂದುವಾಗಿ ನೋಡುತ್ತಿರುವ ಇಂದಿನ ಸಂದರ್ಭದಲ್ಲಿ ಕನ್ನಡ ಭಾಷೆ, ಸಂಸ್ಕೃತಿ, ಕನ್ನಡತ್ವ, ಕರ್ನಾಟಕತ್ವವನ್ನು ಉಳಿಸಿ–ಬೆಳೆಸುವುದು ದೊಡ್ಡ ಸವಾಲಾಗಿದೆ. ಪ್ರಾಚೀನ ಪರಂಪರೆಯನ್ನು ಹೊಂದಿರುವ ಕನ್ನಡಭಾಷೆ ವಿಜ್ಞಾನ–ತಂತ್ರಜ್ಞಾನಗಳ ದಟ್ಟ ಪ್ರಭಾವದಿಂದ ಮತ್ತು ಗಣಕೀಕರಣ, ಜಾಗತೀಕರಣ, ವಾಣಿಜ್ಯೀಕರಣ, ಖಾಸಗೀಕರಣ ಮೊದಲಾದವುಗಳ ಹೊಡೆತಕ್ಕೆ ಸಿಕ್ಕಿ ನಲುಗಿ ಹೋಗುತ್ತಿದೆ. ಕರುನಾಡಿನಲ್ಲಿ ಕನ್ನಡಿಗರೇ ಅಲ್ಪಸಂಖ್ಯಾತರಾಗಿ ಬದುಕಬೇಕಾಗಿರುವ ದುರಂತದ ಅಂಚಿಗೆ ತಲುಪಿದ್ದೇವೆ.

ದೇಸಿ ಭಾಷೆಯಾದ ಕನ್ನಡವನ್ನು ಉಳಿಸುವುದು ಮತ್ತು ಕಾಲದ ಅಗತ್ಯಕ್ಕೆ ತಕ್ಕಂತೆ ಬೆಳೆಸುವುದು ಒಂದು ದೊಡ್ಡ ಸವಾಲಾಗಿದೆ. ಈ ಕೆಲಸ ಪ್ರತಿಯೊಬ್ಬ ಕನ್ನಡಿಗನ ಗುರುತರವಾದ ಜವಾಬ್ದಾರಿಯೂ ಹೌದು. ಇಂಗ್ಲಿಷ್ ಭಾಷಾ ಮಾಧ್ಯಮದ ಭರಾಟೆಯಲ್ಲಿರುವ ನಾವು ನಮ್ಮ ಭಾಷೆ ಸಂಸ್ಕೃತಿಯ ಆತ್ಮಗೌರವವನ್ನು ಹರಾಜು ಹಾಕುತ್ತಿದ್ದೇವೆ. ಮುಕ್ತವ್ಯಾಪಾರದ ಮೂಲಕ ಬಹುರಾಷ್ಟ್ರೀಯ ಕಂಪನಿಗಳಿಗೆ ಅವಕಾಶ ಮಾಡಿಕೊಟ್ಟು 'ಇಂಗ್ಲಿಷ್' ಎಂಬ ಪೆಡಂಭೂತವನ್ನು ನಮ್ಮ ತಲೆಯ ಮೇಲೆ ಕೂರಿಸಿಕೊಂಡಿದ್ದೇವೆ. ಒಂದೊಮ್ಮೆ ಕೃಷಿ ಪ್ರಧಾನ ರಾಷ್ಟ್ರವಾಗಿದ್ದ ಭಾರತ ಇಂದು ನೈಸರ್ಗಿಕ ವಿಕೋಪಗಳ ಕಾರಣದಿಂದ ಮತ್ತು ಹುಸಿ ಅಭಿವೃದ್ಧಿಯ ಹೆಸರಿನಲ್ಲಿ ಕೈಗಾರಿಕಾ ಪ್ರಾಧಾನ್ಯತೆಯತ್ತ ತಿರುಗಿದೆ. ಇದು ಕರ್ನಾಟಕಕ್ಕೂ ಸಂಬಂಧಿಸಿದ




ಮಾತು. ಇದರಿಂದಾಗಿ ಉದ್ಯೋಗಾವಕಾಶವನ್ನು ಅರಸುವ ಕನ್ನಡಿಗರು ಎಂತಹ ಸ್ವಾಭಿಮಾನಿಗಳಾದರೂ ಅನಿವಾರ್ಯವಾಗಿ ಇಂಗ್ಲಿಷನ್ನು ಸ್ವೀಕರಿಸಲೇಬೇಕಾಗಿದೆ. ಸ್ಥಳೀಯ ಭಾಷೆಗಳಿಗೆ ಸೊಪ್ಪು ಹಾಕದ ಬಹುರಾಷ್ಟ್ರೀಯ ಕಂಪನಿಗಳು ಸಹಜವಾಗಿ ಕನ್ನಡಿಗರನ್ನು ತಿರಸ್ಕರಿಸುತ್ತಿವೆ. ಇದರಿಂದಾಗಿ ಇಂಗ್ಲಿಷ್‌ಅನ್ನು ಕಲಿಯಲೇಬೇಕೆಂಬ ಒತ್ತಡದ ಧೋರಣೆ ಎದುರಾಗುತ್ತಿದೆ. ಈ ಸಂಬಂಧವಾಗಿ ಕೇಂದ್ರವಾಗಲಿ, ರಾಜ್ಯ ಸರ್ಕಾರವಾಗಲಿ ಯಾವುದೇ ನೀತಿಯನ್ನು ಕೈಗೊಂಡಿಲ್ಲ. ಆದ್ದರಿಂದ ವಿದೇಶಿ ಕಂಪನಿಗಳ ಕಾನೂನೇ ಸಾರ್ವಭೌಮತ್ವವನ್ನು ಪಡೆದುಕೊಂಡಿದೆ. ಬಹುರಾಷ್ಟ್ರೀಯ ಕಂಪನಿಗಳು ಕಾರ್ಮಿಕ ಕಾಯ್ದೆಯನ್ನು ತಮ್ಮ ಅನುಕೂಲಕ್ಕೆ ತಕ್ಕಂತೆ ತಿರುಚಲು ಅವಕಾಶ ನೀಡದೆ ಸಮರ್ಥವಾದ ನೀತಿಯನ್ನು ರೂಪಿಸುವ ಕೆಲಸವನ್ನು ನಮ್ಮ ಸರ್ಕಾರ ಮಾಡಬೇಕಿದೆ. ಆಗ ಮಾತ್ರ ಕನ್ನಡಿಗರಿಗೆ ತಮ್ಮ ನೆಲದಲ್ಲಿ ಅನ್ನದ ಜೊತೆಗೆ ಭಾಷೆಯನ್ನು ಉಳಿಸಿಕೊಳ್ಳುವುದು ಸಾಧ್ಯವಾಗುತ್ತದೆ.

ಜಾಗತೀಕರಣದ ಪ್ರಭಾವದಿಂದಾಗಿ ಹೊಸ ಹೊಸ ಆವಿಷ್ಕಾರಗಳು ನಡೆಯುತ್ತಿವೆ. ಇದರಿಂದಾಗಿ ಕರ್ನಾಟಕ ಸರ್ಕಾರವು ಅನಿವಾರ್ಯವಾಗಿ ಇಂಗ್ಲಿಷ್‌ನ ಮೊರೆ ಹೋಗುತ್ತಿದೆ. ಆಡಳಿತ ಭಾಷೆಯಾಗಿ ಕನ್ನಡವೇ ಕರ್ನಾಟಕದಲ್ಲಿ ಅಂಗೀಕೃತವಾಗಿದ್ದರೂ 'ಕಂಪ್ಯೂಟರ್' ತಂತ್ರಜ್ಞಾನದ ಬಳಕೆಯಿಂದ 'ಕನ್ನಡ' ದೂರ ಉಳಿಯುವಂತಾಗುತ್ತಿದೆ. 'ಬರಹ' 'ನುಡಿ'ಯಂತಹ ತಂತ್ರಾಂಶಗಳನ್ನು ಕನ್ನಡದಲ್ಲಿ ಅಭಿವೃದ್ಧಿಪಡಿಸಿದ್ದರೂ

ಜಾಗತೀಕರಣದ ಪ್ರಭಾವದಿಂದಾಗಿ ಹೊಸ ಹೊಸ ಆವಿಷ್ಕಾರಗಳು ನಡೆಯುತ್ತಿವೆ. ಇದರಿಂದಾಗಿ ಕರ್ನಾಟಕ ಸರ್ಕಾರವು ಅನಿವಾರ್ಯವಾಗಿ ಇಂಗ್ಲಿಷ್‌ನ ಮೊರೆ ಹೋಗುತ್ತಿದೆ. ಆಡಳಿತ ಭಾಷೆಯಾಗಿ ಕನ್ನಡವೇ ಕರ್ನಾಟಕದಲ್ಲಿ ಅಂಗೀಕೃತವಾಗಿದ್ದರೂ 'ಕಂಪ್ಯೂಟರ್' ತಂತ್ರಜ್ಞಾನದ ಬಳಕೆಯಿಂದ 'ಕನ್ನಡ' ದೂರ ಉಳಯುವಂತಾಗುತ್ತಿದೆ. 'ಬರಹ' 'ನುಡಿ'ಯಂತಹ ತಂತ್ರಾಂಶಗಳನ್ನು ಕನ್ನಡದಲ್ಲಿ ಅಭಿವೃದ್ಧಿಪಡಿಸಿದ್ದರೂ ಬಳಕೆಯಲ್ಲಿ ಮಾತ್ರ ಅಷ್ಟಕ್ಕಷ್ಟೆ ಎನ್ನಬಹುದು. ಆನ್‌ಲೈನ್ ಮುಖಾಂತರ ಯಾವುದಾದರೂ ಅರ್ಜಿಗಳನ್ನು ತುಂಬುವಾಗ ಅಥವಾ ಸರ್ಕಾರದ ಸುತ್ತೋಲೆ, ಪ್ರಕಟಣೆ ಮೊದಲಾದವುಗಳನ್ನು ಅಂತರ್ಜಾಲದಲ್ಲಿ ಪ್ರಕಟಿಸುವಾಗ ಇಂಗ್ಲಿಷ್ ಸಂವಾದಿ ಕನ್ನಡದ ಪದಗಳನ್ನು ಬಳಸುವುದು ತೀರಾ ವಿರಳ ಮತ್ತು ಕಠಿಣವೆಂದೇ ಹೇಳಬಹುದು. ಅಥವಾ ಹೆಚ್ಚಾಗಿ ಇಂಗ್ಲಿಷ್ ಪದಗಳನ್ನು ಬಳಸುವುದೇ ರೂಢಿಯಲ್ಲಿದೆ.

ಇಂತಹ ಪದಗಳಿಗೆ ಸರಿಸಮಾನವಾದ ಕನ್ನಡಪದಗಳ ಬಳಕೆ ಮತ್ತು ಆವಿಷ್ಕಾರದ ಅಗತ್ಯವಿದೆ. ಉದಾಹರಣೆಗೆ ಮೊಬೈಲ್ ಸಂಖ್ಯೆ, ಆ್ಯನಿಮೇಷನ್, ಇ–ಮೇಲ್ ಮೊದಲಾದ ಪದಗಳು. ಒಂದೊಮ್ಮೆ ಸಂಸ್ಕೃತಮಯವಾಗಿದ್ದ ಕನ್ನಡ ತತ್ಸಮ – ತದ್ಭವ ಪದಗಳ ಮೂಲಕ ದೇಸೀಯತೆಯನ್ನು ಕಾಪಾಡಿಕೊಂಡಿತು. ಇದೇ ಅನುಸಂಧಾನದ ಮಾರ್ಗ ಇಂದಿನ ಅಗತ್ಯತೆಗಳಲ್ಲಿ ಒಂದಾಗಿದೆ.

ಬಳಕೆಯಲ್ಲಿ ಮಾತ್ರ ಅಷ್ಟಕ್ಕಷ್ಟೆ ಎನ್ನಬಹುದು. ಆನ್‌ಲೈನ್ ಮುಖಾಂತರ ಯಾವುದಾದರೂ ಅರ್ಜಿಗಳನ್ನು ತುಂಬುವಾಗ ಅಥವಾ ಸರ್ಕಾರದ ಸುತ್ತೋಲೆ, ಪ್ರಕಟಣೆ ಮೊದಲಾದವುಗಳನ್ನು ಅಂತರ್ಜಾಲದಲ್ಲಿ ಪ್ರಕಟಿಸುವಾಗ ಇಂಗ್ಲಿಷ್ ಸಂವಾದಿ ಕನ್ನಡದ ಪದಗಳನ್ನು ಬಳಸುವುದು ತೀರಾ ವಿರಳ ಮತ್ತು ಕಠಿಣವೆಂದೇ ಹೇಳಬಹುದು. ಅಥವಾ ಹೆಚ್ಚಾಗಿ ಇಂಗ್ಲಿಷ್ ಪದಗಳನ್ನು ಬಳಸುವುದೇ ರೂಢಿಯಲ್ಲಿದೆ. ಇಂತಹ ಪದಗಳಿಗೆ ಸರಿಸಮಾನವಾದ ಕನ್ನಡಪದಗಳ ಬಳಕೆ ಮತ್ತು ಆವಿಷ್ಕಾರದ ಅಗತ್ಯವಿದೆ. ಉದಾಹರಣೆಗೆ ಮೊಬೈಲ್ ಸಂಖ್ಯೆ, ಆ್ಯನಿಮೇಷನ್, ಇ–ಮೇಲ್ ಮೊದಲಾದ ಪದಗಳು. ಒಂದೊಮ್ಮೆ ಸಂಸ್ಕೃತಮಯವಾಗಿದ್ದ ಕನ್ನಡ ತತ್ಸಮ – ತದ್ಭವ ಪದಗಳ ಮೂಲಕ ದೇಸೀಯತೆಯನ್ನು ಕಾಪಾಡಿಕೊಂಡಿತು. ಇದೇ ಅನುಸಂಧಾನದ ಮಾರ್ಗ ಇಂದಿನ ಅಗತ್ಯತೆಗಳಲ್ಲಿ ಒಂದಾಗಿದೆ.

ಕಾಲದ ಅಗತ್ಯಕ್ಕೆ ತಕ್ಕಂತೆ ಭಾಷೆಯನ್ನು ಬೆಳೆಸುವುದು ಮತ್ತು ಆ ಮೂಲಕ ಉಳಿಸುವುದು ಹೇಗೆ ? – ಎಂಬ ಪ್ರಶ್ನೆಗೆ ಉತ್ತರಿಸಿದಷ್ಟು ಸುಲಭವಾಗಿ ಕಾರ್ಯ ರೂಪಕ್ಕೆ ತರಲು ಸಾಧ್ಯವಿಲ್ಲ. ಆದರೆ 'ಅಸಾಧ್ಯವೆಂಬುದಿಲ್ಲ' ಎಂಬ ಮಾತು ಅಷ್ಟೇ ಸತ್ಯ. ಇದಕ್ಕೆ ಮೊದಲು ಬೇಕಾಗಿರುವುದು ಇಚ್ಛಾಶಕ್ತಿ. ನಾವು, ನಮ್ಮದು ಎಂಬ ಸ್ವಾಭಿಮಾನ 'ಬೇರೆಯವರ ಸ್ವರ್ಗದಲ್ಲಿರುವುದಕ್ಕಿಂತ, ನಮ್ಮ ನರಕದಲ್ಲಿರುವುದೇ ಮೇಲು' ಎಂಬ ನಾಣ್ಣುಡಿಯಂತೆ ಬರುವ ಸವಾಲುಗಳನ್ನು ಮೆಟ್ಟಿ ನಿಂತಾಗ ಸಮಸ್ಯೆ ಇಂದಲ್ಲ ನಾಳೆಯಾದರೂ ಬಗೆಹರಿಯುತ್ತದೆ ಎಂಬ ಆತ್ಮವಿಶ್ವಾಸ ನಮ್ಮಲ್ಲಿರಬೇಕು. "ನಮ್ಮ ಭಾಷೆಯನ್ನು ನಾವು ಎತ್ತದೆ ಹೋದರೆ, ಎತ್ತುವವರು ಯಾರು ? ಎತ್ತುವುದಕ್ಕೆ ನಿಂತರೆ ತಡೆಯುವವರು ಯಾರು ?" ಎಂಬ ಬಿ. ಎಂ. ಶ್ರೀ.ಯವರ ಮಾತು ಇಲ್ಲಿ ಮನನೀಯವಾಗಿದೆ.

ಇಂದು ಕನ್ನಡಕ್ಕೆ ಪ್ರಧಾನವಾಗಿ ಎರಡು ಕ್ಷೇತ್ರಗಳು ಸವಾಲಾಗಿವೆ. ಅವೆಂದರೆ ಶಿಕ್ಷಣ ಮತ್ತು ಉದ್ಯೋಗ ಕ್ಷೇತ್ರಗಳು. ಈ ಎರಡು ನೆಲೆಯಲ್ಲಿ ತಾತ್ವಿಕ ಚಿಂತನೆ ಅಗತ್ಯವಾಗಿದೆ. ಶಿಕ್ಷಣಕ್ಕೆ ಸಂಬಂಧಿಸಿದಂತೆ ಸರ್ಕಾರ 'ಭಾಷಾ ಮಾಧ್ಯಮ ನೀತಿ'ಯೊಂದನ್ನು ರೂಪಿಸಿಕೊಳ್ಳಬೇಕು. ಈ ಮೂಲಕ ಉದ್ಯೋಗಾವಕಾಶಗಳಲ್ಲಿ ಸ್ಥಳೀಯರಿಗೆ ಆದ್ಯತೆ ಕಲ್ಪಿಸಬೇಕು, ಬಹುರಾಷ್ಟ್ರೀಯ ಕಂಪನಿಗಳಾದರೂ ಸ್ಥಳೀಯರಿಗೆಂದು ಕಡ್ಡಾಯವಾಗಿ ಇಂತಿಷ್ಟು ಎಂದು ಮೀಸಲಾತಿಯನ್ನು ನಿಗದಿಪಡಿಸಬೇಕು. ಕಂಪ್ಯೂಟರ್ ತಂತ್ರಜ್ಞಾನದಲ್ಲಿ 'ಕನ್ನಡ'ದ ಅಳವಡಿಕೆ ಮತ್ತು ಈ ನಿಟ್ಟಿನಲ್ಲಿ ಸಂಶೋಧಕರಿಗೆ ಆದ್ಯತೆ ನೀಡುವುದು, ಇಂಗ್ಲಿಷ್ ಮಾಧ್ಯಮದಲ್ಲಿಯೂ ಕಡ್ಡಾಯವಾಗಿ ಒಂದು 'ಭಾಷೆ' ಕನ್ನಡವಿರಲೇಬೇಕು ಎಂಬ ನೀತಿ, ಕನ್ನಡ ಮಾಧ್ಯಮದ ಶಾಲೆಯಲ್ಲಿಯೂ ಇಂದಿನ ಅಗತ್ಯಕ್ಕೆ ತಕ್ಕಂತೆ (ಸಂವಹನ ಕೌಶಲ್ಯಕ್ಕಾಗಿ) ಇಂಗ್ಲಿಷ್‌ಅನ್ನು ಒಂದು ವಿಷಯವಾಗಿ ಕನ್ನಡದ ಜೊತೆ ಜೊತೆಯಲ್ಲಿ ಕಲಿಸುವುದು... ಹೀಗೆ ಹತ್ತು ಹಲವು ರೂಪುರೇಷೆಗಳ ಮೂಲಕ ಕನ್ನಡವನ್ನು ಉಳಿಸಿ – ಬೆಳೆಸುವ ಮಾರ್ಗಗಳಿವೆ. ಪ್ರೊ|| ಎಲ್. ಎಸ್. ಶೇಷಗಿರಿರಾವ್ ಹೇಳುವಂತೆ, "ಇಂದು ನಮಗೆ ಭಾಷೆ ತಲೆ ಎತ್ತುವುದೆಂದರೆ ಎಲ್ಲಾ ಘಟ್ಟಗಳಲ್ಲಿ ಶಿಕ್ಷಣದ ಮಾಧ್ಯಮವಾಗುವಂತೆ ಬೆಳೆಸುವುದು, ಅತ್ಯಂತ ಆಧುನಿಕ ಜ್ಞಾನವನ್ನು ನಿರೂಪಿಸಲು ಸಾಧ್ಯವಾಗುವಂತೆ ಬೆಳೆಸುವುದು, ಇದಕ್ಕೆ ಅಗತ್ಯವಾದಂತೆ ಭಾಷೆಯನ್ನು ಬೆಳೆಸುವುದು, ಪುಸ್ತಕಗಳನ್ನು ಸಿದ್ಧಮಾಡುವುದಾಗಿದೆ. "

ಆದರೆ ಇಂದಿನ ಸರ್ಕಾರ ಮಕ್ಕಳ ದಾಖಲಾತಿ ಕೊರತೆಯಿಂದಾಗಿ ಕನ್ನಡ ಶಾಲೆಗಳನ್ನು ಮುಚ್ಚುವ ಹಂತ ತಲುಪಿದ್ದಾಗಿದೆ. ಇದಕ್ಕೆ ಪರ್ಯಾಯವಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳನ್ನು ತೆರೆಯುವುದೊಂದೇ ದಾರಿ ಎಂಬಂತೆ ದಾಪುಗಾಲು ಹಾಕಲಾಗುತ್ತಿದೆ. ಇದೇ ಪರಿಸ್ಥಿತಿ ಮುಂದುವರಿದರೆ ಮುಂದಿನ ಪೀಳಿಗೆಗೆ ಕನ್ನಡ – ಕರ್ನಾಟಕ ಎಂಬ ಪದಗಳು ಚರಿತ್ರೆಯಾಗಿ ಇತಿಹಾಸದ ಪುಟಗಳನ್ನು ಸೇರುವುದರಲ್ಲಿ ಸಂಶಯವಿಲ್ಲ. ಆಮೂಲಾಗ್ರವಾಗಿ ಶಿಕ್ಷಣ ನೀತಿಯನ್ನು ಬದಲಿಸಿ ಸಿ.ಬಿ.ಎಸ್.ಸಿ. ಪಠ್ಯಕ್ರಮವನ್ನು ಅಳವಡಿಸಹೊರಟಿರುವ ನಮ್ಮ ಶಿಕ್ಷಣ ನೀತಿ ಕನ್ನಡ ಭಾಷೆಯನ್ನು ಮತ್ತಷ್ಟು ಅಧೋಗತಿಗೆ ಕೊಂಡೊಯ್ಯುವ ಅಪಾಯವಿದೆ. ಏಕೆಂದರೆ ಮೇಲುನೋಟಕ್ಕೆ ಕೇಂದ್ರೀಯ ಪಠ್ಯಕ್ರಮ ಕನ್ನಡಕ್ಕೆ ಕುತ್ತಿಲ್ಲವೆಂದುಕೊಂಡರೂ ಸೂಕ್ಷ್ಮವಾಗಿ ಗಮನಿಸಿದಾಗ ಇದು ಸಹ ಇಂಗ್ಲಿಷ್ ಮಾಧ್ಯಮವನ್ನು ಎತ್ತಿ ಹಿಡಿಯುವ ಹುನ್ನಾರವಾಗಿದೆ. 'ವಿಜ್ಞಾನ' ವಿಷಯವನ್ನು ಕನ್ನಡ–ಇಂಗ್ಲಿಷ್ ಎರಡು ಮಾಧ್ಯಮಗಳಲ್ಲೂ ಅಧ್ಯಯನಕ್ಕೆ ಅವಕಾಶ ಮಾಡಿಕೊಡಲಾಗಿರುವುದು ಶ್ಲಾಘನೀಯ. ಆದರೆ ಕನ್ನಡ ಮಾಧ್ಯಮದಲ್ಲಿ ಅಭ್ಯಸಿಸುವುದರ ಉಪಯೋಗವೇನು ? ಎಂದರೆ 'ಏನೂ ಇಲ್ಲ' ಎಂಬ ಉತ್ತರ ಎಲ್ಲರಿಗೂ ಸ್ಪಷ್ಟವಾಗಿ ತಿಳಿದಿದೆ. ಏಕೆಂದರೆ ಪದವಿ ಮಟ್ಟದಲ್ಲಿಯಾಗಲಿ ಅಥವಾ ಉನ್ನತ ಶಿಕ್ಷಣ ಮಟ್ಟದಲ್ಲಿಯಾಗಲಿ ವಿಜ್ಞಾನವನ್ನು ಕನ್ನಡ ಮಾಧ್ಯಮದಲ್ಲಿ ಅಳವಡಿಸಿಲ್ಲ. ಈ ಹಿನ್ನೆಲೆಯಲ್ಲಿ ವಿಶ್ವವಿದ್ಯಾಲಯಗಳೂ ಕನ್ನಡ ಮಾಧ್ಯಮವನ್ನು ಸ್ವೀಕರಿಸಬೇಕು. ಆಗ ಮಾತ್ರ ರಾಜ್ಯ ಸರ್ಕಾರದ ಕೇಂದ್ರೀಯ ಪಠ್ಯ ಮಾದರಿ ಸಾರ್ಥಕ್ಯವನ್ನು ಪಡೆದುಕೊಳ್ಳುತ್ತದೆ. ಭಾಗಶಃ ಉದ್ಯೋಗಕ್ಕಾಗಿಯೇ ಓದುತ್ತಿರುವ ಇಂದಿನ ಕಾಲದಲ್ಲಿ ಜ್ಞಾನಾರ್ಜನೆಗಾಗಿ ಓದುವವರ ಸಂಖ್ಯೆ ಬೆರಳೆಣಿಕೆಯಷ್ಟು. ಈ ಹಿನ್ನೆಲೆಯಲ್ಲಿ ಸಿ.ಬಿ.ಎಸ್.ಸಿ. ಪಠ್ಯಕ್ರಮದಿಂದ ಕನ್ನಡ ಭಾಷೆ ಮತ್ತು ಮಾಧ್ಯಮಗಳು ಹಿಂದೆ ಬೀಳುವುದರಲ್ಲಿ ಸಂಶಯವಿಲ್ಲ.

ಖಾಸಗಿ ಮತ್ತು ವಿದೇಶಿ ವಿಶ್ವವಿದ್ಯಾಲಯಗಳಿಗೆ ಅವಕಾಶ ಕಲ್ಪಿಸುತ್ತಿರುವ ಹಿನ್ನೆಲೆಯಲ್ಲಿ ಸ್ಥಳೀಯ ಭಾಷೆಗಳ ಉಳಿಕೆ ಮುಂದಿನ ದಿನಗಳಲ್ಲಿ ಮತ್ತಷ್ಟು ಕಠಿಣವಾಗುತ್ತದೆ. ಇದು ಕನ್ನಡಕ್ಕೂ ತಪ್ಪಿದ್ದಲ್ಲ. ಶಿಕ್ಷಣಕ್ಕಿಂತ ಬಂಡವಾಳ, ವ್ಯಾಪಾರವನ್ನು ದೃಷ್ಟಿಯಲ್ಲಿಟ್ಟುಕೊಂಡು ಸ್ಥಾಪನೆಯಾಗುವ ಈ ವಿಶ್ವವಿದ್ಯಾಲಯಗಳು ವಿದೇಶಗಳಲ್ಲಿ ದುಡಿಯುವ ಯಂತ್ರಗಳನ್ನು ತಯಾರಿಸುವ ಕಾರ್ಖಾನೆಗಳಾಗುತ್ತವೆಯೇ ಹೊರತು ದೇಶ, ಭಾಷೆ ಎಂಬ ಸ್ವಾಭಿಮಾನವುಳ್ಳ ಆದರ್ಶ ಪ್ರಜೆಗಳನ್ನು ಸೃಷ್ಟಿಸುವುದಿಲ್ಲ. ವಸಾಹತುಶಾಹಿ ಸಂದರ್ಭದಲ್ಲಿ ಶೈಕ್ಷಣಿಕ ಕ್ಷೇತ್ರಕ್ಕೆ ರಾಜಕೀಯ ಆಯಾಮವಿತ್ತು. ಆದ್ದರಿಂದ ಕನ್ನಡದ ಅಭಿವೃದ್ಧಿಗೆ ಅಗತ್ಯವಾದ ಸೈದ್ಧಾಂತಿಕ ನೆಲೆಗಳನ್ನು ರೂಪಿಸಿಕೊಳ್ಳುವುದು ಸಾಧ್ಯವಿರಲಿಲ್ಲ. ಇಂದಿಗೂ ಈ ಸಮಸ್ಯೆ ಸಮಸ್ಯೆಯಾಗಿಯೇ ಉಳಿದಿರುವುದು ನಮ್ಮ ದುರಂತ. ಖಾಸಗೀಕರಣ, ಮುಕ್ತ ವ್ಯಾಪಾರದ ಹೆಸರಿನಲ್ಲಿ 'ವಸಾಹತೀಕರಣದಿಂದ ಪಾರಾಗಿ ನವವಸಾಹತೀಕರಣ'ವನ್ನು ಸೃಷ್ಟಿಮಾಡಿಕೊಂಡಿದ್ದೇವೆ. ಇದರಿಂದಾಗಿ ಆರ್ಥಿಕತೆಯ ಜೊತೆಗೆ ಶಿಕ್ಷಣ, ಸಂಸ್ಕೃತಿ, ಭಾಷೆಯ ಮೇಲೂ ಜಾಗತೀಕರಣದ ಪ್ರಭಾವ ಹೆಚ್ಚಾಗುತ್ತಿದೆ. 'ಇಂಗ್ಲಿಷ್'ನ ಪ್ರಭಾವ ಇತರ ಭಾಷೆಗಳಿಗೆ ಹೋಲಿಸಿಕೊಂಡರೆ ಕನ್ನಡ ಭಾಷೆಯ ಮೇಲೆಯೇ ಹೆಚ್ಚು. ಸಾಕ್ಷರತೆಯಲ್ಲಿ ಮತ್ತು ಶಿಕ್ಷಣದ ಗುಣಮಟ್ಟದಲ್ಲಿ ಮುಂದಿರುವ ಕೇರಳ, ತಮಿಳುನಾಡು, ಆಂಧ್ರ ರಾಜ್ಯಗಳಲ್ಲಿಯೂ ಇಂಗ್ಲಿಷ್‌ನ ದಟ್ಟ ಪ್ರಭಾವವಿದೆ. ಆದರೆ ಅಲ್ಲಿನ ಜನತೆ ಭಾಷಾಭಿಮಾನಿಗಳು. ಆದ್ದರಿಂದಲೇ ಇಂಗ್ಲಿಷ್‌ನ ಜೊತೆಗೆ ಮೊದಲು ತಮ್ಮ ಭಾಷೆಗೆ ಆದ್ಯತೆ ನೀಡುತ್ತಾರೆ. ಇದಕ್ಕೆ ತಕ್ಕಂತೆ ಸರ್ಕಾರದ ಪ್ರೋತ್ಸಾಹವೂ ಇದೆ. ಹಿಂದಿಯನ್ನು ರಾಷ್ಟ್ರ ಭಾಷೆಯನ್ನಾಗಿ ಮಾಡಬೇಕೆಂದು ಕೇಂದ್ರ ನಿರ್ಧರಿಸಿದಾಗ, ಇದನ್ನು ವಿರೋಧಿಸಿ ತಮಿಳಿನ ಜನತೆ ಬೀದಿಗಿಳಿದಿತ್ತು. ಕನ್ನಡಿಗರಿಗೆ ಕರ್ನಾಟಕದಲ್ಲಿ ಮಾಧ್ಯಮ ಸಮಸ್ಯೆ ಎದುರಾಗಿರುವ ಇಂದಿಗೂ ಈ ಇಚ್ಛಾಶಕ್ತಿ ಬಂದಿಲ್ಲವೆಂಬುದು ವಿಷಾದದ ಸಂಗತಿಯಾಗಿದೆ.

ಯೂರೋಪ್‌ನಲ್ಲಿ ೨೩ ಭಾಷೆಗಳಿವೆ. ೨೩ ಭಾಷೆಗಳಲ್ಲಿಯೂ ಆಡಳಿತ ನಡೆಯುತ್ತಿದೆ. ಯೂರೋಪಿಗೆ ಇದು ಸಾಧ್ಯವಾಗುತ್ತಿದ್ದರೆ ಕನ್ನಡವನ್ನು ಕರ್ನಾಟಕದಲ್ಲಿ ಬಳಸಲಾಗುತ್ತಿಲ್ಲ, ಏಕೆ ? ದೇಶಕ್ಕೊಂದು ಭಾಷೆಯೆಂದು ಹಿಂದಿಯನ್ನು ಸ್ವೀಕರಿಸಿರುವಂತೆ ರಾಜ್ಯಕ್ಕೊಂದು ಭಾಷೆಯೊಂದನ್ನು ಸ್ವೀಕರಿಸಲಾಗಿದೆ. ಆದರೆ ರಾಷ್ಟ್ರೀಯ ಭಾಷೆಯೊಂದಿಗೆ ಸ್ಥಳೀಯ ಭಾಷೆ ಬಳಕೆಯಾಗದೆ ಇರುವುದು ವಿಪರ್ಯಾಸ. ಕೇಂದ್ರ ಸ್ವಾಯತ್ತತೆಯ ಕಛೇರಿಗಳಲ್ಲಿ (ಅಂಚೆ, ಬ್ಯಾಂಕ್, ವಿಮೆ, ಪಾಸ್‌ಪೋರ್ಟ್ ಕಛೇರಿ, ರೈಲ್ವೆ ...) ಹಿಂದಿಯೊಂದಿಗೆ ಇಂಗ್ಲಿಷ್‌ಅನ್ನು ಬಳಸುವ ಬದಲು ಸ್ಥಳೀಯ ಭಾಷೆಗಳಿಗೆ ಆದ್ಯತೆಯನ್ನು ನೀಡಬೇಕು. ರೈಲ್ವೆ, ಅಂಚೆ, ಬ್ಯಾಂಕಿಂಗ್ ಮೊದಲಾದ ಸಂಸ್ಥೆಗಳ ಸ್ಪರ್ಧಾತ್ಮಕ ಪರೀಕ್ಷೆಗಳಲ್ಲಿ ಸ್ಥಳೀಯ ಭಾಷೆಗೂ ಅವಕಾಶ ಕೊಟ್ಟು ನಮ್ಮ ರಾಜ್ಯದಲ್ಲಿರುವ ಕೇಂದ್ರ ಸರ್ಕಾರದ ಸಂಸ್ಥೆಗಳಲ್ಲಿ ಉದ್ಯೋಗಾವಕಾಶವನ್ನು ಕಲ್ಪಿಸಬೇಕು. ಇದರಿಂದ ಕರ್ನಾಟಕದಲ್ಲಿ ಕನ್ನಡವೇ ಸಾರ್ವಭೌಮ ಭಾಷೆಯಾಗುತ್ತದೆ. ಇದಕ್ಕೆ ಕನ್ನಡಿಗರ ಹೋರಾಟ, ಸ್ವಾಭಿಮಾನ, ಇಚ್ಛಾಶಕ್ತಿಯೂ ಅಗತ್ಯವಾಗಿದೆ ಮತ್ತು ಇದರಿಂದ ಜಾಗತೀಕರಣದ ಸವಾಲುಗಳನ್ನೂ ಸಹ ಸಮರ್ಥವಾಗಿ ಎದುರಿಸಬಹುದಾಗಿದೆ.

**ಎಂ. ರೇಖಾ**
ಸಂಶೋಧನಾ ವಿದ್ಯಾರ್ಥಿನಿ, ಕನ್ನಡ ವಿಭಾಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು.

ಜ. ಹೊ. ನಾರಾಯಣಸ್ವಾಮಿ



ವಿಶ್ವಕ್ಕೆ ಜ್ಞಾನದ ಬೆಳಕನ್ನು ಬೀರಬಲ್ಲ ಅಂತಃಸತ್ವವನ್ನು ಒಳಗೊಂಡಿರುವ ಭಾರತ ಮೌಢ್ಯದ ಕೊಳೆಕೊಂಪೆಯಲ್ಲಿ ಕರಗುತ್ತಿದೆ. ಅದಕ್ಕೆ ಸಾಕ್ಷಿ ಮೌಢ್ಯದ ಕಾರ್ಗತ್ತಲೆಗೆ ವೈಚಾರಿಕತೆಯ ಪಂಜು ಹಿಡಿದ ಮಹಾರಾಷ್ಟ್ರದ ವಿಚಾರವಾದಿ ಡಾ॥ ನರೇಂದ್ರ ದಾಭೋಲ್ಕರರ ಹತ್ಯೆ, ಅದು ಭವ್ಯ ಭಾರತದ ಆತ್ಮಹತ್ಯೆಯೆ ಸರಿ.

ಪ್ರಗತಿ ಸೃಷ್ಟಿಯ ನಿಯತಿ. ನಿಂತ ನೀರು ಕೊಳೆಯುತ್ತದೆ. ಅದು ನಿಸರ್ಗ ವಿರೋಧಿ. ವಿಚಾರದಿಂದ ವಿಮೋಚನೆ. ವಿಚಾರ ಪ್ರಗತಿಯ ಉಸಿರು. ವಿಚಾರ ಎನ್ನುವ ಪದ 'ವಿಚ್' ಎನ್ನುವ ಧಾತುವಿನಿಂದ ಬಂದಿದೆ. ವಿಚ್ ಎಂದರೆ ಒಡೆದು ನೋಡು, ಕತ್ತರಿಸಿ ನೋಡು, ಒಳಹೊಕ್ಕು ನೋಡು ಎಂಬ ಅರ್ಥಗಳಿವೆ. ವಿಚಾರ ಮತ್ತು ವಿಜ್ಞಾನ ಒಂದೇ ನಾಣ್ಯದ ಎರಡು ಮುಖಗಳು ಇದ್ದ ಹಾಗೆ. ಒಂದು ಮತ್ತೊಂದಕ್ಕೆ ಪೂರಕವಾದುದು.

ಮೌಢ್ಯದ ವಿರುದ್ಧ ಬೆಳಕು ಚೆಲ್ಲಿದ ವಿಚಾರವಾದಿಗಳ ಹಾಗೂ ವಿಜ್ಞಾನಿಗಳ ಮೇಲೆ ಕಾಲಕಾಲದಿಂದಲೂ ದಾಳಿ, ಕೊಲೆಗಳು ನಡೆಯುತ್ತಾ ಬಂದಿವೆ. ಅದು ಒಳಿತಿನ ಬೆಳಕಿನ ಮೇಲೆ ಕೆಡುಕಿನ ಕತ್ತಲೆಯು ನಡೆಸುವ ದಾಳಿ. ಇದು ಭೂಮಿಯ ಮೇಲಿನ ಮಾನವನ ಬದುಕಿನ ನಕಾರಾತ್ಮಕ ಧೋರಣೆಗೆ ಸಾಕ್ಷಿಯಾಗಿದೆ. ಇದು ಎಲ್ಲ ಧರ್ಮಗಳಲ್ಲಿ ಅವಿತಿರುವ ಪುರೋಹಿತಶಾಹಿಗಳ ಕ್ರೌರ್ಯದ ಪ್ರತೀಕ. ಅದು ಮನುಕುಲಕ್ಕೆ ಬೆಳಕನ್ನು ನೀಡಿದ ಗೌತಮ ಬುದ್ಧನ ವಿಚಾರದಿಂದ ಹಿಡಿದು ಗೆಲಿಲಿಯೋ, ಸಾಕ್ರಟೀಸ್, ಚಾರ್ವಾಕರ ಮೇಲೆ ನಡೆಯುತ್ತಾ ಬಂದಿದ್ದು ಈಗ ಡಾ॥ ನರೇಂದ್ರ ದಾಭೋಲ್ಕರರವರೆಗೆ ಬಂದು ನಿಂತಿದೆ.

# ಡಾ॥ ನರೇಂದ್ರ ದಾಭೋಲ್ಕರ್ ಹತ್ಯೆ ಭವ್ಯ ಭಾರತದ ಆತ್ಮಹತ್ಯೆ

ಸ್ವತಂತ್ರ ಭಾರತದ ಕಪ್ಪು ಇತಿಹಾಸ ಅದರ ಪ್ರಾರಂಭದಲ್ಲಿಯೇ ಮೊಗ ಪಡೆಯಿತು. ದಲಿತ ವರ್ಗದಿಂದ ಬಂದ ಡಾ॥ ರಾಜೇಂದ್ರ ಪ್ರಸಾದ್ ಪ್ರಥಮ ರಾಷ್ಟ್ರಾಧ್ಯಕ್ಷರಾಗಿ ಮಾಡಿದ ಮೊದಲ ಅಂಧಕಾರದ ಕೆಲಸ ಎಂದರೆ ಕಾಶಿಯಲ್ಲಿ ೨೧೧ ಬ್ರಾಹ್ಮಣರ ಪಾದಪೂಜೆಯನ್ನು ಸಾರ್ವಜನಿಕವಾಗಿ ಮಾಡಿ ಜಾತಿಯ ಶ್ರೇಷ್ಠ, ಕನಿಷ್ಠತೆಯ ಹುಸಿಯನ್ನು ಬಿತ್ತಿದ್ದು. ಈ ಹುಸಿಯ ವಿಷಪೌರೋಹಿತ್ಯ ವಂಶಪಾರಂಪರ್ಯವಾಗಕೂಡದು ಎಂದು ಪ್ರತಿಪಾದಿಸಿದ ಅಂಬೇಡ್ಕರ್ ಅವರನ್ನು ಆಹುತಿ ತೆಗೆದುಕೊಂಡಿತು. ಇತಿಹಾಸವನ್ನು ಆಮೂಲಾಗ್ರ ಅರಿತಿದ್ದ ಅಂಬೇಡ್ಕರ್ 'ಹಿಂದೂ ಧರ್ಮವನ್ನು ಹಾಳುಗೆಡವಿದ್ದು ಬ್ರಾಹ್ಮಣಶಾಹಿ ಎನ್ನುವ ವಿಷ' ಎಂದು ನೊಂದು ಐತಿಹಾಸಿಕ ಸತ್ಯವನ್ನು ವ್ಯಕ್ತಪಡಿಸಿದರು. ವೈದಿಕ ಧರ್ಮಕ್ಕೆ ಕೊಂಚ ಸುಧಾರಣೆಯನ್ನು ತಂದ ದಯಾನಂದ ಸರಸ್ವತಿ ಅವರನ್ನು ಅವರು ಬ್ರಾಹ್ಮಣರಾಗಿದ್ದರೂ – ಕೊಲ್ಲಲಾಯ್ತು. ಆ ಸಾಲಿಗೆ ಈಗ ಬ್ರಾಹ್ಮಣರಾದ ಡಾ॥ ನರೇಂದ್ರ ದಾಭೋಲ್ಕರರೂ ಸೇರಿದ್ದಾರೆ.

ಪುರುಷ–ಪ್ರಕೃತಿ ಅಪ್ರತ್ಯೇಕ ಎನ್ನುವುದರ ಸಂಕೇತ 'ಅರ್ಧನಾರೀಶ್ವರ' ಎಂಬ ಭಾರತೀಯ ಕಲ್ಪನೆ. ಅದು ವಿಶ್ವಸತ್ಯ. ತನ್ನ ಬಾಹುಬಲದ ಕಾರಣ ಪುರುಷ ತನ್ನ ಪ್ರಾಬಲ್ಯವನ್ನು ಮೆರೆಯುತ್ತಾ ಸ್ತ್ರೀಯನ್ನು ಸಮಾನವಾಗಿ ಕಾಣುತ್ತಿಲ್ಲ. ಇದೇ ಪುರುಷನ ಎಲ್ಲ ಕ್ರೌರ್ಯಗಳಿಗೆ ಮೂಲವಾಗಿದೆ. ಪುರುಷರ ಪೌರೋಹಿತ್ಯ ತಾನು ಶ್ರೇಷ್ಠ ಎಂಬ ಹುಸಿ ಅಹಂಕಾರದಿಂದ ಬೀಗುತ್ತಿದೆ. ಸಮಾನತೆ ಎಂದರೆ ಅದಕ್ಕೆ ಸಾವಿಗೆ ಸಮ.

ಪೌರೋಹಿತ್ಯವನ್ನು, ಅದರ ಕ್ರೌರ್ಯವನ್ನು ಖಂಡತುಂಡವಾಗಿ ಖಂಡಿಸಿದವರು ಬಸವಣ್ಣನವರು. 'ಸತಿಯರ ಸಂಗವನು, ಅತಿಶಯದ ಗ್ರಾಸವನು, ಪೃಥಿವೀಶ್ವರ ಪೂಜೆಯನು ಅರಿವುಳ್ಳಡೆ ಹೆರರ ಕೈಯಿಂದ ಮಾಡಿಸುವರೆ?' ಎಂದು ದೇವರ ದಾಸಿಮಯ್ಯ ಪ್ರಶ್ನಿಸಿದರೆ, 'ತನ್ನಾಶ್ರಯದ ರತಿಸುಖವನು ತಾನುಂಬ ಊಟವನು ಬೇರೆ ಮತ್ತೊಬ್ಬರ ಕೈಯಲಿ ಮಾಡಿಸಬಹುದೆ?' ಎಂದು ಕಟುವಾಗಿ ಬಸವಣ್ಣನವರು ಪ್ರಶ್ನಿಸಿದರು. ಮುಂದುವರಿದು, ಅಂಗೈಗೆ ಲಿಂಗವನ್ನಿತ್ತು ಪುರೋಹಿತರಿಂದ ಪಾರುಮಾಡಿದರು. ಆದರೂ ಜನರು ನವೀಕರಣಗೊಂಡ ಬಂಧನಕ್ಕೆ ಬಲಿಯಾದರೆ ಹೊರತು ಬಿಡುಗಡೆಗೊಂಡು ಸ್ವತಂತ್ರರಾಗಲಿಲ್ಲ. 'ಜಗದ ದೇಗುಲದಲ್ಲಿ ಜಗದು ದಯ ಕಾರಣನ ಕಾಣದವನು ಎಂತು ಕಾಣ್ಬನು ಶಿವನ ಗುಡಿಯಲ್ಲಿ?' ಎಂದು ಪ್ರಶ್ನಿಸುವ ಕುವೆಂಪು 'ಮೌಢ್ಯದ ಸಂಘರ್ಷವಿಲ್ಲದೆ, ಪೌರೋಹಿತ್ಯದ ಸೋಂಕಿಲ್ಲದೆ, ಸುಲಿಗೆಗೆ ಮಾಧ್ಯಮವಾಗದೆ ಕಲ್ಲು ಲೋಹಗಳಲ್ಲಿಯೂ ಭಗವಂತನನ್ನು ಕಾಣುವುದಾದರೆ ತಪ್ಪಿಲ್ಲ' ಎಂದು ಮುಕ್ತಮಾರ್ಗವನ್ನು ತೋರಿದ್ದಾರೆ. ಈ ಹಿನ್ನೆಲೆಯಲ್ಲಿಯೇ 'ಗುಡಿ, ಚರ್ಚು, ಮಸಜೀದಿಗಳ ಬಿಟ್ಟುಹೊರಬನ್ನಿ' ಎನ್ನುವ ಕುವೆಂಪು 'ಯಾವ ಕಾಲದ ಶಾಸ್ತ್ರವೇನು ಹೇಳಿದರೇನು? ಎದೆಯದನಿಗೂ ಮಿಗಿಲು ಶಾಸ್ತ್ರವಿಹುದೇನು?' ಎಂದು ಸಕಲ ಜೀವಿಗಳ ಹೃದಯಶ್ರೀಯನ್ನು ಮಾನ್ಯಮಾಡಿದ್ದಾರೆ. ಇಂಥ ವಿಚಾರಗಳನ್ನು ಬಿತ್ತುವ ಮನುಕುಲದ ಮಹಾನ್ ಚಿಂತಕರ ಮೇಲೆ, ಅವರಿಂದ ಪ್ರಭಾವಿತರಾದ ವಿಚಾರವಾದಿಗಳ ಮೇಲೆ ಪುರೋಹಿತಶಾಹಿಯ ಕೆಂಗಣ್ಣು ಸದಾ ಕುದಿಯುತ್ತಲೇ ಇರುತ್ತದೆ. ಸಹನೆ ಮಿತಿ ಮೀರಿದಾಗ ಡಾ॥ ನರೇಂದ್ರ ದಾಬೋಲಕರರನ್ನು ಆಹುತಿಗೊಂಡಂತೆ ಆಹುತಿಗೊಳ್ಳಲು ಹವಣಿಸುತ್ತಲೇ ಇರುತ್ತದೆ. ಈ ಹಿನ್ನೆಲೆಯಲ್ಲಿಯೆ ವಿವೇಕಾನಂದರು :

*ನೀಚರೂ ಕುತಂತ್ರಿಗಳೂ ಆದ ಪುರೋಹಿತರು ಎಲ್ಲಾ ವಿಧದ ಮೂಢನಂಬಿಕೆಗಳನ್ನು ವೇದ ಮತ್ತು ಹಿಂದೂ ಧರ್ಮದ ಸಾರ ಎಂದು ಬೋಧಿಸುತ್ತಾರೆ. ಈ ಠಕ್ಕುಗಾರರಾದ ಪುರೋಹಿತರಾಗಲೀ ಅಥವಾ ಅವರ ತಾತ ಮುತ್ತಾತಂದಿರಾಗಲೀ ಕಳೆದ ೪೦೦ ತಲೆಮಾರುಗಳಿಂದಲೂ ವೇದದ ಒಂದು ಭಾಗವನ್ನು ನೋಡಿಲ್ಲ. ಮೂಢಾಚಾರಗಳನ್ನು ಅನುಸರಿಸಿ ಹೀನಸ್ಥಿತಿಗೆ ಬರುತ್ತಾರೆ. ಕಲಿಯುಗದಲ್ಲಿ ಬ್ರಾಹ್ಮಣ ವೇಶದಲ್ಲಿರುವ ಈ ರಾಕ್ಷಸರಿಂದ ಮುಗ್ಧ ಜನರನ್ನು ಆ ದೇವರೇ ಕಾಪಾಡಬೇಕು* (ಸಂ: ೬ – ಪು: ೬೬)

– ಎಂದು ನಿಜವಾದ ರಾಕ್ಷಸರನ್ನು ಗುರುತಿಸಿದ್ದಾರೆ. ದುರಂತವೆಂದರೆ ಜನ ಆ ರಾಕ್ಷಸರನ್ನೇ ತಮ್ಮ ರಕ್ಷಕರೆಂದು ಓಲೈಸುವ ಬುದ್ಧಿಹೀನತೆಯಿಂದ ನರಳುತ್ತಿರುವುದು.

ಭಾರತದ ಸಂವಿಧಾನದ ಪರಿಚ್ಛೇದ ೧೪ ಲಿಂಗಭೇದವಿಲ್ಲದೆ 'ಕಾನೂನಿನ ಮುಂದೆ ಸಮಾನತೆಯನ್ನು ಅಥವಾ ಕಾನೂನುಗಳಿಂದ ಸಮಾನ ರಕ್ಷಣೆಯನ್ನು ರಾಜ್ಯವು ಅಲ್ಲಗಳೆಯತಕ್ಕುದಲ್ಲ' ಎಂದು ಎಲ್ಲರಿಗೂ ಸಮಾನತೆಯನ್ನು ನೀಡಿದೆ. ಅಲ್ಲದೆ 'ವೈಜ್ಞಾನಿಕ ಮನೋಭಾವನೆ, ಮಾನವೀಯತೆ, ಜಿಜ್ಞಾಸೆ ಮತ್ತು ಸುಧಾರಣಾ ಪ್ರವೃತ್ತಿಯನ್ನು ಅಭಿವೃದ್ಧಿಗೊಳಿಸುವುದು' ಪ್ರತಿಯೊಬ್ಬ ನಾಗರಿಕನ ಮೂಲಭೂತ ಕರ್ತವ್ಯ ಎಂದು ಪರಿಚ್ಛೇದ ೫೧ 'ಎ'ನಲ್ಲಿ ಹೇಳಿದೆ. ಆದರೂ ಸಮಾನತೆ – ಅದರಲ್ಲೂ ಸ್ತ್ರೀ–ಪುರುಷರ ನಡುವೆ – ಮರೀಚಿಕೆಯಾಗಿಯೇ ಉಳಿದಿದೆ. ಮಹಿಳೆಯರ, ದಲಿತರ ದೇಗುಲ ಪ್ರವೇಶವನ್ನು ಮುಕ್ತಗೊಳಿಸುವ ಗೋಜಿಗೆ ಹೋಗಿಲ್ಲ. ಡಾ॥ ಲೋಹಿಯಾ 'ನೀತಿಶಾಸ್ತ್ರದಂತೆ ಮಹಿಳೆಯರನ್ನು ಉಚ್ಚ ಜಾತಿಯವರೆಂದು ಪರಿಗಣಿಸುವಂತಿಲ್ಲ' ಎಂದು ಸಾರುತ್ತವೆ ಎಂದು ಹೇಳುತ್ತಾ 'ಜಾತಿಯ ಮತ್ತು ಸ್ತ್ರೀಯರ ಪ್ರತ್ಯೇಕತೆಗಳು ನಮ್ಮ ಚೇತನದ ಅಧೋಗತಿಗೆ ಮೂಲಕಾರಣವೆಂದು ಸಂಪೂರ್ಣವಾಗಿ ಮನವರಿಕೆಯಾಗಿದೆ. ಈ ಎರಡೂ ಪ್ರತ್ಯೇಕತೆಗಳು ಎಲ್ಲ ಸಾಹಸ ಹಾಗೂ ಉತ್ಸಾಹಗಳನ್ನು ಕೊಲೆ ಮಾಡುವಷ್ಟು ಭಯಂಕರವಾಗಿದೆ' ಎಂದಿದ್ದಾರೆ. ಬ್ರಾಹ್ಮಣ ಸ್ತ್ರೀಯರಿಗೆ ಯಜ್ಞೋಪವೀತ ನಿಷಿದ್ಧವಾದರೆ ದಲಿತ ಮಹಿಳೆಯರು ಚಂದ್ರಗುತ್ತಿ, ಸವದತ್ತಿಗಳಲ್ಲಿ ಬೆತ್ತಲೆ ಸೇವೆಗೆ ಬಲಿಯಾಗಿದ್ದಾರೆ.

"ಜ್ಯೋತಿಷ್ಯ ಮುಂತಾದುವನ್ನು ಹೇಳಿ ಉದರಪೋಷಣೆ ಮಾಡಿಕೊಳ್ಳುವವರ ಹತ್ತಿರ ಸಂಬಂಧವನ್ನು ಇಟ್ಟುಕೊಳ್ಳಬಾರದು" ಎಂದು ಬುದ್ಧ ಸಾರಿದ. "ಮಂತ್ರವಾದಿಗಳ ಮತ್ತು ಮೋಸಗಾರರ ಕೈಗೆ ಬೀಳುವುದಕ್ಕಿಂತ ಯಾವುದರಲ್ಲಿಯೂ ನಂಬದೆ ಸಾಯುವುದು ಮೇಲು" ಎಂದು ವಿವೇಕಾನಂದರು ಎಚ್ಚರಿಸಿದ್ದಾರೆ. ಮುಂದುವರಿದು, 'ಮೂಢನಂಬಿಕೆ ಮಾನವನ ದೊಡ್ಡ ಶತ್ರು. ಆದರೆ ಸ್ವ–ಮತ ಭ್ರಾಂತಿ ಅದಕ್ಕಿಂತಲೂ ಘೋರ' ಎಂದು ಮತೀಯ ಮನಸ್ಸುಗಳಲ್ಲಿ ತಾಂಡವವಾಡುತ್ತಿರುವ ಗಾಢಾಂಧಕಾರವನ್ನು ಪರಿಚಯಿಸಿದ್ದಾರೆ. ಪುರೋಹಿತಶಾಹಿ ಕಾಲಕಾಲಕ್ಕೆ ಹೇಗೆ ಹೊಸ ಹೊಸ ಮೌಢ್ಯವನ್ನು ಬಿತ್ತುತ್ತಾ ತನ್ನ ಕ್ರೌರ್ಯವನ್ನು ಮೆರೆಯುತ್ತದೆ ಎಂಬುದನ್ನು ಭಾರತದ ಶ್ರೇಷ್ಠ ಚಿಂತಕರಾದ ರಾಹುಲ ಸಾಂಕೃತ್ಯಾಯನ ತಮ್ಮ 'ವೋಲ್ಗಾ–ಗಂಗಾ' ಎಂಬ ಕೃತಿಯಲ್ಲಿ ಸುಸ್ಪಷ್ಟವಾಗಿ ಚಿತ್ರಿಸಿದ್ದಾರೆ.

ಇಂಥ ಮೌಢ್ಯಗಳ ವಿರುದ್ಧ ಡಾ॥ ಅಬ್ರಹಾಂ ಕೋವೂರ್, ಎಚ್. ನರಸಿಂಹಯ್ಯ, ನರೇಂದ್ರ ನಾಯಕ್, ಭಾರತ ಜ್ಞಾನ ವಿಜ್ಞಾನ ಸಮಿತಿ ಸಮರ್ಥ ದನಿ ಎತ್ತಿರುವ ನಿದರ್ಶನಗಳು ನಮ್ಮ ಮುಂದಿವೆ. ಕೇರಳದ ಶಬರಿಮಲೆಯ ಅಯ್ಯಪ್ಪಸ್ವಾಮಿ ದೇವಸ್ಥಾನ ಪ್ರವೇಶಿಸಿ ಚಲನಚಿತ್ರ ಕಲಾವಿದೆ ಜಯಮಾಲ ಮಹಿಳೆಯರಿಗೆ ಪ್ರವೇಶ ನಿಷಿದ್ಧ ಎನ್ನುವುದರ ವಿರುದ್ಧ ಯುದ್ಧ ಸಾರಿದ್ದಾರೆ.

ಈ ಎಲ್ಲದರ ಹಿಂದೆ ಈಗ ಆಗಬೇಕಾಗಿರುವ ತುರ್ತಿನ ಕಾರ್ಯ ಎಂದರೆ ಸಮಾನತಾ ನೆಲೆಯಲ್ಲಿ ಸಮಾಜದ ಪ್ರಗತಿಯ ಬಗ್ಗೆ ಕಳಕಳಿಯುಳ್ಳ ವಿಚಾರವಂತರು ಒಕ್ಕೊರಲ ಧ್ವನಿಯನ್ನು ಎತ್ತಿ ಪುರೋಹಿತಶಾಹಿಯ ಕ್ರೌರ್ಯದ ಉದ್ದೇಶವನ್ನು ದಮನಗೈಯುವುದು. ಅದು ಅನಿಷ್ಟ ಸಾಮಾಜಿಕ ಪದ್ಧತಿ ನಿಷೇಧಿಸುವ ಕಾನೂನು ಜಾರಿಗೊಳಿಸುವಂತೆ ಒತ್ತಾಯಿಸಿದ, ಮೂಢನಂಬಿಕೆಗಳನ್ನು ವಿರೋಧಿಸಿದ, 'ಬ್ಲಾಕ್ ಮ್ಯಾಜಿಕ್'. ದೇವಮಾನವರನ್ನು ಅವರ ಪವಾಡಗಳ ರಹಸ್ಯಗಳನ್ನು ಬಯಲಿಗೆಳೆದ, ಪ್ರವೇಶ ನಿಷಿದ್ಧವಾಗಿದ್ದ ಅಹಮದ್ ನಗರದ ದೇವಾಲಯಕ್ಕೆ ಮಹಿಳೆಯರ ಪ್ರವೇಶಕ್ಕೆ ಒತ್ತಾಯಿಸಿ ಅಲ್ಲಿಯ ಬಿಜೆಪಿ, ಶಿವಸೇನೆಯ ಕೆಂಗಣ್ಣಿಗೆ ಗುರಿಯಾಗಿ ಅಂತಿಮವಾಗಿ ಪುರೋಹಿತಶಾಹಿಯ ಕ್ರೌರ್ಯಕ್ಕೆ ಕೊರಳು ತೆತ್ತ ಡಾ॥ ನರೇಂದ್ರ ದಾಭೋಲಕರರಿಗೆ ಕೊಡುವ ಅತ್ಯುನ್ನತ ಕೊಡುಗೆಯಾಗುತ್ತದೆ. ಅತ್ತ ವಿಚಾರವಂತರ ಚಿತ್ತ ಜೇನುಗೂಡಾಗಬಲ್ಲುದೆ ?

ಜ. ಹೊ. ನಾರಾಯಣಸ್ವಾಮಿ
ಅಡ್ವೊಕೇಟ್, ನಂ. ೨೦೬೪/ಎ, 'ಮಾನವ', ಉತ್ತರ ಬಡಾವಣೆ, ಹಾಸನ – ೫೭೩ ೨೦೧

## ಸಾದರ ಸ್ವೀಕಾರ

**ದಲಿತ ಲೋಕ** *ಡಾ॥ ಎಚ್. ಟಿ. ಪೋತೆ*
**ಪುಟ : x + ೧೪೦ = ೧೫೦** **ಬೆಲೆ ರೂ. ೧೦೦**
**ಕುಟುಂಬ ಪ್ರಕಾಶನ,** ವರ್ಷಾ ನಿಲಯ, ಪ್ಲಾಟ್ ನಂ. ೮೧/೮೨, ವಿಶ್ವವಿದ್ಯಾಲಯ ಅಂಚೆ, ಪ್ರಬುದ್ಧನಗರ, ಕುಸನೂರ ರಸ್ತೆ, ಗುಲಬರ್ಗಾ

**ಸಂಗೀತ ಕೋಣೆ** *ಮೂಲ : ನಮಿತಾ ದೇವಿದಯಾಲ;*
*ಕನ್ನಡಕ್ಕೆ : ಸದಾನಂದ ಕನವಳ್ಳಿ*
**ಪುಟ : ೩೩೨** **ಬೆಲೆ ರೂ. ೧೫೦**

**ಕಾಲಜ್ಞಾನಿ ಕನಕ** (ನಾಟಕ) *ಕಿ. ರಂ. ನಾಗರಾಜ*
**ಪುಟ : ೭೨** **ಬೆಲೆ ರೂ. ೫೦**

**ಬುದ್ಧಿಭ್ರಮಣೆ – ಮನೋವೈಜ್ಞಾನಿಕ ನೆಲೆಯಲ್ಲಿ**
*ಕನ್ನಡಕ್ಕೆ : ಕೆ. ವಿ. ತಿರುಮಲೇಶ್*
**ಪುಟ : ೧೫೨** **ಬೆಲೆ ರೂ. ೧೦೦**

**ಭಾಷೆಯಿಂದ ಭಾಷೆಗೆ...** (ಆಯ್ದ ಇಂಗ್ಲಿಷ್ ಕವನಗಳು: ಕನ್ನಡದಲ್ಲಿ) *ಡಾ॥ ಮೈ. ಶ್ರೀ ನಟರಾಜ*
**ಪುಟ : ೧೭೭** **ಬೆಲೆ ರೂ. ೧೦**

*ಮೇಲಿನ ನಾಲ್ಕು ಪುಸ್ತಕಗಳ ಪ್ರಕಾಶಕರು*
**ಅಭಿನವ,** ೧೭/೧೮–೨, ಮೊದಲನೆಯ ಮುಖ್ಯರಸ್ತೆ, ಮಾರೇನಹಳ್ಳಿ, ವಿಜಯನಗರ, ಬೆಂಗಳೂರು – ೪೦

**ನಾಲ್ಕು ಏಕಾಂಕ ನಾಟಕಗಳು**
*ಅನು : ಶ್ರೀನಿವಾಸ ವಿ. ಸುತ್ರಾವೆ*
**ಪುಟ : ೧೨೮** **ಬೆಲೆ ರೂ. ೯೦**
**ಕಲಾ ಪ್ರಕಾಶನ,** ನಂ. ೨, ೨ನೇ ಅಡ್ಡರಸ್ತೆ, ಮುನೇಶ್ವರ ಬ್ಲಾಕ್, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು–೩

**ಮರಳಿ ಗೂಡಿಗೆ** *ಶಾರದಾ ಎ. ಅಂಚನ್*
**ಪುಟ : xii + ೯೭** **ಬೆಲೆ ರೂ. ೧೦೦**
**ಪೂಜಾ ಪ್ರಕಾಶನ,** ಸಿ/೧, ತಳಮಾಳಿಗೆ, ಜಲಕೀರ್ತಿ ಕೋ. ಆಪ್. ಹೌಸಿಂಗ್ ಸೊಸೈಟಿ, ಜಯರಾಜ್‌ನಗರ, ಬೊರಿವಿಲಿ (ಪ), ಮುಂಬಯಿ – ೪೦೦ ೦೯೧

**ಸೇವೆಗಾಗಿ ಬಾಳು** (ಆತ್ಮಚರಿತ್ರೆ)
*ಡಾ॥ ತಾತಾ ಸಾಹೇಬ ಬಾಂಗಿ*
**ಪುಟ : ೩೨೮ + xx + ೩೨ = ೩೮೦ ಬೆಲೆ ರೂ. ೨೦೦**
**ತಾತಾ ಸಾಹೇಬ ಬಾಂಗಿ,** ವಕೀಲರು, ಕಾಯಕ, ಚನ್ನಮ್ಮ ನಗರ, ಜಮಖಂಡಿ – ೫೮೭ ೩೦೧

**ವಿಚಾರ ಜ್ಯೋತಿ** (ಅಂಕಣ ಬರಹಗಳ ಸಂಕಲನ)
*ಡಾ॥ ಆರ್. ಬಿ. ಚಿಲುಮಿ*
**ಪುಟ : viii + ೧೨೦ = ೧೨೮** **ಬೆಲೆ ರೂ. ೧೦೦**
**ಕಿಕ್ಕೇರಿ ಪಬ್ಲಿಕೇಷನ್ಸ್,** ನಂ. ೬೯, 'ಡಿ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು – ೪೦

**ಅಮೃತಕ್ಕೆ ಹಾರಿದ ಗರುಡ** (ಕಥಾ ಸಂಕಲನ)
*ಪ್ರೊ॥ ರಮೇಶ ಮ. ಕಲ್ಲನಗೌಡರ*
**ಪುಟ : xiv + ೧೧೬ = ೧೩೦** **ಬೆಲೆ ರೂ. ೧೦೦**
**ಆದಿತ್ಯ ರಾಜೇಶ ಪ್ರಕಾಶನ,** ಹುಲಕೋಟಿ ತಾಲೂಕು/ಜಿಲ್ಲೆ ಗದಗ

**ಆಲದ ಮರ** (ಪ್ರಾಚೀನ ಸಂಸ್ಕೃತಿ ಸಂಕಥನ)
*ಟಿ. ಬಸವರಾಜ್ ತೂಲಹಳ್ಳಿ*
**ಪುಟ : xii + ೩೬೮ = ೩೮೦** **ಬೆಲೆ ರೂ. ೨೫೦**
**ನಿವೇದಿತ ಪ್ರಕಾಶನ,** ನಂ. ೩೪೩೬, ೧ನೇ ಮಹಡಿ, ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ, ಶಾಸ್ತ್ರೀನಗರ, ಬನಶಂಕರಿ ೨ನೇ ಹಂತ, ಬೆಂಗಳೂರು – ೨೮

**ಸಿಂಧುವಲ್ಲ ಬಿಂದು** (ಹನಿಗವನ) *ರೋಹಿಣಿ ಸತ್ಯ*
**ಪುಟ : xii + ೧೦೪ = ೧೧೬** **ಬೆಲೆ ರೂ. ೭೫**
**ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ (ರಿ),** ನಂ. ೨೪/೧೬–೧, ೯ನೇ ಅಡ್ಡರಸ್ತೆ, ೧ನೇ ಮುಖ್ಯರಸ್ತೆ, ದೀಪಾಂಜಲಿನಗರ, ಮೈಸೂರು ರಸ್ತೆ, ಬೆಂಗಳೂರು – ೫೬೦ ೦೨೬

**ಆಲಿಕಲ್ಲು** (ಹನಿಗವನಗಳು) *ಸಿ.ಪಿ.ಕೆ.*
**ಪುಟ : iv + ೯೨** **ಬೆಲೆ ರೂ. ೧೫೦**
**ಚಿತ್ರಭಾನು ಪ್ರಕಾಶನ,** ೨೨೬೫/೯, 'ಭಾರತಿ' ೬ನೆಯ ಕ್ರಾಸ್, ೪ನೆಯ ಮೇನ್, ವಿನಾಯಕನಗರ, ಮೈಸೂರು – ೫೭೦ ೦೧೨

**ಭಾರತದ ಪ್ರಸಿದ್ಧ ಗಣಿತಜ್ಞರು** (19–20ನೇ ಶತಮಾನದ ಕೀರ್ತಿಶೇಷರು) *ಡಾ॥ ಎಸ್. ಬಾಲಚಂದ್ರ ರಾವ್*
**ಪುಟ : viii + ೨೧೪ + ೪** **ಬೆಲೆ ರೂ. ೧೨೦**
**ಭವನ್ಸ್ ಗಾಂಧೀ ಸೆಂಟರ್ ಆಫ್ ಸೈನ್ಸ್ ಅಂಡ್ ಹ್ಯೂಮನ್ ವಾಲ್ಯೂಸ್,** ರೇಸ್ ಕೋರ್ಸ್ ರಸ್ತೆ, ಭಾರತೀಯ ವಿದ್ಯಾಭವನ, ನಂ. ೪೩/೧, ಬೆಂಗಳೂರು – ೫೬೦ ೦೦೧




# ಇಂಟರ್‌ನೆಟ್ ನಿಯಂತ್ರಣಕ್ಕೆ ಮುಷ್ಟಿ ಕಾಳಗ

ಜೈಕುಮಾರ್ ಎಚ್. ಎಸ್.

**ಇತ್ತೀಚೆಗೆ ದುಬೈಯಲ್ಲಿ ಜರುಗಿದ ಅಂತರರಾಷ್ಟ್ರೀಯ ಟೆಲಿಸಂಪರ್ಕ ಕುರಿತ ವಿಶ್ವ ಸಮ್ಮೇಳನ (ಡಬ್ಲ್ಯೂಸಿಐಟಿ) ಹಲವು ಚರ್ಚೆ ಮತ್ತು ಸಂವಾದಗಳಿಗೆ ಎಡೆಮಾಡಿಕೊಟ್ಟಿದೆ. 190 ರಾಷ್ಟ್ರಗಳು ಒಟ್ಟುಗೂಡಿದ್ದ ಈ ಸಮ್ಮೇಳನದಲ್ಲಿ ವಿಶ್ವಸಂಸ್ಥೆ ನಿಯಂತ್ರಿತ ಸೂತ್ರಗಳನ್ನು ಅಂತರ್ಜಾಲಕ್ಕೆ ಅಳವಡಿಸುವಲ್ಲಿ ವಿಫಲವಾಗಿದೆ. ಸಮ್ಮೇಳನ ಆರಂಭವಾಗುವ ಮುನ್ನವೇ ಸದಸ್ಯ ರಾಷ್ಟ್ರಗಳೆಲ್ಲ ಎರಡು ಯುದ್ಧ ಗುಂಪುಗಳಾಗಿದ್ದವು : ಒಂದೆಡೆ ಉತ್ತರ ಅಮೇರಿಕಾ, ಯೂರೋಪ್, ಆಸ್ಟ್ರೇಲಿಯಾ, ಜಪಾನ್ ಮತ್ತು ಪೂರ್ವ ಆಫ್ರಿಕಾ ದೇಶಗಳಿದ್ದರೆ, ಮತ್ತೊಂದೆಡೆ ರಷ್ಯಾ, ಚೀನಾ, ಅರಬ್ ದೇಶಗಳು ಮತ್ತು ಕೆಲವು ಆಫ್ರಿಕಾ ದೇಶಗಳು ಇದ್ದವು. ಪ್ರಜಾಪ್ರಭುತ್ವ ಮತ್ತು ಅಭಿವ್ಯಕ್ತಿ ಸ್ವಾತಂತ್ರ್ಯದ ಕುರಿತು ಬೊಬ್ಬೆ ಹೊಡೆಯುವ ಅಮೇರಿಕಾ ಅಂತಹ ಬಹುಪಕ್ಷೀಯ ಸೂತ್ರಗಳಿಗೆ ಒಪ್ಪದೆ ಸಮ್ಮೇಳನದಿಂದ ಹೊರನಡೆದದ್ದು ನಾಚಿಕೆಗೇಡಿನ ಸಂಗತಿ.**

ಪ್ರಸ್ತುತ ಎಲ್ಲಾ ರಾಷ್ಟ್ರಗಳನ್ನು ಒಳಗೊಂಡಿರುವ, ಅಂತರ್ಜಾಲವನ್ನು ನಿರ್ವಹಿಸುವ ಯಾವುದೇ ಕೇಂದ್ರೀಯ ನಿಯಂತ್ರಣ ಪ್ರಾಧಿಕಾರ ಇಲ್ಲ. ಹೀಗಾಗಿ ಇಂಟರ್‌ನೆಟ್ ನಿಯಂತ್ರಣ ಕುರಿತಾಗಿ ಅಂತರರಾಷ್ಟ್ರೀಯ ಟೆಲಿಸಂಪರ್ಕ ಒಕ್ಕೂಟ (ಐಟಿಯು)ವು ಈ ಪಾತ್ರ ವಹಿಸುವಂತೆ ಮಾಡಲು ಎಲ್ಲ ಸದಸ್ಯ ರಾಷ್ಟ್ರಗಳು ಒಡಂಬಡಿಕೆಯೊಂದಕ್ಕೆ ಸಹಿಹಾಕಲು ಈ ಸಮ್ಮೇಳನವನ್ನು ಆಯೋಜಿಸಲಾಗಿತ್ತು. ಅಂತರ್ಜಾಲ ಶೈಶವಾವಸ್ಥೆಯಲ್ಲಿದ್ದ ೧೯೮೮ರಲ್ಲಿ ರೂಪಿಸಿದ್ದ ಅಂತರರಾಷ್ಟ್ರೀಯ ಟೆಲಿಸಂಪರ್ಕ ನಿಯಮಾವಳಿ (ಐಟಿಆರ್)ಯನ್ನು ಇದೀಗ ಮಾರ್ಪಾಟು ಮಾಡುವ ಮೂಲಕ ಇಂಟರ್‌ನೆಟ್ ಕಾರ್ಯನಿರ್ವಹಿಸುತ್ತಿರುವ ಮತ್ತು ಅದನ್ನು ನಿಯಂತ್ರಿಸುತ್ತಿರುವ ವಿಧಾನವನ್ನು ಬದಲಾಯಿಸುವ ಇಂಗಿತವಿತ್ತು. ಪ್ರಸ್ತುತ ಅಂತರ್ಜಾಲ ನಿಯಂತ್ರಣ ಅಮೇರಿಕಾ ಮತ್ತು ಅದರ ಬಹುರಾಷ್ಟ್ರೀಯ ಕಂಪನಿಗಳ ಹಿಡಿತದಲ್ಲಿದೆ. ವಿಶ್ವದಾದ್ಯಂತ ಅದನ್ನು ವ್ಯಾಪಕವಾಗಿ ಬಳಸುತ್ತಿರುವುದರಿಂದ ಎಲ್ಲ ದೇಶಗಳ ಸರ್ಕಾರಗಳು ಅಂತರ್ಜಾಲ ನಿಯಂತ್ರಣದಲ್ಲಿ ಪಾಲುದಾರಿಕೆ ಹೊಂದಲು ಅನುವಾಗುವಂತೆ ವಿಶ್ವಸಂಸ್ಥೆಯ ಅಧೀನದ ಐಟಿಯು ಅಡಿಗೆ ಅಂತರ್ಜಾಲವನ್ನು ತರಬೇಕೆಂಬ ಪ್ರಸ್ತಾವಕ್ಕೆ ಅಮೇರಿಕಾ ಮತ್ತು ಯೂರೋಪ್ ರಾಷ್ಟ್ರಗಳು ಒಪ್ಪುತ್ತಿಲ್ಲ. ಈಗ ಆಚರಣೆಯಲ್ಲಿರುವ ಇಂಟರ್‌ನೆಟ್ ನಿಯಂತ್ರಣ ಸ್ವರೂಪವನ್ನು ಬದಲುಗೊಳಿಸಿ ಐಟಿಯು ಅಡಿಗೆ ಅದನ್ನು ತಂದಲ್ಲಿ ಅದರಿಂದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆಯುಂಟಾಗುತ್ತದೆಂದು ಅಮೇರಿಕಾ ಬೆಂಬಲಿತ ಗುಂಪುಗಳು ವಾದಿಸುತ್ತವೆ. ಇದರ ವಿರುದ್ಧ ಗುಂಪಿನ ಅಭಿಪ್ರಾಯವೆಂದರೆ ಇಂಟರ್‌ನೆಟ್‌ಅನ್ನು ಸರ್ಕಾರಗಳು ನಿಯಂತ್ರಿಸುವುದಕ್ಕೆ ನಾವು ಒತ್ತಾಯಿಸುತ್ತಿಲ್ಲ, ಆದರೆ ಕೆಲವೇ ಕಂಪನಿಗಳ ಹಿಡಿತದಲ್ಲಿರುವ ಇಂಟರ್‌ನೆಟ್‌ಅನ್ನು ಐಟಿಯು ಅಡಿಗೆ ತರಬೇಕೆಂಬುದು ನಮ್ಮ ಬೇಡಿಕೆ. ಇದರಿಂದ ಅಭಿವ್ಯಕ್ತಿ ಸ್ವಾತಂತ್ರ್ಯಕ್ಕೇನೂ ಧಕ್ಕೆಯಿಲ್ಲ.






ಜಾಹೀರಾತು ಆದಾಯ ಗಳಿಸುತ್ತದೆ. ಹೀಗಿರುವಾಗ ಅಭಿವೃದ್ಧಿ ಹೊಂದುತ್ತಿರುವ ಮಾಧ್ಯಮಗಳ ಗತಿ ಏನಾಗುತ್ತದೆ ? ಸ್ಥಳೀಯ ವಿಷಯವಸ್ತು ಮತ್ತು ಸ್ಥಳೀಯ ಭಾಷಾಧಾರಿತ ಮಾಧ್ಯಮ ಅದ್ಹೇಗೆ ಉಳಿಯಲು ಸಾಧ್ಯ ?

ಆದ್ದರಿಂದ, ಇಂಟರ್‌ನೆಟ್ ನಿರ್ವಹಣೆ ಎಂದರೆ ಅದನ್ನು ಮುಂದೆ ಹೇಗೆ ನಡೆಸಿಕೊಂಡು ಹೋಗಬೇಕು ಎಂಬುದು. ಇಂಟರ್‌ನೆಟ್‌ಅನ್ನು ಯಾವುದೇ ದೇಶವೊಂದು ಇತರೆ ದೇಶಗಳ ಮೇಲೆ ದಾಳಿ ನಡೆಸಲು, ಅವುಗಳ ಆರ್ಥಿಕತೆಯನ್ನು ಹಾನಿಮಾಡಲು, ಅಥವಾ ತಾನೇ ಒಂದು ಆರ್ಥಿಕ ಶಕ್ತಿಯ ಯಜಮಾನಿಕೆ ಹೊಂದಬಲ್ಲ ರೀತಿಯಲ್ಲಿ ಇಂಟರ್‌ನೆಟ್ ಬಳಸುವುದನ್ನು ನಿಯಂತ್ರಿಸಲು ಇಂಟರ್‌ನೆಟ್ ನಿರ್ವಹಣೆ ಅತ್ಯವಶ್ಯ. ಅಲ್ಲದೆ ವೆಬ್‌ಸೈಟ್‌ಗಳ ಯುಆರ್‌ಎಲ್ ಮತ್ತು ಡೊಮೇನ್‌ಗಳನ್ನು ರಿಯಲ್ ಎಸ್ಟೇಟ್ ನಿವೇಶನಗಳಂತೆ ಹರಾಜು ಹಾಕಲಾಗುತ್ತಿದ್ದು, ಅವುಗಳಿಗೆ ಹಣದ ಮೌಲ್ಯವಿದೆ. ಇಂಟರ್‌ನೆಟ್ ಒಂದು ಅತ್ಯವಶ್ಯ ಜಾಗತಿಕ ಸಂಪನ್ಮೂಲ ಎನ್ನಬಹುದಾದರೆ, ಅದರ ನಿರ್ವಹಣೆಯು ನ್ಯಾಯಯುತವಾಗಿ ಜಾಗತಿಕ ಸಮುದಾಯಕ್ಕೆ ಸೇರಿದ್ದಾಗಿದೆ.

**ಅಂತರ್ಜಾಲ ನಿರ್ವಹಣೆ ಕುರಿತ ಎರಡು ಪ್ರಮುಖ ಅಂಶಗಳು**

ಈ ಹಿನ್ನೆಲೆಯಲ್ಲಿ ಇಂದು ಇಂಟರ್‌ನೆಟ್‌ಅನ್ನು ಯಾರು ನಿಯಂತ್ರಿಸುತ್ತಿದ್ದಾರೆ ? ಎಂಬುದು ಮುಖ್ಯ ಪ್ರಶ್ನೆ. ಇಂಟರ್‌ನೆಟ್ ನಿರ್ವಹಣೆಯ ಒಂದು ಭಾಗವೆಂದರೆ ಡೊಮೇನ್ ಹೆಸರು ಮತ್ತು ಐಪಿ ಹಂಚಿಕೆ (ಇಂಟರ್‌ನೆಟ್ ಪ್ರೊಟೋಕಾಲ್). ಡೊಮೇನ್ ಹೆಸರು ಎಂದರೆ ವಿವಿಧ ವೆಬ್‌ಸೈಟ್‌ಗಳನ್ನು ತೆರೆಯಲು ನಾವು ಟೈಪಿಸುವುದು. ವಾಸ್ತವವಾಗಿ ಅವು ಸೈಬರ್ ರಿಯಲ್ ಎಸ್ಟೇಟ್‌ಗಳು ಎನ್ನಬಹುದು. ಈ ಹಿಂದೆ ನಾವು .ಕಾಮ್, .ನೆಟ್ ಮತ್ತು .ಆರ್ಗ್ ವಿಳಾಸಗಳನ್ನು ಹೊಂದಿದ್ದೆವು; ನಂತರ ದೇಶದ ವಿಳಾಸಗಳು ಅಂದರೆ .ಇನ್, .ಯುಕೆ ಬಳಕೆಗೆ ಬಂದವು. ಇವೆಲ್ಲ ವಿಳಾಸಗಳನ್ನು ಸಂಖ್ಯೆಗಳಾಗಿ ಪರಿವರ್ತಿಸಿ ಐಪಿ ವಿಳಾಸಗಳೆಂದು ಕರೆಯುತ್ತಿದ್ದು, ಇವುಗಳನ್ನು ಕಂಪ್ಯೂಟರ್‌ಗಳು ಅರ್ಥಮಾಡಿಕೊಳ್ಳುತ್ತವೆ. ನಾವು ಬ್ರೌಸರ್‌ನ ಅಡ್ರೆಸ್ ಬಾರ್‌ನಲ್ಲಿ ಟೈಪಿಸುವ ವಿಳಾಸಗಳನ್ನು ಕಂಪ್ಯೂಟರ್‌ಗಳು ಅರ್ಥಮಾಡಿಕೊಳ್ಳುವ ಸಂಖ್ಯೆಗಳಾಗಿ ರೂಟ್ ಸರ್ವರ್‌ಗಳು ಪರಿವರ್ತಿಸುತ್ತವೆ. ಅಮೇರಿಕಾದಲ್ಲಿ ನೋಂದಣಿಯಾಗಿರುವ ಐಸಿಎಎನ್‌ಎನ್ ಎಂಬ ಲಾಭರಹಿತ ಸಂಸ್ಥೆ ಡೊಮೇನ್ ಹಂಚಿಕೆ ಮಾಡುತ್ತದೆ. ಜಗತ್ತಿನ ಒಟ್ಟು ೧೩ ರೂಟ್ ಸರ್ವರ್‌ಗಳ ಪೈಕಿ ೧೦ ಅಮೇರಿಕಾದಲ್ಲಿದ್ದರೆ, ೨ ಯೂರೋಪ್‌ನಲ್ಲಿ ಮತ್ತು ೧ ಜಪಾನ್‌ನಲ್ಲಿವೆ.

ಇದರಿಂದ ಮೇಲ್ನೋಟಕ್ಕೆ ಗೋಚರಿಸುವುದೇನೆಂದರೆ, ಡೊಮೇನ್ ಹೆಸರು ಹಂಚಿಕೆ ಕಾರ್ಯವನ್ನು ಮತ್ತು ಇಂಟರ್‌ನೆಟ್ ನಿರ್ವಹಣೆಯನ್ನು ಐಸಿಎಎನ್‌ಎನ್ ನಿಯಂತ್ರಿಸುತ್ತದೆ. ವಾಸ್ತವವಾಗಿ ಇದನ್ನು ಈ ಸಂಸ್ಥೆಯು ಅಮೇರಿಕಾದ ವಾಣಿಜ್ಯ ಇಲಾಖೆಯಿಂದ ಗುತ್ತಿಗೆ ಆಧಾರದ ಮೇಲೆ ಪಡೆಯುತ್ತಿದ್ದು, ಕೆಲವೊಂದು ಅವಧಿಗೆ ಅಮೇರಿಕಾದ ಸಂಸ್ಥೆಗಳಿಗೆ ಮಾತ್ರವೇ ಇದನ್ನು ಗುತ್ತಿಗೆ ನೀಡಲಾಗುತ್ತದೆ ! ಪ್ರಸ್ತುತ ಗುತ್ತಿಗೆಯು ೨೦೧೫ರವರೆಗೆ ಇದೆ. ಆದ್ದರಿಂದ ಅಮೇರಿಕಾವು ಇನ್ನೂ ಕಾನೂನುರೀತ್ಯ ಇಡೀ ಎಲ್ಲ ಇಂಟರ್‌ನೆಟ್ ಡೊಮೇನ್‌ಗಳ ಡೊಮೇನ್ ಹೆಸರುಗಳು ಮತ್ತು ಐಪಿ ಹೆಸರು ಹಂಚಿಕೆ ಕಾರ್ಯವನ್ನು ಅಮೇರಿಕಾದ ವಾಣಿಜ್ಯ ಇಲಾಖೆಯ ಗುತ್ತಿಗೆ ಮೂಲಕ ನಿರ್ವಹಿಸುತ್ತಿದೆ. ಅಮೇರಿಕಾ ತನ್ನ ವಾಣಿಜ್ಯ ಇಲಾಖೆ ಮೂಲಕ ರೂಟ್ ವಲಯದ ಕಡತಗಳೆಲ್ಲವನ್ನು ಸಹ ನಿಯಂತ್ರಿಸುತ್ತಿದ್ದು, ಅದು ಬೇಕೆಂದರೆ ಉದಾಹರಣೆಗೆ, ಐಆರ್ (ಇರಾನ್)ನ್ನು ತೆಗೆದುಹಾಕುವ ಮೂಲಕ ಇಂಟರ್‌ನೆಟ್‌ನಿಂದ ಇರಾನಿನ ಡೊಮೇನ್‌ಗಳ ಸಂಪರ್ಕಗಳೆಲ್ಲವನ್ನು ಕಡಿತಗೊಳಿಸಬಹುದು. ಅಮೇರಿಕಾ ರಾಷ್ಟ್ರವೊಂದೇ ಇಂಟರ್‌ನೆಟ್‌ಮೇಲೆ ಇಂತಹ ಯಜಮಾನಿಕೆ ಹೊಂದಿರುವುದು ಒಂದು ಸಮಸ್ಯೆಯೇ ಸರಿ.

ಇಂಟರ್‌ನೆಟ್‌ನ ಮತ್ತೊಂದು ಭಾಗವೆಂದರೆ ತಾಂತ್ರಿಕ ಪ್ರಮಾಣಕಗಳು (ಸ್ಟ್ಯಾಂಡರ್ಡ್). ಅಂದರೆ ಇಂಟರ್‌ನೆಟ್ ಸುಕ್ಕಿಲ್ಲದೆ ಚಲಿಸುವಂತೆ ಮಾಡುವ ತಂತ್ರಜ್ಞಾನದ ಬಿಡಿ ಭಾಗಗಳನ್ನು ಒಂದೆಡೆ ಜೋಡಿಸಿ ಕೂಡಿಸುವ ವಿವಿಧ ವಿಧಾನಗಳು. ವಿವಿಧ ತಾಂತ್ರಿಕ ಸಂಸ್ಥೆಗಳು ತಾಂತ್ರಿಕ ಪ್ರಮಾಣಕಗಳನ್ನು ಸೃಜಿಸಿದರೆ, ಅವುಗಳನ್ನು ಪ್ರತಿಯೊಬ್ಬರೂ ಅನುಸರಿಸಿ, ಬಳಕೆದಾರರಿಗೆ ಪ್ರತಿಯೊಂದೂ ಒಂದೂ ಸುಕ್ಕಿಲ್ಲದೆ ವಿಶ್ವಾದ್ಯಂತ ಅಂತರ್ಜಾಲವಾಗಿ ಲಭ್ಯವಾಗುತ್ತದೆ. ಈ ಕಾರ್ಯಕ್ಕೆ ಪ್ರಮುಖ ತಾಂತ್ರಿಕ ಸಂಸ್ಥೆಯೆಂದರೆ ಇಂಟರ್‌ನೆಟ್ ಸೊಸೈಟಿ. ಆದರೆ ಜಗತ್ತಿನ ವಾಸ್ತವ ತೀರಾ ಓರೆಯಾಗಿದೆ. ಬಹುರಾಷ್ಟ್ರೀಯ ಕಂಪನಿಗಳು ಮತ್ತು ತಂತ್ರಜ್ಞರು ಇಂಟರ್‌ನೆಟ್ ಕಾರ್ಯನಿರ್ವಹಿಸುವಂತೆ ಮಾಡುವ ಪ್ರಧಾನ ಪ್ರಮಾಣಕಗಳು ಮತ್ತು ಶಿಷ್ಟಾಚಾರಗಳನ್ನು ಸ್ಥಾಪಿಸುತ್ತಿದ್ದಾರೆ. ಇದನ್ನು ಎಲ್ಲ ದೇಶಗಳ ಬಹುಪಕ್ಷೀಯ ನಿಯಂತ್ರಣದಡಿ ತರಬೇಕೆಂಬ ವಾದಕ್ಕೆ ಪುಷ್ಟಿಯೇ ಇಲ್ಲವಾಗಿದೆ.

ಇಂಟರ್‌ನೆಟ್ ಆಡಳಿತಾತ್ಮಕ ವೇದಿಕೆಯನ್ನು ಈ ಮುಂಚೆ ವಿಶ್ವಸಂಸ್ಥೆಯ ಅಧೀನದಲ್ಲಿ

**ಇಂಟರ್‌ನೆಟ್ ಉಗಮ ಮತ್ತು ವ್ಯಾಪಕತೆ**

ವಿವಿಧ ಸಂಶೋಧನಾ ಸಂಸ್ಥೆಗಳಲ್ಲಿ ಕೆಲಸ ಮಾಡುತ್ತಿರುವ ವಿಜ್ಞಾನಿಗಳ ನಡುವೆ ಮಾಹಿತಿ ವಿನಿಮಯ ಮಾಡುವ ಸಾಧನವಾಗಿ ಇಂಟರ್‌ನೆಟ್ ಬಳಕೆಗೆ ಬಂದಿತು. ಅಲ್ಲಿಂದೀಚೆಗೆ ಜಗತ್ತಿನ ಸಂವಹನ ವ್ಯವಸ್ಥೆಯ ಬೆನ್ನೆಲುಬಾಗುವತ್ತ ಸಾಗಿದೆ. ಅದೊಂದು ಪ್ರಧಾನ ಆರ್ಥಿಕ ಚಾಲಕನಾಗಿ, ಜಗತ್ತಿನ ವ್ಯಾಪಾರಕ್ಕೆ ಬ್ಯಾಂಕಿಂಗ್ ಮತ್ತು ಇತರೆ ಹಣಕಾಸು ಸೇವೆಗಳನ್ನು ಒದಗಿಸುತ್ತಿದೆ. ಸಾಂಪ್ರದಾಯಿಕ ಮುದ್ರಣ ಮತ್ತು ಚಿತ್ರ ಮಾಧ್ಯಮಗಳ ಬದಲಿಗೆ ತಾನು ಜಾಗತಿಕ ಮಾರುಕಟ್ಟೆಗೆ ಪರ್ಯಾಯ ಜಾಗ ಒದಗಿಸುತ್ತಿದೆ. ಇಂದು ಇಂಟರ್‌ನೆಟ್ ಎಲ್ಲೆಡೆ ಸರ್ವವ್ಯಾಪಿಯಾಗಿದೆ. ಒಂದು ಉದ್ದಿಮೆ ಅಥವಾ ದೇಶವೊಂದನ್ನು ಇಂಟರ್‌ನೆಟ್‌ನಿಂದ ಕಡಿತಗೊಳಿಸಿದಲ್ಲಿ ತೀವ್ರ ದುಷ್ಪರಿಣಾಮಗಳು ಉಂಟಾಗುತ್ತವೆ.

ಹೀಗೆ ಇಂಟರ್‌ನೆಟ್ ಅನಿವಾರ್ಯವಾಗಿ ಬಳಕೆಯಾಗುತ್ತಿರುವಂತೆಯೇ, ಅಂತಹ ಒಂದಕ್ಕೊಂದು ಸಂಪರ್ಕ ಹೊಂದಿರುವ ಜಗತ್ತಿನಲ್ಲಿ ಇತರೆ ಅಪಾಯಗಳನ್ನು ಅದು ಹೊತ್ತು ತರುತ್ತಿದೆ. ವಿವಿಧ ದೇಶಗಳ ದೂರಸಂವಹನ ಜಾಲಬಂಧಗಳನ್ನು, ಅವುಗಳ ಬ್ಯಾಂಕುಗಳು ಮತ್ತು ಪವರ್‌ಗ್ರಿಡ್‌ಗಳನ್ನು ನಿಷ್ಕ್ರಿಯಗೊಳಿಸಲು ಇಂಟರ್‌ನೆಟ್ ಬಳಸಬಹುದು. ಅಮೇರಿಕಾ ಮತ್ತು ಇಸ್ರೇಲ್ ದೇಶಗಳು ಸೈಬರ್ ಶಸ್ತ್ರಾಸ್ತ್ರಗಳನ್ನು ಬಳಸಿಕೊಂಡೇ ೧೦,೦೦೦ಕ್ಕೂ ಹೆಚ್ಚು ಸೆಂಟರ್‌ಫ್ಯೂಜ್‌ಗಳನ್ನು (ಸಂಶೋಧನೆಗಳಲ್ಲಿ ವಿಶೇಷವಾಗಿ ಪರಮಾಣು ಸ್ಥಾವರಗಳಲ್ಲಿ ಇವುಗಳನ್ನು ಬಳಸಲಾಗುತ್ತದೆ) ಇರಾನ್‌ನಲ್ಲಿ ದೈಹಿಕವಾಗಿ ನಿಷ್ಕ್ರಿಯಗೊಳಿಸಿ ತೆಗೆದುಹಾಕಲಾಗಿರುವುದನ್ನು ನಾವು ನೋಡಿದ್ದೇವೆ. ಆ ದೇಶಗಳು ಕ್ಷಿಪಣಿಗಳನ್ನು ಉಡಾಯಿಸಿ ಇದೇ ಕೃತ್ಯವನ್ನು ಎಸಗಿದ್ದಲ್ಲಿ ಅದನ್ನೊಂದು ಯುದ್ಧವೆಂದೇ ಪರಿಗಣಿಸಲಾಗುತ್ತಿತ್ತು. ಹೀಗಾಗಿ ಇಂಟರ್‌ನೆಟ್ ಕೂಡ ಒಂದು ವ್ಯೂಹಾತ್ಮಕ ರಂಗವಾಗಿದ್ದು ದೇಶವೊಂದು ಆ ರಂಗದಲ್ಲಿ ತನ್ನನ್ನು ಸಂರಕ್ಷಿಸಿಕೊಳ್ಳುವುದು ಹೇಗೆ ಎಂದು ಗಂಭೀರವಾಗಿ ಆಲೋಚಿಸಲಾಗುತ್ತಿದೆ.

ಜಾಗತಿಕ ಮಾಧ್ಯಮವಿಂದು ಜಾಹೀರಾತುಗಳನ್ನು ಅವಲಂಬಿಸಿದೆ. ವೃತ್ತಪತ್ರಿಕೆಗಳ ಆದಾಯದಲ್ಲೂ ದೊಡ್ಡ ಪಾಲು ಜಾಹೀರಾತುಗಳದೇ. ಆನ್‌ಲೈನ್ ಜಗತ್ತಿನಲ್ಲಿ ಜಾಹೀರಾತುಗಳ ಆದಾಯವನ್ನು ಕೆಲವೇ ಕಂಪನಿಗಳು – ಗೂಗಲ್, ಫೇಸ್ ಬುಕ್, ಇತ್ಯಾದಿ – ಲಪಟಾಯಿಸುತ್ತಿವೆ. ಗೂಗಲ್ ಕಂಪನಿಯೊಂದೇ ಇಡೀ ಆನ್‌ಲೈನ್ ಜಗತ್ತಿನ ಶೇಕಡ ೫೦ರಷ್ಟು

ಬಹುಪಕ್ಷೀಯ ವೇದಿಕೆಯಾಗಿ ಸ್ಥಾಪಿಸಿದ್ದರೂ, ಅದಕ್ಕೆ ಯಾವುದೇ ರೀತಿಯ ಅಧಿಕಾರಯುತ ಸ್ಥಾನಮಾನವಿಲ್ಲದೆ ಸಹಮತದ ಮುಖೇನವೇ ಪ್ರಸಕ್ತ ವಿಧಾನಗಳನ್ನು ಬದಲಿಸುವ ನಿಟ್ಟಿನಲ್ಲಿ ಕಾರ್ಯ ನಿರ್ವಹಿಸುತ್ತಿದೆ. ಅಂತರರಾಷ್ಟ್ರೀಯ ಟೆಲಿ ಸಂಪರ್ಕ ಒಕ್ಕೂಟ ಮತ್ತು ಇಂಟರ್‌ನೆಟ್ ಇವೆರಡನ್ನೂ ಬಹುಪಕ್ಷೀಯ ಸರ್ಕಾರಿ ನಿಯಂತ್ರಣದಡಿ ತರಬಹುದೆಂಬ ಭಯವೇ ಇಂಟರ್‌ನೆಟ್ ಆಡಳಿತಾತ್ಮಕ ವೇದಿಕೆಯನ್ನು ಇನ್ನಷ್ಟು ಗಂಭೀರಗೊಳಿಸಿತ್ತು.

ವಿಶ್ವದ ಟೆಲಿಸಂಪರ್ಕ ಜಾಲವನ್ನು ನಿರ್ವಹಿಸುವ ಸಂಸ್ಥೆಯಾಗಿ ಐಟಿಯು ಇಂಟರ್‌ನೆಟ್ ವಿಷಯ ಕುರಿತಂತೆ ನೈಜ ಹಿತಾಸಕ್ತಿ ಹೊಂದಿದೆ. ಇಂಟರ್‌ನೆಟ್ ಕೂಡ ಮೂಲ ಟೆಲಿಸಂಪರ್ಕ ಸೌಲಭ್ಯದ ಮೇಲೆಯೇ ಕಾರ್ಯ ನಿರ್ವಹಿಸುವುದು. ಟೆಲಿಕಾಮ್ ಕಂಪನಿಗಳು ಇಂಟರ್‌ನೆಟ್ ಸೇವೆಗಳಿಂದ ಹೆಚ್ಚಿನ ಆದಾಯ ಗಳಿಸಲು ವಿವಿಧ ರೀತಿಯ ಪ್ರಯತ್ನ ಮಾಡಿಯಾಗಿದೆ. ಆದರೆ ವಿಷಯವಸ್ತು (ಕಂಟೆಂಟ್) ಮತ್ತು ಟೆಲಿ ಸಂಪರ್ಕ ಪದರುಗಳು ಪ್ರತ್ಯೇಕವಾಗಿರುವುದರಿಂದ ಇದರಲ್ಲಿ ಯಶಸ್ವಿಯಾಗಿಲ್ಲ. ಇಲ್ಲಿ ಅಡಕವಾಗಿರುವ ಮೂರು ಪ್ರಮುಖ ವಿಷಯಗಳೆಂದರೆ: ಟೆಲಿಕಾಮ್ ಕಂಪನಿಗಳು ವಿಧಿಸುವ ಇಂಟರ್‌ನೆಟ್ ಶುಲ್ಕ, ವಿವಿಧ ರೀತಿಯ ವಿಷಯವಸ್ತುಗಳನ್ನು ವಿಂಗಡಿಸುವುದು ಮತ್ತು ಇಂಟರ್‌ನೆಟ್‌ಅನ್ನು ಸೆನ್ಸಾರ್ ಮಾಡಲು ಸರ್ಕಾರಗಳ ಸಾಮರ್ಥ್ಯ. ಈ ವಿಷಯಗಳ ಕುರಿತೇ ಐಟಿಆರ್‌ಗಳ ಮೇಲೆ ದುಬೈಯಲ್ಲಿ ಯುದ್ಧ ನಡೆದಿರುವುದು.

**ರಾಷ್ಟ್ರ ಪ್ರಭುತ್ವಗಳಿಗೆ ಪ್ರಮುಖ ವಿಷಯಗಳು**

ಮೇಲಿನ ವಿಷಯಗಳು ಬಳಕೆದಾರರಿಗೆ ಸಂಬಂಧಿಸಿದುವಾದರೆ, ರಾಷ್ಟ್ರ ಪ್ರಭುತ್ವಗಳಿಗೆ ಸಂಬಂಧಿಸಿದಂತೆ ಕೆಲವು ಪ್ರಮುಖ ಅಂಶಗಳಿವೆ. ಇವುಗಳು ಸೈಬರ್ ಭದ್ರತೆ ಮತ್ತು ಇತರೆ ದೇಶಗಳ ಮೇಲೆ ದಾಳಿ ಮಾಡಲು ಇಂಟರ್‌ನೆಟ್ ಬಳಸುವ – ಸೈಬರ್ ಶಸ್ತ್ರಾಸ್ತ್ರಗಳ ಬಳಕೆ – ಕುರಿತಾದವು.

ಐಟಿಯುನಲ್ಲಿ ವಿವಿಧ ರೀತಿಯ ಪ್ರಸ್ತಾವನೆಗಳು ಸುಳಿದಾಡಿವೆ. ಅತಿ ಹೆಚ್ಚು ಚರ್ಚೆಯಾಗಿರುವುದೆಂದರೆ ಯೂರೋಪಿಯನ್ ಟೆಲಿಸಂಪರ್ಕ ಜಾಲ ಆಪರೇಟರ್‌ಗಳು (ಇಟಿಎನ್‌ಒ) ಪ್ರತಿಪಾದಿಸುತ್ತಿರುವ ನೆಟ್‌ವರ್ಕ್ ಕಳುಹಿಸುವ ಪ್ಯಾಕೆಟ್‌ಗಳು ನೆಟ್‌ವರ್ಕ್‌ಗಳನ್ನು ಸ್ವೀಕರಿಸುವ ಪ್ಯಾಕೆಟ್‌ಗಳಿಗೆ ಪಾವತಿಸಬೇಕು ಎನ್ನುವ ವಾದ. ಇದು ಧ್ವನಿ ನೆಟ್‌ವರ್ಕ್‌ಗಳಲ್ಲಿ ಬಳಕೆಯಲ್ಲಿರುವಂತೆ ಕರೆ ಮಾಡುವ ಪಾರ್ಟಿ ಪಾವತಿಸಬೇಕು ಎನ್ನುವುದಕ್ಕೆ ಸಮನಾದುದು. ಆದರೆ ಯೂರೋಪಿಯನ್ ಸರ್ಕಾರವು ಇದಕ್ಕೆ ಬೆಂಬಲ ನೀಡದೆ ಇರುವುದರಿಂದ ಯಾವುದಾದರೂ ಸರ್ಕಾರದ ಬೆಂಬಲವಿಲ್ಲದ ಈ ಪ್ರಸ್ತಾವನೆ ಅಂತ್ಯಗೊಂಡಂತೆಯೇ ಸರಿ.

ಇಟಿಎನ್‌ಒ ಪ್ರಸ್ತಾವಿಸಿರುವ ಎಳೆಯೊಂದನ್ನು ಭಾರತ ತನ್ನ ಕರಡು ಪ್ರಸ್ತಾವನೆಯಲ್ಲಿ ಅಳವಡಿಸಿ ಕೊಂಡಿತ್ತು. ಇದು ವಿಷಯವಸ್ತುವಿನ ವಿವಿಧ ರೂಪಗಳನ್ನು ಪ್ರತ್ಯೇಕಿಸುವುದಕ್ಕೆ ಸಂಬಂಧಿಸಿದ್ದು – ಅಂದರೆ ಉದಾಹರಣೆಗೆ, ಇತರರಿಗೆ ಹೋಲಿಸಿದಲ್ಲಿ




ಯೂಟ್ಯೂಬ್‌ನಿಂದ ಬರುವ ಪ್ಯಾಕೆಟ್‌ಗಳಿಗೆ ಟೆಲಿಕಾಮ್ ಕಂಪನಿಗಳು ವಿಶೇಷ ಸವಲತ್ತು ನೀಡುವುದು. ಈ ಧೋರಣೆ ಹೇಗಿದೆಯೆಂದರೆ ಶಕ್ತಿವಂತರಿಗೆ ಯಾವ ವಿಶೇಷ ಸವಲತ್ತನ್ನೂ ನೀಡದೆ ಇತರರಂತೆಯೇ ಪರಿಗಣಿಸುವ ಇಂಟರ್‌ನೆಟ್ ತಾಟಸ್ಥ್ಯ ಪರಿಕಲ್ಪನೆಗೆ ವಿರುದ್ಧವಾದುದು. ನಿಸ್ಸಂದೇಹವಾಗಿ ಇದು ಟೆಲಿಕಾಮ್ ಕಂಪನಿಗಳು ಮತ್ತು ಗೂಗಲ್ ಹಾಗೂ ಫೇಸ್‌ಬುಕ್‌ನಂತಹ ಶಕ್ತಿಶಾಲಿ ಕಂಪನಿಗಳಿಗೆ ಸಹಕಾರಿಯಾಗುತ್ತದೆಯೇ ಹೊರತು ಇತರರಿಗಲ್ಲ.

ಇದಲ್ಲದೆ, ಇಂಟರ್‌ನೆಟ್ ಬಳಸಿಕೊಂಡು ಒಂದು ರಾಷ್ಟ್ರ ಮತ್ತೊಂದು ರಾಷ್ಟ್ರದ ಸವಲತ್ತುಗಳ ಮೇಲೆ ದಾಳಿ ನಡೆಸಬಾರದೆಂಬ ಪ್ರಸ್ತಾವನೆಯನ್ನು ಅರಬ್ ರಾಷ್ಟ್ರಗಳು ಮುಂದಿಟ್ಟಿದ್ದವು. ಇದನ್ನೇ ರಷ್ಯಾ ಮತ್ತು ಚೀನಾ ದೇಶಗಳು ಪ್ರತಿಪಾದಿಸಿದ್ದು. ಇದೊಂದು ಬಹಳ ಪ್ರಮುಖ ಅಂಶವೇಕೆಂದರೆ ಇರಾನ್ ಮೇಲೆ ಸೈಬರ್ ಶಸ್ತ್ರಾಸ್ತ್ರಗಳನ್ನು ಬಳಸಲಾಗಿದೆ ಮತ್ತು ಯುದ್ಧರಂಗದಲ್ಲಿ ಇಂಟರ್‌ನೆಟ್‌ಅನ್ನು ಪ್ರಧಾನ ವಿಸ್ತರಣಾ ಸಾಧನವನ್ನಾಗಿ ಬಳಸಲಾಗುತ್ತಿದೆ. ಇಂದು ಅಮೇರಿಕಾ ಸೈಬರ್ ಯುದ್ಧಸಮರದಲ್ಲಿ ಮುಂಚೂಣಿ ಯಲ್ಲಿದ್ದರೂ ಯಾರು ಯಾವಾಗ ಬೇಕಾದರೂ ಸೈಬರ್ ತಂತ್ರಜ್ಞಾನ ಬಳಸಿ ಪರಿಸ್ಥಿತಿ ಬದಲಿಸ ಬಹುದು. ಇರಾನ್‌ನಲ್ಲಿ ೧೦,೦೦೦ ಸೆಂಟ್ರಿಫ್ಯೂಜ್ ಗಳನ್ನು ಹಾನಿಗೊಳಿಸಿದ ಫ್ಲೇಮ್ ವೈರಸ್‌ಗಳು ೫೦೦ ಕೋಟಿ ರೂ. ವೆಚ್ಚ ಉಂಟುಮಾಡಿವೆ. ಈ ಹಿನ್ನೆಲೆಯಲ್ಲಿ ಇಂಟರ್‌ನೆಟ್ ಕೂಡ ಒಂದು ಅತ್ಯವಶ್ಯ ಮೂಲ ಸೌಕರ್ಯ ಎಂದು ಐಟಿಯು ಸಮ್ಮೇಳನದಲ್ಲಿ ಘೋಷಣೆಯಾಗಬೇಕಿತ್ತು. ಭಾರತ ಈ ಅಂಶವನ್ನು ಬೆಂಬಲಿಸಿದ್ದರೂ ಹಲವು ರಾಷ್ಟ್ರಗಳು ಅಲ್ಲಿ ಉಂಟಾದ ಗೊಂದಲದಿಂದಾಗಿ ಇದಕ್ಕೆ ಬೆಂಬಲ ನೀಡಲಿಲ್ಲ.

ಸೈಬರ್ ಭದ್ರತೆಯು ಪ್ರಮುಖ ಅಂಶ. ಆದರೆ ಅಂತಹ ಕ್ರಮಗಳು ವಿಷಯವಸ್ತುವನ್ನು ಸೆನ್ಸಾರ್ ಮಾಡಲು ಆಸ್ಪದ ಒದಗಿಸುತ್ತವೆಯೇ ಎಂಬುದರ ಕುರಿತು ಗಂಭೀರವಾಗಿ ಆಲೋಚಿಸಬೇಕಿದೆ. ವಂಚನೆಯನ್ನು ನಿಯಂತ್ರಿಸಲು ಮತ್ತು ಭದ್ರತೆ ಒದಗಿಸಲು, ಮೂಲ ವಿಳಾಸಗಳನ್ನು ನೆಟ್‌ವರ್ಕ್ – ಅಂತ್ಯಕ್ಕೆ ಒದಗಿಸುವ ಅವಶ್ಯವಿಲ್ಲ ಎಂಬಂತಹ ಬಹುಪಕ್ಷೀಯ ಏಜೆನ್ಸಿಗಳ ನಡುವೆ ಸಹಕಾರ ನೀಡುವ ಕ್ರಮಗಳ ಅವಶ್ಯವಿದೆ; ಆದ್ದರಿಂದ ಐಟಿಯು ಈ ರಂಗವನ್ನು ಪ್ರವೇಶಿಸುವುದನ್ನು ಸಾರಾಸಗಟಾಗಿ ವಿರೋಧಿಸುವ ಬದಲಿಗೆ ಪ್ರತಿಯೊಂದು ಕ್ರಮವನ್ನು ಜನಪರವಾಗಿ ರೂಪಿಸುವುದರತ್ತ ನಾವು ಗಮನಹರಿಸಬೇಕು. ೨೦೦೫ರಲ್ಲಿ ಟ್ಯೂನಿಸ್‌ನಲ್ಲಿ ಜರುಗಿದ ವಿಶ್ವ ಸಮ್ಮೇಳನವು ಸೈಬರ್ ಭದ್ರತೆಯು ಐಟಿಯುವಿನ ಪ್ರಮುಖ ಗುರಿಯನ್ನಾಗಿಸಿದೆ. ಇಂಟರ್‌ನೆಟ್‌ನ ಪ್ರಜಾಸತ್ತಾತ್ಮಕ ವಿಷಯವಸ್ತುವಿಗೆ ಧಕ್ಕೆಯಾಗದ ರೀತಿಯಲ್ಲಿ ನಾವಿದನ್ನು ಹೇಗೆ ಮುಂದೊಯ್ಯುತ್ತೇವೆ ಎನ್ನುವುದು ಮುಖ್ಯ.

ಇಂಟರ್‌ನೆಟ್ ಅಮೇರಿಕಾ ದೇಶದ ಆವಿಷ್ಕಾರವೇ ಆಗಿದ್ದರೂ, ಅದನ್ನು ವಿಶ್ವದಾದ್ಯಂತ ಬಿಲಿಯಗಟ್ಟಲೆ ಜನ ಬಳಸುವಾಗ ಅದು ಯಾವುದೇ ದೇಶವೊಂದರ ಆಸ್ತಿಯಷ್ಟೇ ಆಗಿ ಉಳಿಯದು. ಎಲ್ಲ ದೇಶಗಳು ಇಂಟರ್‌ನೆಟ್ ನಿರ್ವಹಿಸುವಲ್ಲಿ ಪಾತ್ರ ಹೊಂದಿರಬೇಕು ಮತ್ತು ಅದು ಪ್ರಜಾಸತ್ತಾತ್ಮಕವಾದ ವ್ಯವಸ್ಥೆ ಹೊಂದಿರಬೇಕು ಎಂಬ ಆಶಯ ಮಾತ್ರ ಹಾಗೇ ಉಳಿದಿದೆ.

**ಜೈಕುಮಾರ್ ಎಚ್. ಎಸ್.**
ಕಾರ್ಯದರ್ಶಿ, ಕರ್ನಾಟಕ ಸ್ವತಂತ್ರ ತಂತ್ರಾಂಶ ಆಂದೋಲನ,
ನಂ. ೨೪೬೪, ೭ನೇ 'ಬಿ' ಮುಖ್ಯರಸ್ತೆ, ೭ನೇ ಅಡ್ಡರಸ್ತೆ,
ಆರ್‌ಪಿಸಿ ಬಡಾವಣೆ, ವಿಜಯನಗರ ಬೆಂಗಳೂರು–೫೬೦ ೦೪೦

## ಜಗತ್ತು ಸಂಕಟದಲ್ಲಿದೆ



ಈ ಜಗತ್ತಿನಲ್ಲಿ ನಾನೊಬ್ಬನೆ
ಸಂಕಟಗೊಂಡಿದ್ದೇನೆ
ಎಲ್ಲರೂ ಮುಗುಳ್ನಗೆ
ಹೊತ್ತು ನಿಂತಿದ್ದಾರೆ.

ನನ್ನೂರಿನ ಗುಡ್ಡ ಹತ್ತಿ
ನೋಡಿದೆ...

ನನ್ನ ಮನೆಯಲಿ
ಒಲೆ ಹತ್ತಿ ಉರಿಯುತಿದೆ
ಎಲ್ಲರ ಮನೆಗಳಲಿ
ಮನಸುಗಳು ಹೊತ್ತಿಕೊಂಡಿವೆ.

ಲಿಂಗರಾಜ ಸೊಟ್ಟಪ್ಪನವರ
ರೇಣುಕಾ ನಿಲಯ, ಕಾಳೆ ಬಿಲ್ಡಿಂಗ್, ವಿದ್ಯಾನಗರ (ಪಶ್ಚಿಮ)
ಹಾವೇರಿ – ೫೮೧ ೧೧೦

# ಕ್ಷ - ಕಿರಣ

ನರಮೇಧಿಯಲ್ಲ ಕಣೋ,
ನರೇಂದ್ರ ಮೋದಿ ಅನ್ನೋ...



ಅತ್ಯಾಚಾರ:
ಅಸುರಾಮ್ ಬಾಪು ಬಂಧನ




ರಾಹುಲ್ ಪ್ರಧಾನಿಯಾದರೆ ಅವರ
ಕೈ ಕೆಳಗೆ ಕೆಲಸ ಮಾಡಲು ನನಗೆ ಹೆಮ್ಮೆ



ಕೊನೆಗೂ ಇವರ ಕೆಲಸ
ಕಾಯಂ ಆಯ್ತು

ಸಿರಿಯಾ: ಚದುರಿದ ಸಿರಿಯಾ
ಯುದ್ಧದ ಕಾರ್ಮೋಡ






# ಕೆಪಿಎಸ್‌ಸಿ ಕೊಳೆ ತೊಳೆಯಲು ಯಾರಿಗೂ ಮನಸ್ಸಿಲ್ಲ !

ಕರ್ನಾಟಕ ಲೋಕಸೇವಾ ಆಯೋಗದಲ್ಲಿ ನಡೆಯುತ್ತಿರುವ ಭ್ರಷ್ಟಾಚಾರ ಯಾರನ್ನಾದರೂ ಬೆಚ್ಚಿಬೀಳಿಸುವಂತಿದೆ. ಅದು ಎಷ್ಟು ಹದಗೆಟ್ಟಿದೆ ಎಂದರೆ ನೇಮಕಾತಿ ಪ್ರಕ್ರಿಯೆ ನಡೆಸಲು ಇಂತಹದ್ದೊಂದು ಸಂಸ್ಥೆಯನ್ನು ಇಟ್ಟುಕೊಳ್ಳಬೇಕಾ ಎಂದು ಪ್ರಶ್ನೆ ಮಾಡುವ ಸ್ಥಿತಿ ಬಂದಿದೆ.

ಕೇಂದ್ರ ಲೋಕಸೇವಾ ಆಯೋಗ ಮತ್ತು ರಾಜ್ಯ ಆಯೋಗಗಳಿಗೆ ಸಾಕಷ್ಟು ದೊಡ್ಡ ಇತಿಹಾಸವಿದೆ. ಡಾ॥ ಬಿ. ಆರ್. ಅಂಬೇಡ್ಕರ್ ಅವರು ಸಂವಿಧಾನದ ಕರಡಿನಲ್ಲಿಯೇ ಇದರ ಪ್ರಸ್ತಾಪ ಮಾಡಿದ್ದರು. ಕೇಂದ್ರಾಡಳಿತ ಪ್ರದೇಶಗಳೂ ಸೇರಿದಂತೆ ಎಲ್ಲ ರಾಜ್ಯಗಳಲ್ಲಿ ಪ್ರತ್ಯೇಕ ಲೋಕಸೇವಾ ಆಯೋಗ ಮತ್ತು ಕೇಂದ್ರ ಲೋಕಸೇವಾ ಆಯೋಗ ರಚನೆಗೆ ಶಿಫಾರಸು ಮಾಡಿದ್ದರು. ಅದರ ಫಲವಾಗಿ ಸಂವಿಧಾನದ ಭಾಗ ೧೪ರ ಅಧ್ಯಾಯ ೨ರ ಅನುಚ್ಛೇದ ೩೧೫ರಿಂದ ೩೨೩ರ ವರೆಗೆ ಕೇಂದ್ರ ಲೋಕಸೇವಾ ಆಯೋಗ ಮತ್ತು ರಾಜ್ಯ ಲೋಕಸೇವಾ ಆಯೋಗದ ರಚನೆ ಬಗ್ಗೆ ವಿವರಗಳನ್ನು ನೀಡಲಾಗಿದೆ. ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ಕರ್ತವ್ಯದ ಬಗ್ಗೆ ಅನುಚ್ಛೇದ ೩೨೦ರಲ್ಲಿ ವಿವರಗಳನ್ನೂ ನೀಡಲಾಗಿದೆ. ಕೇಂದ್ರ ಲೋಕಸೇವಾ ಆಯೋಗದ ಅಧ್ಯಕ್ಷರ ಅವಧಿ ೬ ವರ್ಷ ಅಥವಾ ಅವರಿಗೆ ೬೫ ವರ್ಷ ವಯಸ್ಸು ಆಗುವವರೆಗೆ. ಅದೇ ರೀತಿ ರಾಜ್ಯ ಲೋಕಸೇವಾ ಆಯೋಗದ ಅಧ್ಯಕ್ಷರು ಮತ್ತು ಸದಸ್ಯರ ಅವಧಿ ೬ ವರ್ಷ ಅಥವಾ ಅವರ ವಯಸ್ಸು ೬೨ ವರ್ಷ ಆಗುವವರೆಗೆ. ರಾಜ್ಯ ಲೋಕಸೇವಾ ಆಯೋಗದ ಸದಸ್ಯರನ್ನು ರಾಜ್ಯ ಸಚಿವ ಸಂಪುಟದ ಶಿಫಾರಸಿನಂತೆ ರಾಜ್ಯಪಾಲರು ನೇಮಕ ಮಾಡುತ್ತಾರೆ. ಆದರೆ ಯಾವುದೇ ಕಾರಣಕ್ಕೂ ಅವರನ್ನು ಸ್ಥಾನದಿಂದ ಕಿತ್ತುಹಾಕುವ ಅಧಿಕಾರ ರಾಜ್ಯಪಾಲರಿಗೆ ಇಲ್ಲ. ರಾಷ್ಟ್ರಪತಿ ಅವರು ಮಾತ್ರ ಹೀಗೆ ಮಾಡಬಹುದು. ಕೆಪಿಎಸ್‌ಸಿ ಸದಸ್ಯರಾಗಿ ನೇಮಕಗೊಳ್ಳಲು ನಿರ್ದಿಷ್ಟವಾದ ಯಾವುದೇ ಅರ್ಹತೆಯನ್ನು ವಿಧಿಸಿಲ್ಲ. ಆದರೆ ೧೯೮೧ರಲ್ಲಿ ಸುಪ್ರೀಂ ಕೋರ್ಟ್ ಅಜಯ್ ಹಾಸಿಯ ವಿರುದ್ಧ ಖಾಲೀದ್ ಮುಜೀಬ್ ಅವರ ಪ್ರಕರಣದಲ್ಲಿ ರಾಜ್ಯ ಲೋಕಸೇವಾ ಆಯೋಗದ ಸದಸ್ಯರು ಅಸಾಧಾರಣ ಪ್ರತಿಭೆ ಹೊಂದಿರಬೇಕು, ಉನ್ನತ ವಿದ್ಯಾಭ್ಯಾಸ ಮಾಡಿರಬೇಕು, ಅತ್ಯುನ್ನತ ಅರ್ಹತೆ ಹೊಂದಿರಬೇಕು ಎಂದು ಹೇಳಿದೆ. ೧೯೨೬ರಲ್ಲಿ ರಾಸ್ ಬಾರ್ಕರ್ ಅಧ್ಯಕ್ಷತೆಯಲ್ಲಿ ಮೊದಲ ಕೇಂದ್ರ ಲೋಕಸೇವಾ ಆಯೋಗ ಆರಂಭವಾಯಿತು.

೧೯೫೦ರಲ್ಲಿ ಕರ್ನಾಟಕ ಲೋಕಸೇವಾ ಆಯೋಗ ಅಸ್ತಿತ್ವಕ್ಕೆ ಬಂತು. ಎಚ್. ಬಿ. ಗುಂಡಪ್ಪ ಗೌಡ ಪ್ರಥಮ ಅಧ್ಯಕ್ಷರಾಗಿದ್ದರು. ಜಾರ್ಜ್ ಮದನ್, ಎಚ್. ಎಂ. ಮಲ್ಲಿಕಾರ್ಜುನಪ್ಪ ಅವರು ಸದಸ್ಯರಾಗಿದ್ದರು.

ಆರಂಭದ ದಿನಗಳಲ್ಲಿ ಯುನೈಟೆಡ್ ಕಟ್ಟಡದಲ್ಲಿದ್ದ ಕೆಪಿಎಸ್‌ಸಿ ನಂತರ ಬಾಲಬ್ರೂಯಿಗೆ ಬಂತು. ಅಲ್ಲಿಂದ ಹೈಕೋರ್ಟ್‌ನ ಅತಾರಾ ಕಚೇರಿಗೆ ಬಂತು. ಅಲ್ಲಿಂದಲೂ ಸ್ಥಳಾಂತರಗೊಂಡು ವಿಧಾನಸೌಧ ಬಳಿಯ ಪಾರ್ಕ್ ಹೌಸ್‌ಗೆ ಬಂತು. ೨೦೦೫ರಿಂದ ಉದ್ಯೋಗ ಸೌಧದಲ್ಲಿ ಕಾರ್ಯ ನಡೆಸುತ್ತಿದೆ.

ಆರಂಭದ ಹಲವಾರು ವರ್ಷಗಳಲ್ಲಿ ಕೆಪಿಎಸ್‌ಸಿ ಉತ್ತಮ ಕೆಲಸಗಳನ್ನು ಮಾಡುತ್ತಾ ಬಂತು. ವರ್ಷಗಳು ಉರುಳಿದ ಹಾಗೆ ಎಲ್ಲ ಕ್ಷೇತ್ರಗಳಲ್ಲಿ ನೈತಿಕತೆ ಕುಸಿದಂತೆ ಕೆಪಿಎಸ್‌ಸಿ ಕೂಡ ನೈತಿಕವಾಗಿ ಕೆಳಕ್ಕೆ ಇಳಿಯತೊಡಗಿತು. ೧೯೯೦ರ ದಶಕದಲ್ಲಿ ಕೆಪಿಎಸ್‌ಸಿ ಮೇಲೆ ಅತ್ಯಂತ ಹೆಚ್ಚು ಆರೋಪಗಳು ಕೇಳಿ ಬರಲಾರಂಭಿಸಿತು. ಸ್ವಜನ ಪಕ್ಷಪಾತ, ಸ್ವಜಾತಿ ಪ್ರೇಮ, ಭ್ರಷ್ಟಾಚಾರ ವಿಜೃಂಭಿಸತೊಡಗಿತು. ಕೆಪಿಎಸ್‌ಸಿ ಒಂದು ಸಾಂವಿಧಾನಿಕ ಸಂಸ್ಥೆ. ಅದರ ಸದಸ್ಯರು ಹಾಗೂ ಅಧ್ಯಕ್ಷರನ್ನು ರಾಷ್ಟ್ರಪತಿ ಅವರಲ್ಲದೆ

ಯಾರೂ ತೆಗೆದು ಹಾಕಲು ಸಾಧ್ಯವಿಲ್ಲ ಎನ್ನುವುದನ್ನೇ ಬಂಡವಾಳ ಮಾಡಿಕೊಂಡ ಸದಸ್ಯರು ಸಾಕಷ್ಟು ಅವ್ಯವಹಾರ ನಡೆಸಿದರು. ಈಗಂತೂ ಕೆಪಿಎಸ್‌ಸಿ ನೇಮಕಾತಿ ಎಂದರೆ ಹಣ ಇದ್ದವರಿಗೆ ಮಾತ್ರ ಎನ್ನುವಂತಹ ಪರಿಸ್ಥಿತಿ ನಿರ್ಮಾಣವಾಗಿದೆ. ೧೯೯೮, ೯೯, ೨೦೦೪ರ ನೇಮಕಾತಿ ವಿಷಯ ಈಗ ಹೈಕೋರ್ಟ್‌ನಲ್ಲಿದೆ. ೨೦೧೧ರ ನೇಮಕಾತಿ ಅಕ್ರಮಗಳ ಬಗ್ಗೆ ಸಿಐಡಿ ತನಿಖೆ ನಡೆಸಿ ಸರ್ಕಾರಕ್ಕೆ ವರದಿ ನೀಡಿದೆ. ೧೯೯೮, ೯೯, ೨೦೦೪ರ ನೇಮಕಾತಿಗೆ ಸಂಬಂಧಿಸಿದಂತೆ ಏನು ಕ್ರಮ ಕೈಗೊಳ್ಳುತ್ತೀರಿ ಎಂದು ಕೇಳಿ ಕೇಳಿ ಸುಸ್ತಾಗಿರುವ ಹೈಕೋರ್ಟ್ ಈಗ ರಾಜ್ಯ ಸರ್ಕಾರಕ್ಕೆ ಚಾಟಿ ಬೀಸಲು ಆರಂಭಿಸಿದೆ. ಕೇವಲ ಗೆಜೆಟೆಡ್ ಅಧಿಕಾರಿಗಳನ್ನು ಮಾತ್ರ ಕೆಪಿಎಸ್‌ಸಿ ನೇಮಕ ಮಾಡಿಕೊಳ್ಳುವುದಿಲ್ಲ. ಪ್ರೌಢಶಾಲಾ ಮುಖ್ಯ ಶಿಕ್ಷಕರು, ಪಂಚಾಯ್ತಿ ಅಭಿವೃದ್ಧಿ ಅಧಿಕಾರಿಗಳು, ಸರ್ವೇಯರುಗಳು, ಎಂಜಿನಿಯರ್‌ಗಳು ಹೀಗೆ ಬಹುತೇಕ ಎಲ್ಲ ನೇಮಕಾತಿಯನ್ನೂ ಕೆಪಿಎಸ್‌ಸಿಯೇ ನಡೆಸುತ್ತದೆ. ಎಲ್ಲ ನೇಮಕಾತಿಯಲ್ಲಿಯೂ ಅವ್ಯವಹಾರದ ವಾಸನೆ ಬಡಿಯುತ್ತಲೇ ಇರುತ್ತದೆ. ಪೂರ್ವ ತಯಾರಿ ಪರೀಕ್ಷೆಯಲ್ಲಿಯೇ ಅವ್ಯವಹಾರ ಆರಂಭವಾಗುತ್ತದೆ. ಪ್ರಶ್ನೆ ಪತ್ರಿಕೆ ಸಿದ್ಧಪಡಿಸುವಾಗ, ಮೌಲ್ಯಮಾಪನ, ಸಂದರ್ಶನದ ಹಂತದಲ್ಲಿಯೂ ಭ್ರಷ್ಟಾಚಾರ ವ್ಯಾಪಕವಾಗಿದೆ.

ಒಬ್ಬ ಆಟೋ ಚಾಲಕನ ಮಗ ಐಎಎಸ್ ಅಧಿಕಾರಿಯಾಗಬಹುದು. ಹೊಟೇಲ್‌ಗಳಲ್ಲಿ ಕೆಲಸ ಮಾಡುತ್ತಿದ್ದ ವ್ಯಕ್ತಿಯೂ ಐಎಎಸ್ ಕನಸು ಕಾಣಬಹುದು. ಆದರೆ ಬಡವನೊಬ್ಬ ಕೆಎಎಸ್ ಅಧಿಕಾರಿಯಾಗುವ ಕನಸು ಕಾಣುವುದೇ ಅಸಾಧ್ಯ ಎನ್ನುವ ಪರಿಸ್ಥಿತಿ ಇಲ್ಲಿ ನಿರ್ಮಾಣವಾಗಿದೆ. ಕೆಎಎಸ್ ಅಧಿಕಾರಿಯಾಗಬೇಕು ಎಂದರೆ ಸಾಲ ಮಾಡಿಯಾದರೂ ಲಕ್ಷ ಲಕ್ಷ ಹಣ ನೀಡಬೇಕು. ಹೊಲ, ಮನೆ ಮಾರಿಯಾದರೂ ಹಣ ತಂದುಕೊಡಬೇಕು. ಇಲ್ಲ ತಾಳಿಭಾಗ್ಯ ಯೋಜನೆಗೆ ತಲೆ ಕೊಡಬೇಕು.

ಅತ್ತ ಅಧಿಕಾರಿಯೂ ಆಗದೆ ಇತ್ತ ಬೇರೆ ಉದ್ಯೋಗವೂ ಸಿಗದೆ ಬದುಕಿನಲ್ಲಿಯೇ ನಂಬಿಕೆಯನ್ನು ಕಳೆದುಕೊಂಡವರೂ ಇದ್ದಾರೆ. ಇಷ್ಟಾದರೂ ಕೆಪಿಎಸ್‌ಸಿ ಸುಧಾರಣೆಗೆ ಯಾರೂ ಮುಂದಾಗದೇ ಇರುವುದು ಮಾತ್ರ ಅಚ್ಚರಿಯ ಅಂಶ. ಮುಖ್ಯಮಂತ್ರಿಯಾಗಿ ಸಿದ್ದರಾಮಯ್ಯ ಅಧಿಕಾರ ವಹಿಸಿಕೊಂಡ ಹೊಸತರಲ್ಲಿಯೇ ಕರ್ನಾಟಕ ಲೋಕಸೇವಾ ಆಯೋಗದ ಹೊಸ ಹಗರಣ ಬಹಿರಂಗವಾಗಿತ್ತು. ೨೦೧೧ರ ನೇಮಕಾತಿಯಲ್ಲಿ ಬೇಕಾಬಿಟ್ಟಿ ಅಂಕಗಳನ್ನು ನೀಡಲಾಗಿದೆ. ಸದಸ್ಯರೇ ಅಭ್ಯರ್ಥಿಗಳಿಗೆ ದೂರವಾಣಿ ಕರೆ ಮಾಡಿ ಹಣ ನೀಡಿದರೆ ಮಾತ್ರ ಕೆಲಸ ನೀಡುವುದಾಗಿ ಹೇಳಿದ್ದಾರೆ. ಚುನಾವಣಾ ನೀತಿಸಂಹಿತೆ ಜಾರಿಯಲ್ಲಿದ್ದರೂ ಸಂದರ್ಶನ ನಡೆಸಲಾಗಿದೆ.

ಹೀಗೆ ಹಲವಾರು ಆರೋಪಗಳು ಕೇಳಿ ಬಂದಿದ್ದವು. ತಕ್ಷಣವೇ ಈ ಬಗ್ಗೆ ಸಿಐಡಿ ತನಿಖೆ ನಡೆಸುವುದಾಗಿ ಮುಖ್ಯಮಂತ್ರಿ ಪ್ರಕಟಿಸಿದರು. ಸಿಐಡಿ ತನಿಖೆಯ ಜೊತೆಗೇ ಕೆಪಿಎಸ್‌ಸಿಯ ಕೊಳೆಯನ್ನೆಲ್ಲಾ ತೊಳೆಯಲು ಲೋಕಸೇವಾ ಆಯೋಗದ ಮಾಜಿ ಅಧ್ಯಕ್ಷ ಪಿ. ಸಿ. ಹೋಟಾ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಿ ಸುಧಾರಣೆಗೆ ಕೈಗೊಳ್ಳಬಹುದಾದ ಕ್ರಮಗಳ ಬಗ್ಗೆ ಅಧ್ಯಯನ ನಡೆಸಲು ಕೋರಿಕೊಂಡರು. ಅದರಂತೆ ಕೇವಲ ೨೧ ದಿನಗಳಲ್ಲಿಯೇ ಹೋಟಾ ಸಮಿತಿ ವರದಿಯನ್ನೂ ನೀಡಿತು. ಯುಪಿಎಸ್‌ಸಿ ಮಾದರಿಯಲ್ಲಿ ನೇಮಕಾತಿ ಪ್ರಕ್ರಿಯೆ ನಡೆಸಬೇಕು ಎನ್ನುವುದೂ ಸೇರಿದಂತೆ ಸುಮಾರು ೬೭ ಶಿಫಾರಸುಗಳನ್ನು ಈ ಸಮಿತಿ ಮಾಡಿತು. ಕೆಪಿಎಸ್‌ಸಿ ಸದಸ್ಯರ ನೇಮಕಾತಿಗೆ ಪ್ರತ್ಯೇಕ ಆಯ್ಕೆ ಸಮಿತಿ ರಚಿಸಬೇಕು ಎನ್ನುವ ಶಿಫಾರಸನ್ನು ಸರ್ಕಾರ ಒಪ್ಪಿಕೊಳ್ಳಲಿಲ್ಲ. ಕೆಪಿಎಸ್‌ಸಿ ಸದಸ್ಯರಾಗಬಯಸುವವರು ಕೋಟಿ ಕೋಟಿ ರೂಪಾಯಿಗಳನ್ನು ನೀಡಿ ಸದಸ್ಯರಾಗುತ್ತಾರೆ ಎನ್ನುವ ಆರೋಪ ಇರುವಾಗ ಇಂತಹ ಮಹತ್ವದ ಶಿಫಾರಸನ್ನು ರಾಜ್ಯ ಸರ್ಕಾರ ಒಪ್ಪಿಕೊಳ್ಳದೇ ಇರುವುದು ರಾಜ್ಯ ಸರ್ಕಾರಕ್ಕೆ ಕೆಪಿಎಸ್‌ಸಿಯನ್ನು ಸಂಪೂರ್ಣವಾಗಿ ಸುಧಾರಣೆ ಮಾಡುವ ಬಯಕೆ ಇಲ್ಲ ಎನ್ನುವ ಅನುಮಾನ ಬರುತ್ತದೆ.

ಇಂತಹ ಅನುಮಾನ ಬರಲು ಇನ್ನೂ ಕೆಲವು ಕಾರಣಗಳಿವೆ. ೧೯೯೮, ೧೯೯೯ ಮತ್ತು ೨೦೦೪ರ ನೇಮಕಾತಿ ಪ್ರಕ್ರಿಯೆಯಲ್ಲಿ ಅಕ್ರಮಗಳು ನಡೆದಿವೆ ಎನ್ನುವುದನ್ನು ಸಿಐಡಿ ತನಿಖೆ ಬಹಿರಂಗಪಡಿಸಿದೆ. ಹೈಕೋರ್ಟ್ ಕೂಡ ಇದನ್ನು ಒಪ್ಪಿಕೊಂಡಿದೆ. ಈ ಮೂರೂ ವರ್ಷಗಳಲ್ಲಿ ಅಕ್ರಮವಾಗಿ ನೇಮಕವಾದವರನ್ನು ತಕ್ಷಣವೇ ಕೆಲಸದಿಂದ ವಜಾ ಮಾಡುವ ಅವಕಾಶವೂ ಇತ್ತು. ಅಕ್ರಮದಲ್ಲಿ ಯಾರು ಭಾಗಿಯಾಗಿದ್ದಾರೆ ಎನ್ನುವ ವಿಚಾರ ಕೂಡ ಸರ್ಕಾರಕ್ಕೆ ಗೊತ್ತಿತ್ತು. ಅವರ ವಿರುದ್ಧ ಕೂಡ ಯಾವುದೇ ಕ್ರಮ ಕೈಗೊಳ್ಳಲಿಲ್ಲ. ಅಕ್ರಮವಾಗಿ ನೇಮಕಗೊಂಡವರ ವಿರುದ್ಧ ಯಾವ ಕ್ರಮ ಕೈಗೊಳ್ಳುತ್ತೀರಿ ಎಂದು ಹೈಕೋರ್ಟ್ ಪದೇ ಪದೇ ಕೇಳುತ್ತಿದ್ದರೂ ಅದಕ್ಕೆ ಸೂಕ್ತವಾದ ಉತ್ತರವನ್ನು ನೀಡಲು ರಾಜ್ಯ ಸರ್ಕಾರ ಮನಸ್ಸು ಮಾಡುತ್ತಿಲ್ಲ. ೧೯೯೮ರಲ್ಲಿ ಅಕ್ರಮವಾಗಿ ಕೆಲಸ ಗಿಟ್ಟಿಸಿಕೊಂಡವರು ಈಗ ಸರ್ಕಾರದ ಆಯಕಟ್ಟಿನ ಸ್ಥಾನದಲ್ಲಿದ್ದಾರೆ. ಬಡ್ತಿಯನ್ನೂ ಪಡೆದುಕೊಂಡಿದ್ದಾರೆ. ಪ್ರತಿಭಾವಂತರಾಗಿದ್ದೂ ಕೆಲಸ ಸಿಗದೇ ಇರುವವರು ಇನ್ನೂ ಬೀದಿ ಬೀದಿ ಅಲೆಯುತ್ತಿದ್ದಾರೆ. ಹೈಕೋರ್ಟ್ ತಮ್ಮ ನೆರವಿಗೆ ಬರಬಹುದು ಎಂಬ ನಿರೀಕ್ಷೆಯಲ್ಲಿಯೇ ೧೫ ವರ್ಷ ಕಳೆದಿದ್ದಾರೆ. ಅವರ ಕಣ್ಣೀರಿಗೆ ಸರ್ಕಾರ ಬೆಲೆಯನ್ನೇ ನೀಡುತ್ತಿಲ್ಲ. ೨೦೧೧ರ ಪ್ರಕರಣದ ಆರೋಪಿಗಳು ನಿರೀಕ್ಷಣಾ ಜಾಮೀನು ಪಡೆಯಲು ಸಾಕಷ್ಟು ಅವಕಾಶವನ್ನೂ ಕಲ್ಪಿಸಿಕೊಡಲಾಯಿತು. ಸಿಐಡಿ ಪೊಲೀಸರು ಕೆಪಿಎಸ್‌ಸಿ ಕಚೇರಿ ಮತ್ತು ಆರೋಪಿಗಳ ಮನೆಯ ಮೇಲೆ ದಾಳಿ ನಡೆಸಿದಾಗ ಅವರಿಗೆ ಸಾಕಷ್ಟು ಪ್ರಮಾಣದ ದಾಖಲೆಗಳೂ ಸಿಗಲಿಲ್ಲ. ದಾಖಲೆಗಳನ್ನು ನಾಶ ಮಾಡಲಾಗಿದೆ ಎಂಬ ದೂರುಗಳೂ ಕೇಳಿಬಂದವು. ಇದಕ್ಕೆ ಅವಕಾಶ ನೀಡದಂತೆ ಸರ್ಕಾರ ನಡೆದುಕೊಳ್ಳಬಹುದಾಗಿತ್ತು.

ಅಕ್ರಮವಾಗಿ ಕೆಲಸ ಪಡೆದವರನ್ನು ಮತ್ತು ಹಣ ಪಡೆದು ಕೆಲಸ ನೀಡಿದವರನ್ನು ಒಮ್ಮೆ ಕಠಿಣ ಶಿಕ್ಷೆಗೆ ಗುರಿಪಡಿಸಿದ್ದರೆ ಕೆಪಿಎಸ್‌ಸಿಯಲ್ಲಿ ಅವ್ಯವಹಾರ ಕೊಂಚವಾದರೂ ಕಡಿಮೆಯಾಗುತ್ತಿತ್ತು. ಆದರೆ ಅಂತಹ ಸಾಹಸಕ್ಕೆ ಯಾವ ಸರ್ಕಾರವೂ ಮುಂದಾಗಲೇ ಇಲ್ಲ. ಕೋಲೂ ಮುರಿಯಬಾರದು, ಹಾವೂ ಸಾಯಬಾರದು ಎನ್ನುವ ರೀತಿಯಲ್ಲಿಯೇ ನಡೆದುಕೊಳ್ಳುತ್ತಿವೆ. ಸದಸ್ಯರ ನೇಮಕಾತಿಯಲ್ಲಿ ಸಾಮಾಜಿಕ ನ್ಯಾಯವನ್ನು ಕಾಪಾಡಬೇಕಾಗಿರುವುದರಿಂದ ಆಯ್ಕೆ ಸಮಿತಿ ಪದ್ಧತಿ ಶಿಫಾರಸನ್ನು ತಿರಸ್ಕರಿಸಲಾಗಿದೆ ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದರು. ಆದರೆ ನಿಜವಾಗಿ ಸಾಮಾಜಿಕ ನ್ಯಾಯ ಇರಬೇಕಾಗಿದ್ದು ಉದ್ಯೋಗಾಕಾಂಕ್ಷಿಗಳಿಗೆ ಉದ್ಯೋಗ ನೀಡುವಾಗಲೇ ವಿನಾ ಸದಸ್ಯರ ನೇಮಕಾತಿಯಲ್ಲಿ ಅಲ್ಲ. ತಮ್ಮ ರಾಜಕೀಯ ಜೀವನದುದ್ದಕ್ಕೂ ಸಾಮಾಜಿಕ ನ್ಯಾಯದ ಬಗ್ಗೆಯೇ ಮಾತನಾಡುತ್ತಾ ಬಂದ ಸಿದ್ದರಾಮಯ್ಯ ೧೯೯೮, ೯೯ ಮತ್ತು ೨೦೦೪ರಲ್ಲಿ ಸಾಮಾಜಿಕ ನ್ಯಾಯಕ್ಕೆ ಕೊಡಲಿ ಪೆಟ್ಟು ಬಿದ್ದಿರುವುದು ಗೊತ್ತಾದರೂ ಯಾವುದೇ ಕ್ರಮ ಕೈಗೊಳ್ಳದೇ ಸುಮ್ಮನಾಗಿರುವುದು ಮಾತ್ರ ಅಚ್ಚರಿಯ ಅಂಶ.

ಕೆಪಿಎಸ್‌ಸಿ ಯಾವುದೇ ನೇಮಕಾತಿ ಪ್ರಕ್ರಿಯೆ ಆರಂಭಿಸಿದರೆ ಅದು ಪೂರ್ಣವಾಗಲು ೩ರಿಂದ ೫ ವರ್ಷ ಬೇಕು. ಸಾಮಾನ್ಯ ವರ್ಗದವರಿಗೆ ಕೆಪಿಎಸ್‌ಸಿ ಪರೀಕ್ಷೆಗೆ ಕುಳಿತುಕೊಳ್ಳಲು ವಯಸ್ಸಿನ ಮಿತಿ ೩೫ ವರ್ಷ. ಇತರೆ ಹಿಂದುಳಿದ ವರ್ಗದವರಿಗೆ ೩೮ ಮತ್ತು ಪರಿಶಿಷ್ಟರಿಗೆ ೪೦ ವರ್ಷ. ಕೆಎಎಸ್ ಅಧಿಕಾರಿಯಾಗುವ ಕನಸು ಹೊತ್ತು ವಯಸ್ಸು ಮೀರಿದ ಸಾವಿರ ಸಾವಿರ ಮಂದಿ ನಮ್ಮ ನಡುವೆ ಇದ್ದಾರೆ. ಮುಖ್ಯ ಪರೀಕ್ಷೆಯಲ್ಲಿ ಅತಿ ಹೆಚ್ಚು ಅಂಕ ಪಡೆದು ಸಂದರ್ಶನದಲ್ಲಿ ಕಡಿಮೆ ಅಂಕ ನೀಡಿದ್ದರಿಂದ ಅಧಿಕಾರಿಯಾಗುವ ಅವಕಾಶದಿಂದ ವಂಚಿತರಾದವರೂ ಬೇಕಾದಷ್ಟು ಮಂದಿ ಇದ್ದಾರೆ.

ಕೆಪಿಎಸ್‌ಸಿ ಸುಧಾರಣೆ ಎಂದರೆ ಕೇವಲ ಸದಸ್ಯರ ನೇಮಕಾತಿ ಮತ್ತು ಸಂದರ್ಶನದ ಪದ್ಧತಿಯನ್ನು ಸುಧಾರಿಸುವುದಲ್ಲ. ಕೆಪಿಎಸ್‌ಸಿ ಪರೀಕ್ಷಾ ಸುಧಾರಣೆ ಕೂಡ ಅದರಲ್ಲಿ ಸೇರಿದೆ. ಪೂರ್ವಭಾವಿ ಪರೀಕ್ಷೆ, ಮುಖ್ಯ ಪರೀಕ್ಷೆ, ಮೌಲ್ಯಮಾಪನ ಎಲ್ಲದರಲ್ಲಿಯೂ ಅಕ್ರಮ ನಡೆಯುವುದು ಈಗಾಗಲೇ ತನಿಖೆಯಿಂದ ದೃಢಪಟ್ಟಿದೆ. ಪ್ರಶ್ನೆ ಪತ್ರಿಕೆ ಸಿದ್ಧಪಡಿಸುವುದರಿಂದ ಹಿಡಿದು ಮೌಲ್ಯಮಾಪನದವರೆಗೆ ಎಲ್ಲ ಹಂತದಲ್ಲಿ ಯಾವ ಯಾವ ಸುಧಾರಣೆ ತರಲಾಗುವುದು ಎಂದು ಸರ್ಕಾರ ಮೊದಲೇ ಪ್ರಕಟಿಸಿ ಆ ಬಗ್ಗೆ ಸಾರ್ವಜನಿಕ ಚರ್ಚೆಯಾದ ನಂತರ ಎಲ್ಲರಿಗೂ ಒಪ್ಪಿಗೆಯಾಗಬಹುದಾದ ನಿರ್ಧಾರವನ್ನು ಕೈಗೊಳ್ಳಬಹುದಾಗಿತ್ತು. ಪರೀಕ್ಷಾ ಸುಧಾರಣೆಗೆ ತಜ್ಞರ ಸಮಿತಿ ರಚಿಸಿ ವರದಿ ಪಡೆಯಬಹುದಾಗಿತ್ತು. ಐಎಎಸ್ ಪರೀಕ್ಷೆ ಪಾಸಾದವರೂ ಕೆಎಎಸ್ ಪರೀಕ್ಷೆಯಲ್ಲಿ ನಪಾಸಾಗುತ್ತಾರೆ. ಅವರಿಗೂ ಸಂದರ್ಶನದಲ್ಲಿ ಅತ್ಯಂತ ಕಡಿಮೆ ಅಂಕ ಬರುತ್ತದೆ ಎಂದರೆ ಇಲ್ಲಿನ ವ್ಯವಸ್ಥೆ ಎಷ್ಟು ಹದಗೆಟ್ಟಿದೆ ಎನ್ನುವುದನ್ನು ಯಾರಾದರೂ ಲೆಕ್ಕಹಾಕಬಹುದು. ಪೂರ್ವಭಾವಿ ಪರೀಕ್ಷೆಗೆ ಹಾಜರಾಗದವರೂ ತಹಶೀಲ್ದಾರ್ ಆಗುತ್ತಾರೆ. ಮುಖ್ಯ ಪರೀಕ್ಷೆಯಲ್ಲಿ ಕಡಿಮೆ ಅಂಕ ಪಡೆದವರೂ ಉಪ ವಿಭಾಗಾಧಿಕಾರಿಗಳಾಗಿ ನೇಮಕಗೊಳ್ಳುತ್ತಾರೆ. ಇಷ್ಟೆಲ್ಲಾ ಅಕ್ರಮಗಳು ನಡೆದಿವೆ ಎಂದು ಸಿಐಡಿ ತನಿಖೆ ಬಹಿರಂಗ ಮಾಡುತ್ತದೆ. ಆದರೆ ೧೫ ವರ್ಷ ಆದರೂ ಅಕ್ರಮ ಮಾಡಿದವರು ನಿರಾಳವಾಗಿ ಓಡಾಡಿಕೊಂಡಿದ್ದಾರೆ. ಅಕ್ರಮದಿಂದ ಕೆಲಸ ಗಿಟ್ಟಿಸಿಕೊಂಡವರು ಸರ್ಕಾರಿ ಸಂಬಳ ಮತ್ತು ಸಾರ್ವಜನಿಕರಿಂದ ಗಿಂಬಳ ಪಡೆದುಕೊಂಡು ಹಾಯಾಗಿದ್ದಾರೆ.

**ಯುಪಿಎಸ್‌ಸಿ ಮಾದರಿ**

ರಾಜ್ಯದಲ್ಲಿ ಕೆಪಿಎಸ್‌ಸಿ ಹಗರಣ ನಡೆದಾಗಲೆಲ್ಲಾ ಕೆಪಿಎಸ್‌ಸಿಯನ್ನು ಯುಪಿಎಸ್‌ಸಿ ಮಾದರಿಯಲ್ಲಿ ಸಜ್ಜುಗೊಳಿಸಲಾಗುವುದು ಎಂದು ನಮ್ಮ ರಾಜಕಾರಣಿಗಳು ಹೇಳುತ್ತಾರೆ. ಹಾಗಾದರೆ ಏನಿದು ಯುಪಿಎಸ್‌ಸಿ ಮಾದರಿ ? ಯುಪಿಎಸ್‌ಸಿ ನೇಮಕಾತಿ ಪ್ರಕ್ರಿಯೆ ಬಹುತೇಕ ಭ್ರಷ್ಟಾಚಾರದಿಂದ ಮುಕ್ತವಾಗಿರುತ್ತದೆ. ಪ್ರಶ್ನೆ ಪತ್ರಿಕೆ ಸಿದ್ಧ ಮಾಡುವುದರಿಂದ ಹಿಡಿದು, ಮೌಲ್ಯಮಾಪನ ಪ್ರಕ್ರಿಯೆ, ಪೂರ್ವಭಾವಿ ಪರೀಕ್ಷೆ, ಮುಖ್ಯ ಪರೀಕ್ಷೆ, ಸಂದರ್ಶನಕ್ಕೆ ಅಭ್ಯರ್ಥಿಗಳ ಆಯ್ಕೆ ಪ್ರಕ್ರಿಯೆಗಳು ಸಂಪೂರ್ಣವಾಗಿ ಕಂಪ್ಯೂಟರ್ ಮೂಲಕವೇ ಆಗುತ್ತವೆ. ಯುಪಿಎಸ್‌ಸಿಯಲ್ಲಿ ಕೈಯಲ್ಲಿ ಬರೆಯುವ ಪದ್ಧತಿಯೇ ಇಲ್ಲ. ಎಲ್ಲ ವಿವರಗಳೂ ಮೊಹರಾದ ಲಕೋಟೆಯಲ್ಲಿರುತ್ತವೆ. ಆಯಾ ಕಾಲಕ್ಕೆ ಲಕೋಟೆಯನ್ನು ತೆರೆಯಲಾಗುತ್ತದೆ. ಎಲ್ಲವೂ ರಹಸ್ಯವಾಗಿ ನಡೆಯುವುದರಿಂದ ಭ್ರಷ್ಟಾಚಾರಕ್ಕೆ ಅವಕಾಶ ಇರುವುದಿಲ್ಲ. ಕೆಪಿಎಸ್‌ಸಿಯಲ್ಲಿ ನಡೆದ ಹಾಗೆ ಸಂದರ್ಶನವನ್ನು ಯುಪಿಎಸ್‌ಸಿ ಸದಸ್ಯರು ಮಾತ್ರ ನಡೆಸುವುದಿಲ್ಲ. ಐಎಎಸ್ ಹುದ್ದೆ ಸಹಿತ ಯಾವುದೇ ಹುದ್ದೆಗಳಿಗೆ ಸಂದರ್ಶನ ನಡೆಸುವಾಗ ಒಟ್ಟು ಅಭ್ಯರ್ಥಿಗಳ ಸಂಖ್ಯೆಯನ್ನು ವಿಂಗಡಿಸಿ ಎಲ್ಲ ಸದಸ್ಯರಿಗೆ ಹಂಚಲಾಗುತ್ತದೆ.

ಹೀಗೆ ಹಂಚಿದಾಗ ಸದಸ್ಯರಿಗೆ ತಾವು ಎಷ್ಟು ಅಭ್ಯರ್ಥಿಗಳ ಸಂದರ್ಶನ ನಡೆಸಬೇಕು ಎನ್ನುವುದು ಗೊತ್ತಿರುತ್ತದೆಯೇ ವಿನಾ ಯಾವ ಅಭ್ಯರ್ಥಿಯನ್ನು ಸಂದರ್ಶಿಸುತ್ತಿದ್ದೇವೆ ಎನ್ನುವುದು ಮೊದಲೇ ಗೊತ್ತಿರುವುದಿಲ್ಲ. ಅಲ್ಲದೆ ತಮ್ಮ ಪಾಲಿಗೆ ಬಂದ ಅಭ್ಯರ್ಥಿಗಳನ್ನು ಸದಸ್ಯರೊಬ್ಬರೇ ಸಂದರ್ಶಿಸುವ ಹಾಗಿಲ್ಲ. ಇದಕ್ಕೊಂದು ಸಂದರ್ಶನ ಸಮಿತಿ ಇರುತ್ತದೆ. ಈ ಸಮಿತಿಗೆ ಸಂಬಂಧಿಸಿದ ಸದಸ್ಯರೇ ಅಧ್ಯಕ್ಷರಾಗಿರುತ್ತಾರೆ. ಒಬ್ಬರು ನಿವೃತ್ತ ಐಎಎಸ್ ಅಧಿಕಾರಿ, ಒಬ್ಬರು ಐಪಿಎಸ್ ಅಧಿಕಾರಿ, ದೇಶದ ಯಾವುದಾದರೂ ಒಂದು ವಿಶ್ವವಿದ್ಯಾಲಯದ ಕುಲಪತಿ, ಒಬ್ಬರು ಹಿರಿಯ ಪ್ರಾಧ್ಯಾಪಕರು ಈ ಸಮಿತಿ ಸದಸ್ಯರಾಗಿರುತ್ತಾರೆ. ಸಂದರ್ಶನ ಆರಂಭವಾಗುವ ಅರ್ಧ ಗಂಟೆ ಮೊದಲು ಆ ದಿನ ಸಂದರ್ಶನ ನಡೆಸಬೇಕಾದವರ ವಿವರಗಳನ್ನು ಹೊಂದಿರುವ ಲಕೋಟೆ ಯುಪಿಎಸ್‌ಸಿ ಅಧ್ಯಕ್ಷರ ಬಳಿಗೆ ಬರುತ್ತದೆ. ಅದನ್ನು ಅವರು ಸಂದರ್ಶನಕ್ಕೆ ೧೫ ನಿಮಿಷ ಮೊದಲು ಸಂದರ್ಶನ ಸಮಿತಿ ಅಧ್ಯಕ್ಷರಿಗೆ ನೀಡುತ್ತಾರೆ. ಸಮಿತಿ ಸದಸ್ಯರ ಎದುರಿನಲ್ಲಿಯೇ ಲಕೋಟೆಯನ್ನು ಒಡೆಯಬೇಕು. ಆಗಲೇ ಸಂದರ್ಶನಕ್ಕೆ ಯಾರು ಬರುತ್ತಾರೆ ಎನ್ನುವುದು ಗೊತ್ತಾಗುತ್ತದೆ. ಒಬ್ಬ ಅಭ್ಯರ್ಥಿಯ ಸಂದರ್ಶನ ಮುಗಿದ ನಂತರ ಸಂದರ್ಶನದ ಅಂಕದ ವಿವರವನ್ನು ಬರೆದು ಅದನ್ನು ತಕ್ಷಣವೇ ಲಕೋಟೆಯಲ್ಲಿಟ್ಟು ಮೊಹರು ಹಾಕಿ ಅಧ್ಯಕ್ಷರಿಗೆ ಕಳುಹಿಸಲಾಗುತ್ತದೆ. ಅವರು ಅದನ್ನು ಕಂಪ್ಯೂಟರ್ ವಿಭಾಗಕ್ಕೆ ಕಳುಹಿಸುತ್ತಾರೆ. ಮುಖ್ಯ ಪರೀಕ್ಷೆಯಲ್ಲಿ ಅಭ್ಯರ್ಥಿ ಎಷ್ಟು ಅಂಕ ಪಡೆದಿದ್ದಾರೆ, ಸಂದರ್ಶನದಲ್ಲಿ ಎಷ್ಟು ಅಂಕ ಬಂದಿದೆ ಎನ್ನುವ ವಿವರಗಳು ಯುಪಿಎಸ್‌ಸಿ ಅಧ್ಯಕ್ಷರಿಗೂ ಗೊತ್ತಿರುವುದಿಲ್ಲ. ಯುಪಿಎಸ್‌ಸಿಯಲ್ಲಿ ಅಧ್ಯಕ್ಷರು ಮತ್ತು ಇತರ ೧೦ ಸದಸ್ಯರಿರುತ್ತಾರೆ. ಇತರ ಸದಸ್ಯರಂತೆ ಅಧ್ಯಕ್ಷರಿಗೂ ಕೆಲವು ಅಭ್ಯರ್ಥಿಗಳನ್ನು ಸಂದರ್ಶನಕ್ಕಾಗಿ ಹಂಚಲಾಗಿರುತ್ತದೆ. ಅವರಿಗೂ ಸಹ ವಿಶೇಷ ಮಾಹಿತಿ ಏನೂ ಇರುವುದಿಲ್ಲ. ಇತರ ಸದಸ್ಯರಂತೆಯೇ ಅವರು ಸಂದರ್ಶನ ನಡೆಸುತ್ತಾರೆ. ಪ್ರಶ್ನೆ ಪತ್ರಿಕೆ, ಮೌಲ್ಯಮಾಪನ ಎಲ್ಲವೂ ಅತ್ಯಂತ ರಹಸ್ಯವಾಗಿರುತ್ತದೆ. ದೇಶದ ವಿವಿಧ ಭಾಗಗಳಿಂದ ಅನುಭವಿ ಅಧ್ಯಾಪಕರಿಂದ ಪ್ರಶ್ನೆಗಳನ್ನು ತರಿಸಿಕೊಳ್ಳಲಾಗುತ್ತದೆ. ಯುಪಿಎಸ್‌ಸಿಯಲ್ಲಿ ಪ್ರಶ್ನೆಗಳ ಬ್ಯಾಂಕ್ ಇದೆ. ಬ್ಯಾಂಕ್‌ನಿಂದ ಪ್ರಶ್ನೆಗಳನ್ನು ತೆಗೆದುಕೊಂಡು ಪ್ರಶ್ನೆ ಪತ್ರಿಕೆ ಸಿದ್ಧಪಡಿಸಲಾಗುತ್ತದೆ. ಯಾವುದೇ ಅಧ್ಯಾಪಕ ನೀಡಿದ ಎಲ್ಲ ಪ್ರಶ್ನೆಗಳೂ ಯಾವುದೇ ಪ್ರಶ್ನೆ ಪತ್ರಿಕೆಯಲ್ಲಿ ಬರುವುದಿಲ್ಲ.

ಅದೇ ರೀತಿ ಮೌಲ್ಯಮಾಪನ ಕೂಡ ಅತ್ಯಂತ ರಹಸ್ಯವಾಗಿ ನಡೆಯುತ್ತದೆ. ಪ್ರಶ್ನೆ ಪತ್ರಿಕೆ ತಯಾರಿಸುವವರು ಯಾರು, ಮೌಲ್ಯಮಾಪಕರು ಯಾರು ಎನ್ನುವುದು ಸದಸ್ಯರಿಗೆ ಗೊತ್ತಿರುವುದಿಲ್ಲ. ಮೌಲ್ಯಮಾಪಕರು ದೇಶದ ಬೇರೆ ಬೇರೆ ಭಾಗದಲ್ಲಿರುತ್ತಾರೆ. ಪ್ರಶ್ನೆ ಪತ್ರಿಕೆ ವಿಭಾಗದವರು, ಮೌಲ್ಯಮಾಪನ ವಿಭಾಗದವರು, ಕಂಪ್ಯೂಟರ್ ವಿಭಾಗದವರು ಹಣ ತೆಗೆದುಕೊಂಡು ಯಾವುದೇ ಅಭ್ಯರ್ಥಿಗೆ ಲಾಭ ಮಾಡಿಕೊಡಲು ಸಾಧ್ಯವಿಲ್ಲ. ಯಾಕೆಂದರೆ ಪ್ರಶ್ನೆ ಪತ್ರಿಕೆ, ಮೌಲ್ಯಮಾಪನ, ಕಂಪ್ಯೂಟರ್ ವಿಭಾಗ ಎಲ್ಲವೂ ಪ್ರತ್ಯೇಕ. ಈ ವಿಭಾಗಗಳ ನಡುವೆಯೇ ರಹಸ್ಯವನ್ನು ಕಾಪಾಡಲಾಗುತ್ತದೆ. ಅಲ್ಲದೆ ಮುಖ್ಯ ಪರೀಕ್ಷೆ ಅಂಕ ಎಷ್ಟು ಎನ್ನುವುದು ಸಂದರ್ಶಕರಿಗೆ ಗೊತ್ತಿರುವುದಿಲ್ಲ. ಯಾವ ಸಂದರ್ಶನ ಸಮಿತಿಗೆ ಯಾವ ಅಭ್ಯರ್ಥಿ ಸಂದರ್ಶನಕ್ಕೆ ಹಾಜರಾಗುತ್ತಾನೆ ಎನ್ನುವುದು ಅಭ್ಯರ್ಥಿಗೂ ಗೊತ್ತಿರುವುದಿಲ್ಲ. ಇತರ ವಿಭಾಗದವರಿಗೂ ಗೊತ್ತಿರುವುದಿಲ್ಲ. ಇಂತಹ ವ್ಯವಸ್ಥೆ ನಮ್ಮಲ್ಲಿ ಬರುವಂತಾಗಲು ಏನು ತೊಂದರೆ ? ನಮ್ಮ ರಾಜಕಾರಣಿಗಳಿಗೆ ಮನಸ್ಸಿಲ್ಲ ಅಷ್ಟೆ.

**ಸೂರ್ಯದೇವ**
ನಂ. ೧೫, ಪೈಪ್‌ಲೈನ್ ರಸ್ತೆ, ವೈಯ್ಯಾಲಿಕಾವಲ್, ಬೆಂಗಳೂರು – ೫೬೦ ೦೦೩




**ಲೋಕಾರ್ಪಣೆಗೊಂಡ ಕೃತಿಗಳು :**

೧. **ಬಲುತ** – ದಯಾ ಪವಾರ

೨. **ಭಾರತೀಯ ಇತಿಹಾಸದ ವೈಲಕ್ಷಣ್ಯಗಳು**– ಎಸ್. ಜಿ. ಸರ್ದೇಸಾಯಿ

೩. **ಭೂಮಿಯ ಟೈಂ ಬಾಂಬ್ : ಜ್ವಾಲಾಮುಖಿ** – ಟಿ. ಆರ್. ಅನಂತರಾಮು

೪. **ಬಾಲಂಕೃತ ಚುಕ್ಕಿ : ಧೂಮಕೇತು** – ಬಿ. ಎಸ್. ಶೈಲಜಾ

೫. **ಕಾಡು ಕಲಿಸುವ ಪಾಠ** – ಟಿ. ಎಸ್. ಗೋಪಾಲ್

೬. **ಡಿಜಿಟಲ್ ಕ್ಯಾಮೆರಾ ಮೋಡಿ : ಕ್ಲಿಕ್ ಮಾಡಿ ನೋಡಿ** – ಟಿ. ಜಿ. ಶ್ರೀನಿಧಿ

ನವಕರ್ನಾಟಕ ಪ್ರಕಾಶನದ ಇತ್ತೀಚಿನ ಆರು ಪುಸ್ತಕಗಳನ್ನು ನಗರದ ಕನ್ನಡ ಭವನದ ಸಭಾಂಗಣದಲ್ಲಿ ಆಯೋಜಿಸಿದ ಸಮಾರಂಭದಲ್ಲಿ ದಿನಾಂಕ ೨೨-೯-೨೦೧೩ರಂದು ಲೋಕಾರ್ಪಣೆ ಮಾಡಲಾಯಿತು. ಸಭೆಯ ಅಧ್ಯಕ್ಷತೆ ವಹಿಸಿ ಕೃತಿಗಳನ್ನು ಲೋಕಾರ್ಪಣೆ ಮಾಡಿದವರು ಶ್ರೀ ನಾಗೇಶ ಹೆಗಡೆ. ಶ್ರೀಮತಿ ಬಿ. ಕೆ. ಸುಮತಿ ಕಾರ್ಯಕ್ರಮ ನಿರ್ವಹಣೆಯೊಂದಿಗೆ ಆರೂ ಕೃತಿಗಳನ್ನು ಸಭೆಗೆ ಪರಿಚಯಿಸಿದರು. ಮುಖ್ಯ ಅತಿಥಿಯಾಗಿ ಕೆ. ಎಂ. ಚಿಣ್ಣಪ್ಪ (ನಿವೃತ್ತ ಅರಣ್ಯಾಧಿಕಾರಿ) ಭಾಗವಹಿಸಿದ್ದರು. ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರೊಂದಿಗೆ ಲೇಖಕರು – ಅನುವಾದಕರು ವೇದಿಕೆಯಲ್ಲಿ ಉಪಸ್ಥಿತರಿದ್ದರು.






# ಸವೆದ ಹಾದಿ

ಇತ್ತೀಚಿಗೆ ಹುಟ್ಟಿದ ಮರಿಗಳ ಪ್ರಕಾರ
ನಾನೊಬ್ಬ ಗವಿ ಮಾನವ.

ಕಡ್ಡಿ ಮುರಿದಂತೆ ಮಾತಾಡುವುದು ಈಗ ಮೂರ್ಖತನದ ಚಿನ್ಹೆ.
ಗೆರೆಯಿಲ್ಲದ ಹಣೆ
ಮಿಡಿಯದ ಹೃದಯದ ಸೂಚಿ.
ನನ್ನ ನೋಡಿ ನಗುವ ಜನ ಈ ಅತಿಕ್ರೂರ ಸುದ್ದಿ ಕೇಳಿಲ್ಲ ಅಷ್ಟೆ.

ಹಸಿರುಮರಗಳನ್ನು ಉಳಿಸುವ ಬಗ್ಗೆ ಮಾತಾಡುವುದು ಈಗ ಒಂದು ಪಾಪ.
ಯಾಕೆಂದರೆ ಆ ಮಾತು ನೂರೊಂದು ದುಷ್ಕೃತ್ಯಗಳ ಮೇಲೊಂದು
ಬಿಳಿಗವಸಣಿಗೆ
ಹಾಸುತ್ತದೆ.
ಯಾಕೆಂದರೆ ಹವಾಗುಣಕ್ಕನುಸಾರ ವಸ್ತ್ರ ಧರಿಸಿ
ನಿರಾಳವಾಗಿ ರಸ್ತೆ ದಾಟುತ್ತಿರುವ ಆ ಮನುಷ್ಯ
ಬಹುಶಃ ಹಸಿವಿನಿಂದ ಸಾಯುತ್ತಿರುವ ತನ್ನ ಸಹಜೀವಿಗಳಿಂದ
ನೂರಾರು ಅಡಿ ದೂರವಿದ್ದಾನೆ.

ನನಗೇನೋ ಕಯ್ತುಂಬ ಕೆಲಸವಿದೆ; ಜೇಬು ತುಂಬ ಹಣ ಇದೆ.
ಅದೊಂದು ಆಕಸ್ಮಿಕ ಅಷ್ಟೆ.
ನನ್ನ ಬಾಳ್ವೆ ಹೊಟ್ಟೆ ತುಂಬುವಷ್ಟು ತಿನ್ನುವ ಹಕ್ಕನ್ನು ನನಗೆ ಪಾಲಿಸಿಲ್ಲ.
ನನ್ನ ಅದೃಷ್ಟ ಯಾವಾಗ ಕಳಚಿಕೊಳ್ಳುವುದೋ ಯಾರಿಗೆ
ಗೊತ್ತು ?

ನನ್ನ ಸ್ನೇಹಿತರು ಅನ್ನುತ್ತಾರೆ : "ತಿಂದು ಕುಡಿದು ಆರಾಮಾಗಿರು.
ತಿನ್ನಲು, ಕುಡಿಯಲು ಇದೆ ಅಂತ ತೃಪ್ತಿಯಿಂದಿರು."

ಇಲ್ಲದವರ ಕಯ್ಯಿಂದ ಕಿತ್ತು ತಿನ್ನುತ್ತಿರುವ ನಾನು ಹೇಗೆ ತೃಪ್ತಿಯಿಂದ ತೇಗುತ್ತಿರಲಿ ?
ಈ ಲೋಟದಲ್ಲಿರುವ ನೀರೋ ಯಾರೋ ಬಾಯಾರಿಕೆಯಿಂದ ನರಳುತ್ತಿರುವ
ವ್ಯಕ್ತಿಯದು.

ನಾನೇನು ನರಳುತ್ತಿಲ್ಲ
ನನಗೊಂದಿಷ್ಟು ತಿಳುವಳಿಕೆ ಬೇಕು.

ಪುಸ್ತಕಗಳ ಪ್ರಕಾರ ತಿಳುವಳಿಕೆ :
ಬದುಕಿನ ಸೆಳೆತಗಳಲ್ಲಿ
ತೇಲು. "ಈಸಬೇಕು, ಇದ್ದು ಜಯಿಸಬೇಕು."
ಕ್ಷೋಭೆಯಿಂದ ದೂರವಿರು. ಹೆದರದೆ ಬಾಳು. ಹಿಂಸೆಯನ್ನು ಬಿಡು.
ಕೆಟ್ಟವರಿಗೆ ಒಳ್ಳೆಯದನ್ನು ಮಾಡು. "ಆಸೆಯೇ ದುಃಖಕ್ಕೆ ಮೂಲ," ಇತ್ಯಾದಿ,
ಈ ತಿಳುವಳಿಕೆಯ ಸಾರ.

ಮಾಡುವದು ಹೇಳುವಷ್ಟು ಸುಲಭವಲ್ಲ, ಸ್ನೇಹಿತರೆ.
ನಾನೊಬ್ಬ ಗವಿ ಮಾನವ.

೨

ಹಳ್ಳಿ ಬಿಟ್ಟು ನಾನು ಪಟ್ಟಣ ಸೇರಿದಾಗ
ಹಸಿವು ತಾಂಡವನರ್ತನ ಮಾಡುತ್ತಿತ್ತು. ಎಲ್ಲೆಲ್ಲೂ ಗೊಂದಲ;
ಎಲ್ಲೆಲ್ಲೂ ಹಿಂಸೆ
ಹೋರಾಟಗಾರರೊಡನೆ
ಹೊಡೆದಾಡಿದೆ.
ಒಂದಷ್ಟು ಬದುಕು ಹೀಗೆ ಕಳೆಯಿತು.

ಸಮರಗಳ ನಡುವೆ ಎರಡು ಹಿಡಿ ಅನ್ನ ನುಂಗುತ್ತ
ಪ್ರಕೃತಿಯ ಸೌಂದರ್ಯಕ್ಕೆ ಕುರುಡನಾಗಿ
ಒಂದಷ್ಟು ಬದುಕ ಹಾಗೆ ಕಳೆದೆ.

ಎಲ್ಲ ಹಾದಿಗಳು ಕೆಸರಿನಲ್ಲಿ ಕೊನೆಗೊಂಡವು.
ನನ್ನ ಭಾಷೆ ಆಗಿತ್ತು ಕಟುಕರಿಗೆ ರಹದಾರಿ.
ನಾನೇನು ಮಾಡಬೇಕಿತ್ತು ?
ಕಾಲ ಹೀಗೆ ಕಳೆಯಿತು.

ನಮ್ಮ ಪಡೆಗಳು ನಿತ್ರಾಣಿಗಳು.
ಗುರಿ ಕಣ್ಣೆದುರಿಗಿದ್ದರೂ
ಅದನ್ನು ತಲಪುವ ಸ್ಥಿತಿಯಲ್ಲಿ ನಾವಿರಲಿಲ್ಲ.
ಕಳೆಯಿತು
ಬದುಕು ಹೀಗೆ.

೩

ಆಕಾಲದ ಪ್ರವಾಹದ ಸೆಳೆತದಿಂದ ಹೊರಬಂದಿರುವ ನೀವು
ನಿಮಗೆ ವಕ್ಕರಿಸಿಕೊಳ್ಳದ ದುಃಸ್ವಪ್ನಗಳ ಬಗ್ಗೆ ಒಂದಿಷ್ಟು ಯೋಚನೆಮಾಡಿ.
ಪಾದರಕ್ಷೆಗಳಿಗಿಂತ ನಾವು ದೇಶಗಳನ್ನೇ ಬದಲಾಯಿಸಿದ್ದು ಹೆಚ್ಚು.
ವರ್ಗಹೋರಾಟದ ಇಕ್ಕಳದಲ್ಲಿ ನಲುಗಿದ ನಮಗೆ ಕಂಡದ್ದು ಅನ್ಯಾಯ.
ಅದನ್ನೆದುರಿಸುವ ಧೈರ್ಯ ನಾವು ಕಂಡದ್ದು ಸೊನ್ನೆ.
ನಮಗರ್ಥವಾದದ್ದು ಇಷ್ಟು :

ಅನ್ಯಾಯದ ವಿರುದ್ಧ ದ್ವೇಷ ಕೂಡ ನಮ್ಮನ್ನೇ ವಿರೂಪಿಸಬಲ್ಲದು.
ಅದು ನಮ್ಮ ಸೊಲ್ಲನ್ನು ಕರ್ಕಶಗೊಳಿಸಬಲ್ಲದು.
ಸ್ನೇಹದ ಸೇತುವೆ ಕಟ್ಟಬಯಸಿದ ನಾವೇ ದ್ವೇಷದ ಇಟ್ಟಿಗೆಗಳನ್ನು
ಬಳಸಿದೆವು.

ಬಾಂಧವರೆ...
ಮಾನವೀಯತೆ ಮಾನವೀಯತೆಯೊಂದಿಗೆ ಬೆಸುಗೆ
ಹೊಂದುವ ಕಾಲ ಬಂದಾಗ
ನಮ್ಮ ಮೇಲಿರಲಿ ನಿಮ್ಮ ಕರುಣೆ.

---

ಮೂಲ : **ಬರ್ಟೋಲ್ಟ್ ಬ್ರೆಕ್ಟ್** ✴ ಕನ್ನಡಕ್ಕೆ : **ಡಿ. ಎಸ್. ಹಾಸನ**

# ಸುಬ್ರಹ್ಮಣ್ಯ ಭಾರತಿಯವರ ಸ್ತ್ರೀಪರ ಚಿಂತನೆಗಳು

"ಸ್ತ್ರೀಯರ ಜ್ಞಾನ ಮತ್ತು ಇಚ್ಛಾಶಕ್ತಿಯ ಮೂಲಕ ದೇಶವನ್ನು ಉತ್ತುಂಗ ಸ್ಥಿತಿಗೇರಿಸಬೇಕೆಂಬ ಮೇರೆಯಿಲ್ಲದ ಆಸೆಯನ್ನು ಹೊಂದಿರುವವನು ನಾನು" ಎಂದು ಉಚ್ಚಮನಸ್ಸಿನಿಂದ ಉದ್ಘೋಷಿಸಿದವರು ತಮಿಳು ಕ್ರಾಂತಿಕವಿ ಸುಬ್ರಹ್ಮಣ್ಯ ಭಾರತಿ. ಇವರ ಕಾಲ ಕ್ರಿ. ಶ. ೧೮೮೨–೧೯೨೧. ಬ್ರಿಟಿಷರ ಬಿಗಿಮುಷ್ಟಿಯಲ್ಲಿ ದೇಶವು ಅರಾಜಕತೆಯನ್ನೆದುರಿಸುತ್ತಿದ್ದ ಕಾಲವದು. ಭಾರತದ ಈ ದುಸ್ಥಿತಿಯಲ್ಲಿ ಸ್ತ್ರೀ ಬದುಕು ಅತ್ಯಂತ ದುಸ್ತರವಾಗಿತ್ತು. ಹಲವಾರು ಕಲುಷಿತ ಕಟ್ಟುಪಾಡುಗಳ ಮೂಲಕ ಮನೆಯ ನಾಲ್ಕು ಗೋಡೆಯ ಮಧ್ಯೆ ಸ್ತ್ರೀ ಬದುಕು ಬಂಧಿಯಾಗಿತ್ತು. ದೇಶದ ದುಸ್ಥಿತಿಗೆ ಸ್ತ್ರೀ ನಿರ್ಲಕ್ಷ್ಯತೆಯೂ ಒಂದು ಕಾರಣವಾಗಿತ್ತು.

ಸ್ತ್ರೀ ಶಕ್ತಿಯನ್ನು ಉದ್ದೀಪನಗೊಳಿಸಿ ಸಮಾಜದ ಒಳಿತಿಗೆ ಸದುಪಯೋಗಪಡಿಸಿಕೊಳ್ಳುವ ಬದಲು ಅವಳ ಶಕ್ತಿಯು ಕಮರಿಹೋಗುವಂಥ ವ್ಯವಸ್ಥೆಯ ನಿರ್ಮಾಣವಾಗಿತ್ತು. ಅವಳು ಕೈಲಾಗದವಳು, ಅಬಲೆ, ದುರ್ಬಲೆ, ಕೆಲಸಕ್ಕೆ ಬಾರದವಳು ಎಂಬುದಾಗಿ ಶತಶತಮಾನಗಳಿಂದ ಹೀನಾಯವಾಗಿ ನಡೆಸಿಕೊಂಡು ಬರಲಾಗಿತ್ತು. ಅವಳು ಪುರುಷನಷ್ಟೇ ಸಮಬಲಳು, ಅವಳ ಬದುಕು ನಾಲ್ಕು ಗೋಡೆಯ ಮಧ್ಯೆ ಕಮರಿಹೋಗದೆ ಆರೋಗ್ಯಕರ ಜೀವನ ನಡೆಸುವಂತಾಗಬೇಕು; ಅವಳಿಗೂ ಸೂಕ್ತರೀತಿಯ ಶಿಕ್ಷಣ ತರಪೇತಿಗಳು ಲಭ್ಯವಾಗಿ ಆರೋಗ್ಯಕರವಾದ ಜೀವನ ನಡೆಸುವಂತಾಗಬೇಕು ಮತ್ತು ಅವಳ ಉದ್ಧಾರಕ್ಕೆ ಸರ್ವಪ್ರಯತ್ನಗಳು ವ್ಯಾಪಕವಾಗಿ ಆಗಬೇಕು ಎಂಬ ನಿಟ್ಟಿನಲ್ಲಿ ಹೋರಾಡಿದ ಅನೇಕ ಮಹನೀಯರುಗಳಲ್ಲಿ ಸುಬ್ರಹ್ಮಣ್ಯ ಭಾರತಿಯವರೂ ಒಬ್ಬರು. ತಮ್ಮ ಸದೃಢ ಸಾಮಾಜಿಕ ಚಿಂತನೆಗಳಿಂದ, ಉಜ್ವಲ ದೇಶಪ್ರೇಮದಿಂದ ನಾಡು–ನುಡಿ ಹಿತಾಸಕ್ತಿ ಹೋರಾಟಗಳಿಂದ, ಸ್ತ್ರೀವಾದಿ ಚಿಂತನೆಗಳಿಂದ ಪ್ರಸಿದ್ಧಿ ಪಡೆದ ಭಾರತಿಯವರು ಸ್ತ್ರೀ ಶಿಕ್ಷಣ, ಸ್ತ್ರೀ ಸ್ವಾತಂತ್ರ್ಯ, ಸ್ತ್ರೀ ಸಮಾನತೆಗಳ ವಿಚಾರಗಳನ್ನು ತಮ್ಮ ಪರಮಗುರಿಯನ್ನಾಗಿಸಿಕೊಂಡು ಹೋರಾಡಿದವರು.



> "ದಿಟ್ಟ ನಡಿಗೆ, ನೇರ ದೃಷ್ಟಿ, ಜ್ಞಾನದ ಅಹಂಕಾರದಿಂದ ಧರೆಯಲ್ಲಿ ಯಾರಿಗೂ ಅಂಜದ ಸ್ವಭಾವ, ಇವುಗಳನ್ನು ಹೊಂದಿರುವ ಹೆಣ್ಣು ಎಂದಿಗೂ ದಾರಿ ತಪ್ಪುವುದಿಲ್ಲ." ಆದ್ದರಿಂದ "ಕಲೆಯೇ ಇಲ್ಲದ ಅಜ್ಞಾನದಿಂದ ಕೂಡಿದ ನಿನ್ನ ಕತ್ತಲೆಯ ಬದುಕಿಗೆ 'ಥೂ' ಎಂದು ಉಗಿದು ಹೊರಗೆ ಬಾ" ಎಂದು ದಿಟ್ಟತನದ ಕರೆ ನೀಡುತ್ತಾರೆ. ಹೀಗೆ ಮಹಿಳೆಯರು ಹೊರಬಂದು ನೈತಿಕತೆಯನ್ನು ಮೈಗೂಡಿಸಿಕೊಳ್ಳುವ ಶಿಕ್ಷಣವನ್ನು ಪಡೆದು, ಸ್ವಾಭಿಮಾನ, ಸ್ವಾಯತ್ತತೆ, ಸ್ವಾವಲಂಬನೆಗಳನ್ನು ಪಡೆದು ದೇಶದ ಉನ್ನತಿಗೆ ಕಾರಣರಾಗಬೇಕೆಂದು ಕವಿಯು ತಮ್ಮ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ.

ತಲೆಮಾರುಗಳಿಂದ ರೂಢಿಯಲ್ಲಿ ಬಂದಿದ್ದ ಸ್ತ್ರೀಪರ ನಿಷ್ಕಾಳಜಿಯನ್ನು ಬೇರುಸಹಿತ ಕಿತ್ತೊಗೆದು ವೇದಗಳ ಕಾಲದ ಸ್ತ್ರೀ ಸ್ಥಾನಮಾನಗಳನ್ನು ಪುನರ್‌ಸ್ಥಾಪಿಸಲು ಯತ್ನಿಸಿದವರು. ಒಬ್ಬ ಕವಿಯಾಗಿ, ಪತ್ರಿಕಾ ಸಂಪಾದಕರಾಗಿ ಕವಿತೆಗಳ ಮೂಲಕ ತಮ್ಮ ಸ್ತ್ರೀಪರ ಚಿಂತನೆಗಳನ್ನು, ಕಾಳಜಿಗಳನ್ನು, ನಿಲುವು, ಧೋರಣೆಗಳನ್ನು ವ್ಯಕ್ತಪಡಿಸಿದುದು ಮಾತ್ರವಲ್ಲದೆ ಸ್ತ್ರೀ ವಿಮೋಚನಾ ಸಂಘ (ಪೆಣ್ ವಿಡುದಲೈ ಕಟ್ಟಿ) ಎಂಬ ಸ್ತ್ರೀ ಸಂಘವನ್ನು ಸ್ಥಾಪಿಸಿ ಅದರ ಮೂಲಕ ಸ್ತ್ರೀಯರಿಗೆ ತಮ್ಮ ಹಕ್ಕುಗಳ ಪರವಾಗಿ ಹೋರಾಡುವ, ಸ್ವಾತಂತ್ರ್ಯ ಚಳವಳಿಯಲ್ಲಿ ಪಾಲ್ಗೊಳ್ಳುವ ಅವಕಾಶಗಳನ್ನು ದೊರಕಿಸಿಕೊಟ್ಟು ಇಚ್ಛಾಶಕ್ತಿಯ ಕೊರತೆಯಿಂದ ಬಳಲುತ್ತಿದ್ದ ನಾರಿಯರನ್ನು ಸಮಾಜದ ಮುಖ್ಯವಾಹಿನಿಗೆ ಕರೆತರುವಲ್ಲಿ ಯತ್ನಿಸಿದ ಶ್ರೇಷ್ಠರಲ್ಲಿ ಒಬ್ಬರು.

ಇವರ ಸ್ತ್ರೀಪರ ಚಿಂತನೆಗಳನ್ನು ಬಲಪಡಿಸುವಲ್ಲಿ ಸಹಕರಿಸಿದ ಇಬ್ಬರು ಮಹಿಳಾಮಣಿಗಳೆಂದರೆ ಶ್ರೀಮತಿ ಆ್ಯನಿ ಬೆಸೆಂಟ್ ಮತ್ತು ಸಿಸ್ಟರ್ ನಿವೇದಿತಾ. ಇಬ್ಬರೂ ಹೊರನಾಡಿನಿಂದ ಬಂದು ಭಾರತದ ಉಜ್ವಲ ಸಾಂಸ್ಕೃತಿಕ ಪರಂಪರೆಯಿಂದ ಪ್ರೇರಿತರಾಗಿ ಭಾರತೀಯ ಸಮುದಾಯವನ್ನು ಮೇಲೆತ್ತಲು ಪ್ರಯತ್ನಿಸಿದವರು.

೧೯೦೬ರಲ್ಲಿ ಕಾಶಿ ಕಾಂಗ್ರೆಸ್ ಸಮಾವೇಶಕ್ಕೆಂದು ತೆರಳಿ ಹಿಂದಿರುಗಿ ಬರುವ ಹಾದಿಯಲ್ಲಿ ಕಲ್ಕತ್ತದ ಡಂಡಂ ನಗರದಲ್ಲಿ ಸಿಸ್ಟರ್ ನಿವೇದಿತಾ ಅವರನ್ನು ಭಾರತಿಯವರು ಸಂಧಿಸುತ್ತಾರೆ. ನಿವೇದಿತಾರವರು ಭಾರತಿಯವರನ್ನು, "ನಿನ್ನ ಮಡದಿಯನ್ನು ಏಕೆ ನಿನ್ನೊಡನೆ ಕರೆತಂದಿಲ್ಲ?" ಎಂದು ಕೇಳುತ್ತಾರೆ. ಅದಕ್ಕೆ

**ಎಂ. ಪಿ. ರೇಣುಕಾದೇವಿ**

ಭಾರತಿಯವರು, "ಇನ್ನೂ ನಮ್ಮ ಮಡದಿಯರನ್ನು ನಮಗೆ ಸರಿಸಮವಾಗಿ ನಾವು ಹೋಗುವ ಸ್ಥಳಗಳಿಗೆಲ್ಲಾ ಕರೆದುಕೊಂಡು ಹೋಗುವುದು ರೂಢಿಯಲ್ಲಿಲ್ಲ" ಎಂದು ನುಡಿದು, ಮೇಲಾಗಿ "ಸಮಾವೇಶಕ್ಕೆ ಅವಳನ್ನು ಕರೆದುಕೊಂಡು ಹೋಗುವ ಪ್ರಯೋಜನವಾದರೂ ಏನು?" ಎಂದರಂತೆ. "೨೫ ವರ್ಷದ ಭಾರತಿಯವರ ಬಾಯಲ್ಲಿ ಇಂಥ ಒಂದು ಅಭಿಪ್ರಾಯವು ಬರುವುದು ನನಗೆ ಆಶ್ಚರ್ಯ ತರುತ್ತಿದೆ" ಎಂದ ನಿವೇದಿತಾ, "ಮಗನೇ, ಪುರುಷರನೇಕರು ತಾವು ಎಷ್ಟೇ ಓದಿದ್ದರೂ ಯಾವುದೋ ಒಂದು ಅರಿಯಲಾಗದ ಸ್ವಾರ್ಥದಿಂದ ಹುಚ್ಚು ಹಿಡಿಸಿಕೊಂಡವರು. ಸ್ತ್ರೀಯರನ್ನು ತಮ್ಮ ಗುಲಾಮರನ್ನಾಗಿಸಿ ಕೊಂಡು ಕೊಬ್ಬಿದವರು. ದೇಶದಲ್ಲಿ ಯಾವುದೇ ಬೃಹತ್ ಕೆಲಸವು ಸ್ತ್ರೀಯರ ಮನೋಬಲವಿಲ್ಲದೆ ಕೈಗೂಡಲಾರದು. ಕತ್ತಲೆಯಲ್ಲಿ ತಳ್ಳಿ ಅವಳನ್ನು ಅರಿಯುವ ಗೊಡವೆಗೆ ಹೋಗದ ನೀನು ಉನ್ನತ ಸ್ಥಿತಿಗೆ ಬರಲು ಪ್ರಯತ್ನಿಸುವುದು ವ್ಯರ್ಥ. ಆದ್ದರಿಂದ ಅವಳನ್ನು ನಿನ್ನದೇ ಒಂದು ಭಾಗವೆಂದು ತಿಳಿದು ಗೌರವಿಸಿ, ಅವಳಿಗೆ ಸಮಾನ ಹಕ್ಕುಗಳನ್ನು ಕೊಡಿಸುವಲ್ಲಿ ಮತ್ತು ಅವಳಿಗೂ ಶಿಕ್ಷಣವನ್ನು ನೀಡುವ ನಿಟ್ಟಿನಲ್ಲಿ ಶ್ರಮಿಸು. ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡುವ ಬದಲು ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಹೋರಾಡು. ದೇಶಕ್ಕೆ ನಿರಾಯಾಸವಾಗಿ ಸ್ವಾತಂತ್ರ್ಯ ಸಿಗುತ್ತದೆ" ಎಂದು ನುಡಿದು, "ಈ ಮಾತುಗಳು ಒಬ್ಬೊಬ್ಬ ದೇಶಾಭಿಮಾನಿಯ ಮನಸ್ಸಿನಲ್ಲಿ ಅಚ್ಚಾಗಬೇಕೆಂದು ಆಶಿಸುತ್ತೇನೆ" ಎಂದರಂತೆ. ಈ ಮಾತುಗಳು ಭಾರತಿಯವರ ಸಂಕಲ್ಪಕ್ಕೆ ಪುಷ್ಟಿಯಾಯಿತು.




ಭಾರತಿಯವರ ಸ್ತ್ರೀ ವಿಮೋಚನೆ, ಸ್ತ್ರೀ ಸಮಾನತೆಯ ಚಿಂತನೆಗಳನ್ನು 'ಪೆಣ್ ವಿಡುದಲೈ', 'ಪೆಣ್‌ಗಳ್ ವಿಡುದಲೈ ಕುಮ್ಮಿ', 'ಪುದುಮೈ ಪೆಣ್' ಎಂಬ ಕವಿತೆಗಳು ವ್ಯಕ್ತಪಡಿಸುತ್ತವೆ.

ಶಿಕ್ಷಣವಿಲ್ಲದೆ, ತನ್ನತನದ ಅರಿವಿಲ್ಲದೆ ಪುರುಷ ಪ್ರಾಧಾನ್ಯತೆಯನ್ನು ಒಪ್ಪಿಕೊಂಡು, ಅಭಿಮಾನಶೂನ್ಯದಿಂದ ಪಶುವಿನಂತೆ ಬದುಕುತ್ತಿರುವ ಸ್ತ್ರೀಯರ ಕರಾಳ ಬದುಕನ್ನು ಅವರ ಕೆಳಗಿನ ಸಾಲುಗಳು ವ್ಯಕ್ತಪಡಿಸುತ್ತವೆ :

"ಒಳ್ಳೆಯ ಬೆಲೆಗೆ ನಾಯಿಯನ್ನು ಮಾರುವವರು ಅದರ ಒಪ್ಪಿಗೆಯನ್ನು ಕೇಳುವರೋ? ಅದೇ ಸ್ಥಿತಿಯಲ್ಲಿರುವ ನಮ್ಮನ್ನು ಕೊಲ್ಲುವುದೇ ಮೇಲು. ಅಪಕೀರ್ತಿಯ ಭಯ ಅವರನ್ನು ಹಾಗೆ ಮಾಡದೆ ಬಿಟ್ಟಿದೆ."

"ದನಗಳ ಕೊಟ್ಟಿಗೆಯೇ ನಮ್ಮಗಳ ಎಡೆಯೆಂದು ತೋರಿಸಲು ಬಂದವರಿಗೆ ಹಟ್ಟಿಯನ್ನೇ ಅಳಿಸಿ ತೋರಿಸಿದೆವು."

"ಹೆಣ್ಣುಮಕ್ಕಳು ಪುಸ್ತಕವನ್ನು ಮುಟ್ಟುವುದು ಕೆಟ್ಟದ್ದು ಎಂದು ಹೇಳಿದವರು ಮಾಯವಾದರು, ಮನೆಯಲ್ಲಿಯೇ ಹೆಣ್ಣನ್ನು ಕೂಡಿಹಾಕಿ ಇಡುವೆವು ಎನ್ನುವವರು ತಲೆ ಕವುಚಿ ಬಿದ್ದರು" ಎಂಬ ಮಾತುಗಳು ಅಸ್ವಾಭಾವಿಕ ಮತ್ತು ಅಲ್ಪತೆಯಿಂದ ಕೂಡಿದ ಸ್ತ್ರೀ ಬದುಕನ್ನು ಚಿತ್ರಿಸುತ್ತವೆ. ಇಂಥ ಬದುಕಿನಿಂದ ಹೊರಬರುವ ಅವಳ ಕುರಿತ ಹಂಬಲದ ಮಾತುಗಳು ಕೆಳಗಿನ ಸಾಲುಗಳಲ್ಲಿ ವ್ಯಕ್ತವಾಗುತ್ತವೆ :

"ಕೆಸರಿನಲ್ಲಿ ಹುಟ್ಟಿದ ಸುಂದರವಾದ ಕಮಲದಂತೆ ಕಂಗೊಳಿಸುತ್ತಿರುವ ನೀನು ಸ್ವಾತಂತ್ರ್ಯ ಭೇರಿಗೆಯನ್ನು ಬಾರಿಸಲು ಬಂದಿರುವೆ. ಭಾರತ ದೇಶದ ಕಷ್ಟವನ್ನು ನೀಗಿಸಲು ಬಂದಿರುವ ನೀನು ವರ್ಧಿಸು."

"ನಿನ್ನ ಸುಂದರವಾದ ಬಾಯಿಂದ ಹೊರಟ, 'ಹೆಣ್ಣಿಗೆ ಉಂಟು ಸ್ವಾತಂತ್ರ್ಯ' ಎನ್ನುವ ಮಾತುಗಳು ನಾರದನ ವೀಣೆಯ ದನಿಯಂತೆ, ಕೃಷ್ಣನ ವೇಣುಗಾನದಂತೆ ಇಂಪಾಗಿ ಕೇಳಿಸುತ್ತಿವೆ."

"ಹೆಣ್ಣು, ಗಂಡು ಸಮಾನರೆಂದು ಹೇಳುವವರ ಅರಿವು ವೃದ್ಧಿಸುತ್ತದೆ"

"ನಾಚಿಕೆ, ಭಯ ನಾಯಿಗಳಿಗೆ ಬೇಕು. ಜ್ಞಾನ, ಸನ್ನಡತೆ, ಶೌರ್ಯ, ಸ್ವಾತಂತ್ರ್ಯ, ವೀರ ಸ್ತ್ರೀಯರ ಗುಣಗಳು"

"ಈ ಮೇದಿನಿಯಲ್ಲಿ ಹೆಣ್ಣು, ಪದವಿ ಪಟ್ಟಗಳನ್ನು ಹೊರುವುದು, ನೀತಿನಿಯಮಗಳನ್ನು ಸೃಷ್ಟಿಸುವುದು ಹಿಂದಿನಿಂದಲೂ ನಡೆದುಬಂದಿದೆ. ಅನ್ನವನ್ನು ಮಾಡುವುದಕ್ಕೂ, ಪುರುಷನ ಏಳಿಗೆಯನ್ನು ಸಾಧಿಸುವುದಕ್ಕೂ ಬರುತ್ತದೆ."

– ಈ ಮಾತುಗಳು ಸ್ವಾತಂತ್ರ್ಯ, ಸಮಾನತೆಗಳನ್ನು ಪಡೆದುಕೊಳ್ಳುವ ಹೆಣ್ಣಿನ ತೀವ್ರವಾದ ಹಂಬಲವನ್ನು ವ್ಯಕ್ತಪಡಿಸುವುದು ಮಾತ್ರವಲ್ಲದೆ, ತನ್ನ ಸಬಲತೆಯನ್ನು ಪ್ರದರ್ಶಿಸುವ, ತನ್ನ ಹಕ್ಕುಗಳನ್ನು ಪಡೆದುಕೊಳ್ಳುವ ದಿಟ್ಟತನವನ್ನೂ ವ್ಯಕ್ತಪಡಿಸುತ್ತವೆ. ಇಂಥ ಸಬಲೆಯು ರಾಜಕೀಯವಾಗಿ, ಸಾಮಾಜಿಕವಾಗಿ ಸಫಲಳಾಗಲು ಹೊಸ ಬಗೆಯ ಹೆಣ್ಣಾಗಿ ಮಾರ್ಪಡಬೇಕು ಎಂದು ಆಶಿಸುವ ಕವಿಯು ಹೊಸತನವನ್ನು ಹೊಂದುವ ಬಗೆಯನ್ನು ಹೀಗೆ ಸೂಚಿಸುತ್ತಾರೆ :

"ದಿಟ್ಟ ನಡಿಗೆ, ನೇರ ದೃಷ್ಟಿ, ಜ್ಞಾನದ ಅಹಂಕಾರದಿಂದ ಧರೆಯಲ್ಲಿ ಯಾರಿಗೂ ಅಂಜದ ಸ್ವಭಾವ, ಇವುಗಳನ್ನು ಹೊಂದಿರುವ ಹೆಣ್ಣು ಎಂದಿಗೂ ದಾರಿ ತಪ್ಪುವುದಿಲ್ಲ." ಆದ್ದರಿಂದ "ಕಲೆಯೇ ಇಲ್ಲದ ಅಜ್ಞಾನದಿಂದ ಕೂಡಿದ ನಿನ್ನ ಕತ್ತಲೆಯ ಬದುಕಿಗೆ 'ಥೂ' ಎಂದು ಉಗಿದು ಹೊರಗೆ ಬಾ" ಎಂದು ದಿಟ್ಟತನದ ಕರೆ ನೀಡುತ್ತಾರೆ. ಹೀಗೆ ಮಹಿಳೆಯರು ಹೊರಬಂದು ನೈತಿಕತೆಯನ್ನು ಮೈಗೂಡಿಸಿಕೊಳ್ಳುವ ಶಿಕ್ಷಣವನ್ನು ಪಡೆದು, ಸ್ವಾಭಿಮಾನ, ಸ್ವಾಯತ್ತತೆ, ಸ್ವಾವಲಂಬನೆಗಳನ್ನು ಪಡೆದು ದೇಶದ ಉನ್ನತಿಗೆ ಕಾರಣರಾಗಬೇಕೆಂದು ಕವಿಯು ತಮ್ಮ ಕಳಕಳಿಯನ್ನು ವ್ಯಕ್ತಪಡಿಸುತ್ತಾರೆ : "ಹಲವು ಪುಸ್ತಕಗಳನ್ನು ಓದಿ, ನಾಲ್ದೆಸೆಯ ನಾಡುಗಳನ್ನು ಸುತ್ತಿ, ಹಲವು ಶಾಸ್ತ್ರಗಳನ್ನು ಓದಿ, ಹಲವು ಕಲೆಗಳನ್ನು ಕಲಿತು, ನಾವೀನ್ಯತೆ ಬೆಳಗಬೇಕು" ಎಂಬ ಮಾತುಗಳಲ್ಲಿ ತತ್ಕಾಲದ ರಾಜಕೀಯ ಬಂಧವಿಮೋಚನೆಯಲ್ಲಿ ಸ್ತ್ರೀಯರ ಪಾಲ್ಗೊಳ್ಳುವಿಕೆ ಅವಶ್ಯವಾಗಿದ್ದು, ಅದರ ಬಗ್ಗೆ ಸೂಕ್ತ ತರಬೇತಿಯನ್ನು ಪಡೆಯಬೇಕೆಂಬ ಇಚ್ಛೆಯ ಜೊತೆಗೆ ದೇಶದ ಸಾಂಸ್ಕೃತಿಕ ಹಿರಿಮೆಯನ್ನು ಹೆಚ್ಚಿಸುವ ಅಭಿಲಾಷೆಯನ್ನು ವ್ಯಕ್ತಪಡಿಸುತ್ತಾರೆ.

ಭಾರತಿಯವರು 'ಪೆಣ್ ವಿಡುದಲೈ ಕಟ್ಚಿ' ಎಂಬ ಸ್ತ್ರೀ ಸಂಘವನ್ನು ಸ್ಥಾಪಿಸಿ ಸ್ತ್ರೀಯರ ಅನೇಕ ಹಕ್ಕುಗಳಿಗಾಗಿ ಹೋರಾಡಿದರು. ಅಂತೆಯೇ ಸ್ವರಾಜ್ಯ ಪಡೆವ ನಾಡಿನಲ್ಲಿ ಸ್ತ್ರೀಯರ ಹಕ್ಕುಗಳನ್ನು ಕುರಿತ ಸಂಹಿತೆಗಳನ್ನು ಕೆಳಗಿನಂತೆ ರೂಪಿಸುತ್ತಾರೆ :

೧. ಹೆಣ್ಣುಮಕ್ಕಳು ಪುಷ್ಪವತಿಯಾಗುವ ಮುನ್ನ ವಿವಾಹವಾಗಕೂಡದು.
೨. ತಾನು ಬಯಸಿದ ಪುರುಷನೊಡನೆ ವಿವಾಹವಾಗುವ ಹಕ್ಕು ಅವಳಿಗೆ ಇರುತ್ತದೆ.
೩. ವಿವಾಹದ ನಂತರ ಗಂಡನಿಂದ ವಿಚ್ಛೇದನ ಪಡೆಯಲು ಇಚ್ಛಿಸಿದರೆ ಕುಟುಂಬದವರು ಸಮ್ಮತಿ ಸೂಚಿಸಬೇಕು. ಅದನ್ನು ಕುರಿತು ಅವಮಾನಿಸಬಾರದು.
೪. ಪತಿ ಮರಣಹೊಂದಿದರೆ ಮರುಮದುವೆಯಾಗುವ ಅವಕಾಶ ಕಲ್ಪಿಸಬೇಕು.
೫. ಪುರುಷರೊಡನೆ ಮಾತನಾಡುವುದು, ಬೆರೆಯುವುದು ತಪ್ಪೆಂದು ಹೆದರಿಸುವುದು, ನಿರ್ಬಂಧ ಹೇರುವುದು ಕೂಡದು.
೬. ಪಿತ್ರಾರ್ಜಿತದಲ್ಲಿ ಹೆಣ್ಣಿಗೆ ಸಮಭಾಗ ಕೊಡಬೇಕು.
೭. ವಿವಾಹವಾಗದೆ ಒಂಟಿಯಾಗಿ ಇದ್ದು ವ್ಯಾಪಾರ, ಕೈಕೆಲಸ ಮುಂತಾದುವುಗಳನ್ನು ಮಾಡಲು ಇಚ್ಛಿಸಿದರೆ, ಅವರು ಗೌರವಯುತವಾಗಿ ಬದುಕಲು ಸೂಕ್ತ ಸ್ಥಳವನ್ನು ಏರ್ಪಡಿಸಿಕೊಡಬೇಕು.
೮. ಪುರುಷನಂತೆ ಹೆಣ್ಣಿಗೂ ಸಹ ಉನ್ನತ ಶಿಕ್ಷಣದ ಎಲ್ಲ ವಿಭಾಗಗಳಲ್ಲೂ ಸೂಕ್ತ ತರಬೇತಿ ದೊರೆಯುವಂತಾಗಬೇಕು.
೯. ಅರ್ಹತೆಯಿರುವ ಮಹಿಳೆಯರಿಗೆ ಆಡಳಿತದಲ್ಲಿ ಸೂಕ್ತ ಸ್ಥಾನಮಾನಗಳನ್ನು ನೀಡಬೇಕು.
೧೦. ಶೀಘ್ರವೇ ಸ್ವರಾಜ್ಯವು ದೊರೆತು, ಸ್ವರಾಜ್ಯದಲ್ಲಿ ಸ್ತ್ರೀಯರಿಗೆ ರಾಜ್ಯಾಂಗದ ಹಕ್ಕುಗಳು ದೊರೆಯುವಂತಾಗಬೇಕು.

ಹೀಗೆ ಭಾರತಿಯವರು ತಮ್ಮ ಸಮಕಾಲೀನ ಸ್ತ್ರೀಯರ ಆಸೆ ಅಭಿಲಾಷೆಗಳಿಗೆ ಸ್ಪಂದಿಸುವುದರ ಜೊತೆಗೆ ಅವರಲ್ಲಿ ವ್ಯಕ್ತಿತ್ವದ ಅರಿವನ್ನುಂಟುಮಾಡಿಸಿ ಅವರ ಕರಾಳ ಸ್ವರೂಪದ ಬದುಕನ್ನು ಹಸನುಗೊಳಿಸಲು ಶ್ರಮಿಸಿದುದು ಮಾತ್ರವಲ್ಲದೆ ಅದರ ಮೂಲಕ ಭಾರತ ದೇಶದ ಉನ್ನತಿಯನ್ನು ಸಾಧಿಸುವಲ್ಲಿ ಬಹಳವಾಗಿ ಶ್ರಮಿಸಿ 'ಪೆಣ್ ಉರಿಮೈ ಪೋರಾಳಿ' (ಸ್ತ್ರೀ ಹಕ್ಕುಗಳ ಹೋರಾಟಗಾರ) ಎಂಬ ಬಿರುದನ್ನು ಸಾರ್ಥಕಪಡಿಸಿಕೊಂಡಿದ್ದಾರೆ.

ಎಂ. ಪಿ. ರೇಣುಕಾದೇವಿ
ಸಂಶೋಧನ ವಿದ್ಯಾರ್ಥಿನಿ, ಪ್ರಾದೇಶಿಕ ಶಿಕ್ಷಣ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು






# ಚಿನ್ನ

ಡಾ|| ಜಯಂತಿ ಜೆ.

## ಚಿನ್ನದ ಆಮದಿನಿಂದ ಭಾರತದ ವ್ಯಾಪಾರ ಬಾಕಿಯ ಮೇಲಾಗುವ ಪರಿಣಾಮಗಳು ಹಾಗೂ ನಿಯಂತ್ರಣ

ವಿಶ್ವದಲ್ಲಿ ಭಾರತ ಅಧಿಕ ಪ್ರಮಾಣದ ಚಿನ್ನದ ಆಮದನ್ನು ಮಾಡಿಕೊಳ್ಳುತ್ತಿರುವ ರಾಷ್ಟ್ರಗಳಲ್ಲಿ ಒಂದಾಗಿದೆ. ಹೆಚ್ಚುತ್ತಿರುವ ಚಿನ್ನದ ಬೆಲೆಯ ನಡುವೆಯೂ ಭಾರತದ ಚಿನ್ನದ ಆಮದುಗಳು ಅಡೆತಡೆಯಿಲ್ಲದೆ ಮುಂದುವರಿಯುತ್ತಿವೆ. ಇತ್ತೀಚಿನ ಅವಧಿಯಲ್ಲಿ ಭಾರತದ ಚಿನ್ನದ ಆಮದುಗಳು ಭಾರತ ಸಂದಾಯ ಬಾಕಿಯ ಮೇಲೆ ತೀವ್ರವಾದ ಪರಿಣಾಮ ಗಳನ್ನು ಬೀರುತ್ತಿದೆಯೆಂದರೆ ತಪ್ಪಾಗಲಾರದು.

ಭಾರತದಲ್ಲಿ ಚಿನ್ನದ ಬೇಡಿಕೆ ಹಲವಾರು ಅಂಶಗಳ ಆಧಾರದ ಮೇಲೆ ನಿರ್ಧರಿಸಲ್ಪಡುತ್ತದೆ. ಮುಖ್ಯವಾಗಿ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ಅಂಶಗಳು ಚಿನ್ನದ ಬೇಡಿಕೆಯನ್ನು ನಿರ್ಧರಿಸುತ್ತವೆ. ಚಿನ್ನದ ಬೆಲೆ, ಆದಾಯದ ಹಂಚಿಕೆ ಕಪ್ಪುಹಣದ ಪ್ರಮಾಣ, ಬದಲಿ ಹಣಕಾಸಿನ ಆಸ್ತಿಗಳ ಮೇಲಿನ ಪ್ರತಿಫಲದ ದರ ಹಾಗೂ ಸಾಮಾನ್ಯ ಬೆಲೆಮಟ್ಟ ಇವು ಭಾರತದಲ್ಲಿ ಚಿನ್ನದ ಬೇಡಿಕೆಯನ್ನು ನಿರ್ಧರಿಸುವ ಪ್ರಮುಖ ಅಂಶಗಳಾಗಿವೆ. ಕಳೆದ ದಶಕದಲ್ಲಿ ಚಿನ್ನದ ಬೆಲೆ ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚುತ್ತಲೇ ಇದೆ. ಇಸವಿ ೨೦೦೦ದಿಂದ ಅಂತರರಾಷ್ಟ್ರೀಯ ಚಿನ್ನದ ಬೆಲೆ ಪ್ರತಿವರ್ಷ ಶೇಕಡ ೧೬.೩ರಷ್ಟು ದರದಲ್ಲಿ ಹೆಚ್ಚಿದೆ. ಇತ್ತೀಚಿನ ವರ್ಷಗಳಲ್ಲಿ ಭಾರತದಲ್ಲೂ ಚಿನ್ನದ ಬೆಲೆಯ ಏರಿಳಿತಗಳು ಅದಕ್ಕನುಗುಣವಾಗಿಯೇ ಇವೆ.

ಇತ್ತೀಚಿನ ಚಿನ್ನದ ಬೆಲೆ ಅಸ್ಥಿರತೆ ಭಾರತದ ವ್ಯಾಪಾರ ಬಾಕಿ ಕೊರತೆಯನ್ನು ಮತ್ತಷ್ಟು ಹದಗೆಡಿಸಿದೆ ಎಂದರೆ ಅತಿಶಯೋಕ್ತಿಯೇನಲ್ಲ. ಚಾಲ್ತಿ ಖಾತೆಯಲ್ಲಿನ ಕೊರತೆ ೨೦೧೧–೧೨ರಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇಕಡ ೪.೨ರಷ್ಟಿದೆ. ಹೀಗೆ ಚಿನ್ನದ ಆಮದುಗಳು ಭಾರತದ ವ್ಯಾಪಾರ ಬಾಕಿ ಕೊರತೆಯನ್ನು ಹೆಚ್ಚಿಸುತ್ತಿವೆ. ಚಿನ್ನದ ಸಾಲ ನೀಡುವ ಪೇಟೆಯಲ್ಲಿ ಸಾಕಷ್ಟು ಬದಲಾವಣೆಗಳೂ ಕಂಡುಬಂದಿವೆ. ಬ್ಯಾಂಕೇತರ ಹಣಕಾಸು ಸಂಸ್ಥೆಗಳು, ಬ್ಯಾಂಕು ಹಾಗೂ ಇತರ ಸಾಲಗಳ ಮೇಲೆ ಹೆಚ್ಚು ಅವಲಂಬಿತವಾಗಿವೆ.

ಬ್ಯಾಂಕೇತರ ಹಣಕಾಸು ಸಂಸ್ಥೆಗಳು ಚಿನ್ನದ ಸಾಲಗಳನ್ನು ಹಣಸಂಗ್ರಹಣೆಯ ಉತ್ತಮ ಸಾಧನ ವಾಗಿಸಿಕೊಂಡಿವೆ. ಚಿನ್ನದ ಬೆಲೆ ಏರಿಕೆಯಿಂದಾಗಿ ಚಿನ್ನದ ಸರಾಸರಿ ಸಾಲದ ಪ್ರಮಾಣ ಹೆಚ್ಚಿದೆ. ಇತ್ತೀಚಿನ ದಿನಗಳಲ್ಲಿ ಚಿನ್ನದ ಬೆಲೆಯ ಏರಿಳಿತಗಳು ಸಾಮಾನ್ಯ ಸಂಗತಿಯಾಗಿದೆ. ಮದುವೆ ಸೀಸನ್ ಬಂತೆಂದರೆ ಮೊದಲು ಎಲ್ಲರ ಗಮನ ಚಿನ್ನದ ಬೆಲೆಯತ್ತ. ಆದರೆ ಏಪ್ರಿಲ್ ೨೦೧೩ ಎರಡನೇ ವಾರ ಚಿನ್ನದ ಬೆಲೆ ೧೦ ಗ್ರಾಂಗೆ ೨೬,೨೫೦ ರೂ.ಗಳಿಗೆ ಕುಸಿಯುವ ಮೂಲಕ ಚಿನ್ನ ತನ್ನ ಹೊಳಪನ್ನು ಮತ್ತಷ್ಟು ಕಳೆದುಕೊಳ್ಳುವಂತಾಯಿತು. ಅಂತರ ರಾಷ್ಟ್ರೀಯವಾಗಿ ಲಂಡನ್ ಮಾರುಕಟ್ಟೆಯಲ್ಲಿ ಪ್ರತಿ ಔನ್ಸ್‌ಗೆ ೯೦.೭ ಡಾಲರ್‌ನಷ್ಟು ಇಳಿತ ಕಂಡಿತು. ಈ ರೀತಿಯ ಬೆಲೆ ಇಳಿಕೆ ಹಲವು ರೀತಿಯ ಪರಿಣಾಮಗಳಿಗೆ ದಾರಿ ಮಾಡಿಕೊಟ್ಟಿದೆ.

ಭಾರತದಲ್ಲಿ ಚಿನ್ನದ ಆಮದು ಶೇ. ೨೦ರಷ್ಟು ಹೆಚ್ಚಾಗಲಿದೆ. ಜತೆಗೆ, ಸರಿಸುಮಾರು ೧೮೩.೬ ಟನ್ನುಗಳಷ್ಟು ಹೆಚ್ಚಲಿದೆ. (ಏಪ್ರಿಲ್–ಜೂನ್, ೨೦೧೩) ಏಪ್ರಿಲ್ ೨೦೧೨ರಲ್ಲಿ ೭೧ ಟನ್ನುಗಳಷ್ಟು ಚಿನ್ನದ ಆಮದು ಕಂಡುಬಂದಿತ್ತು. ಚಿನ್ನದ ನಿರಂತರ ಬೇಡಿಕೆ ಚಿನ್ನದ ನಾಣ್ಯ ಮತ್ತು ಗಟ್ಟಿಗಳ ಕೊರತೆಗೆ ಕಾರಣ ವಾಗಿದೆ. ಇದರ ನಡುವೆ ಭಾರತದ ವ್ಯಾಪಾರ ಬಾಕಿಯ ಪರಿಸ್ಥಿತಿ ದಿನೇ ದಿನೇ ಹದಗೆಡುತ್ತಿರುವುದು ಆತಂಕದ ವಿಷಯವಾಗಿದೆ. ಇದರಿಂದಾಗಿ ಭಾರತೀಯ ರಿಸರ್ವ್ ಬ್ಯಾಂಕು ಚಿನ್ನದ ಸಾಲಗಳ ಮೇಲೆ ನಿಯಂತ್ರಣ ವಿಧಿಸಿದೆ. ಕೇವಲ ಆಭರಣ ರಫ್ತುದಾರರಿಗೆ ಮಾತ್ರ ಚಿನ್ನದ ಆಮದಿಗಾಗಿ ಸಾಲ ನೀಡಲಾಗುತ್ತಿದೆ. ಚಿನ್ನದ ನಾಣ್ಯಗಳ ಮೇಲಿನ ಸಾಲವನ್ನು ೫೦ ಗ್ರಾಂಗಳಿಗೆ ನಿಗದಿಪಡಿಸಲಾಗಿದೆ. ಹೆಚ್ಚುತ್ತಿರುವ ಚಾಲ್ತಿ ಖಾತೆಯಲ್ಲಿನ ಸಂದಾಯ ಬಾಕಿ ಕೊರತೆ ನಿವಾರಣೆಗಾಗಿ ರಿಸರ್ವ್ ಬ್ಯಾಂಕು ಶಿಸ್ತಿನ ಕ್ರಮಗಳನ್ನು ಜಾರಿಗೆ ತಂದಿದೆ.

ವಿಶ್ವದಲ್ಲಿ ಅತೀ ಹೆಚ್ಚು ಚಿನ್ನವನ್ನು ಬಳಸುತ್ತಿರುವ ರಾಷ್ಟ್ರವೆಂಬ ಹೆಗ್ಗಳಿಕೆ ಭಾರತದ್ದು. ೨೦೧೨ರಲ್ಲಿ ಚಿನ್ನದ ಬೇಡಿಕೆ ೮೬೪ ಟನ್ನುಗಳಷ್ಟಿದ್ದರೆ ಚಿನ್ನದ ಆಮದು ೮೬೦ ಟನ್ನುಗಳಷ್ಟಿತ್ತು. ಆದರೆ ೨೦೧೩ರಲ್ಲಿ ಚಿನ್ನದ ಬೇಡಿಕೆ ೯೦೦ ಟನ್ನುಗಳಷ್ಟಿದೆ. ೨೦೧೩ರಲ್ಲಿ ಇದು ಸುಮಾರು ೮೬೫ರಿಂದ ೯೬೫ ಟನ್ನುಗಳಷ್ಟಿದೆ. ಚಿನ್ನದ ಬೆಲೆ ರೂ. ೩೨,೯೭೫ (೧೦ ಗ್ರಾಂ) (ನವೆಂಬರ್ ೨೦೧೨) ಇದ್ದುದು ರೂ. ೨೭,೫೨೦ (೧೦ ಗ್ರಾಂ) ಮಟ್ಟಕ್ಕೆ ಇಳಿಯಿತು (ಮೇ ೨೦೧೩). ಭಾರತದಲ್ಲಿ ಚಿನ್ನವನ್ನು ಜನರು ಹೂಡಿಕೆ ಆಸ್ತಿ ಎಂಬುದಾಗಿ ಪರಿಗಣಿಸಿದರೆ ಸರ್ಕಾರ ಅದನ್ನು ವೆಚ್ಚವೆಂಬುದಾಗಿ ಪರಿಗಣಿಸುತ್ತದೆ. ಆಮದನ್ನು ತಡೆಯುವ ಯಾವುದೇ ಕ್ರಮ ಇತರ ಕಾನೂನುಬಾಹಿರ ಕೃತ್ಯಗಳಿಗೆ ಅವಕಾಶ ನೀಡಬಲ್ಲದು.

ಭಾರತದಲ್ಲಿ ಇತ್ತೀಚಿನ ಅವಧಿಯಲ್ಲಿ ಚಿನ್ನದ ಗಟ್ಟಿ ಹಾಗೂ ನಾಣ್ಯಗಳಲ್ಲಿ ಕೊರತೆ ಉದ್ಭವಿಸಿದೆ. ಇನ್ನು ಚಿನ್ನದ ಆಮದಿಗೆ ಸಂಬಂಧಪಟ್ಟಂತೆ ೫೬ ಬಿಲಿಯನ್ ಡಾಲರ್‌ನಷ್ಟು ೨೦೧೧–೨೦೧೨, ೨೦೧೦–೧೧ರ ಅವಧಿಯಲ್ಲಿ ೪೦ ಬಿಲಿಯನ್ ಡಾಲರ್, ೨೦೦೯–೧೦ರ ಅವಧಿಯಲ್ಲಿ ೨೮ ಬಿಲಿಯನ್ ಡಾಲರ್, ೨೦೧೨–೧೩ ಏಪ್ರಿಲ್ – ಫೆಬ್ರವರಿ ಅವಧಿಯಲ್ಲಿ ೫೦,೬೩೭ ದಶಲಕ್ಷ ಡಾಲರ್‌ನಷ್ಟು ಬೆಲೆ ಬಾಳುವ ೯,೫೧,೧೭೦ ಕೆ.ಜಿ.ಯಷ್ಟಿತ್ತು.

ಭಾರತದ ವ್ಯಾಪಾರ ಕೊರತೆಗೆ ೨೬% ಚಿನ್ನದ ಆಮದು ಕಾರಣ. ಅಕ್ಷಯ ತೃತೀಯ ಎಂದರೆ ಭಾರತದಲ್ಲಿ ಚಿನ್ನದ ಖರೀದಿಗೆ ಅತ್ಯಂತ ಪ್ರಶಸ್ತವಾದ

ದಿನ. ಆ ದಿನದಂದು ಚಿನ್ನ ಖರೀದಿಸಿದರೆ ಸಂಪತ್ತು ಅಕ್ಷಯವಾಗುತ್ತದೆಂಬ ನಂಬಿಕೆ ಭಾರತೀಯರಲ್ಲಿದೆ. ಹಲವು ಬ್ಯಾಂಕುಗಳು ಈ ಅವಧಿಯಲ್ಲಿ ಚಿನ್ನದ ನಾಣ್ಯ ಮತ್ತು ಗಟ್ಟಿಗಳ ಮಾರಾಟ ಕೈಗೊಂಡಿದ್ದವು. ಕೆಲವು ಚಿನ್ನದ ವ್ಯಾಪಾರಿಗಳು ಹೇಳುವಂತೆ, ಈ ಬಾರಿ ನಾಣ್ಯಗಳಿಗಿಂತ ಚಿನ್ನದ ಆಭರಣಗಳ ಖರೀದಿಯೇ ಹೆಚ್ಚು. ಚಿನ್ನದ ಬೆಲೆ ಇಳಿಕೆ ಚಿನ್ನದ ಖರೀದಿಯನ್ನು ಹೆಚ್ಚಿಸಿದೆ. ಹಿಂದಿನ ವರ್ಷ ಅಕ್ಷಯ ತದಿಗೆಯಂದು ಚಿನ್ನದ ಬೆಲೆ ೧೦ ಗ್ರಾಂಗೆ ರೂ. ೨೯,೧೦೦ ಇತ್ತು. ಹಿಂದಿನ ೫ ವರ್ಷಗಳಲ್ಲಿ ಚಿನ್ನದ ಗಟ್ಟಿ, ವಿನಿಮಯ ವ್ಯಾಪಾರ ನಿಧಿಗಳ ಮಾರಾಟ ೧೭%ರಿಂದ ೩೬%ರಷ್ಟು ಹೆಚ್ಚಳ ಕಂಡಿದೆ. ಆದರೆ ಆಭರಣಗಳ ಮೇಲಿನ ವೆಚ್ಚ ಶೇ. ೮೦ರಿಂದ ಶೇ. ೬೪%ರಷ್ಟು ಕುಗ್ಗಿದೆ.

೨೦೧೨ರಲ್ಲಿ ೮೬೪ ಟನ್ನುಗಳಿಷ್ಟಿದ್ದ ಚಿನ್ನದ ಬೇಡಿಕೆ ೨೦೧೩ರಲ್ಲಿ ೮೬೫ರಿಂದ ೯೬೫ ಟನ್ನುಗಳಿಗೇರಿದೆ. ಭಾರತೀಯ ರಿಸರ್ವ್ ಬ್ಯಾಂಕ್ ಇತ್ತೀಚೆಗೆ ವಿಧಿಸಿದ ಚಿನ್ನದ ಆಮದು ನಿಯಂತ್ರಣ ಸಣ್ಣ ಪ್ರಮಾಣದ ಚಿನ್ನದ ವ್ಯಾಪಾರಿಗಳ ಮೇಲೆ ತೀವ್ರವಾದ ಪರಿಣಾಮಗಳನ್ನು ಉಂಟುಮಾಡಲಿದೆ.

ಶೇ. ೧೩೮ರಷ್ಟಿದ್ದ ಚಿನ್ನದ ಆಮದು ಇದೇ ಏಪ್ರಿಲ್‌ನಲ್ಲಿ ಅಧಿಕಗೊಂಡಿದ್ದು, ಭಾರತದ ಸಂದಾಯ ಬಾಕಿಯ ಮೇಲೆ ದುಷ್ಪರಿಣಾಮ ಬೀರಲಿದೆ ಎಂಬ ಕಾರಣದಿಂದ ರಿಸರ್ವ್ ಬ್ಯಾಂಕು ಚಿನ್ನದ ಆಮದನ್ನು ಕಡಿತಗೊಳಿಸುವ ಕ್ರಮ ಕೈಗೊಂಡಿತು. ಚಿನ್ನವನ್ನು ೩೦ ಜಾನಲ್ ಸಂಸ್ಥೆಗಳು (ಅಂದರೆ ಬ್ಯಾಂಕುಗಳು ಹಾಗೂ ಬ್ಯಾಂಕೇತರ ಸಂಸ್ಥೆಗಳು) ಆಮದು ಮಾಡಿಕೊಳ್ಳಬಹುದಾಗಿದೆ. ೨೦೧೨-೧೩ರಲ್ಲಿ ಭಾರತ ೧೦೧೫ ಟನ್ನು ಚಿನ್ನವನ್ನು ಆಮದು ಮಾಡಿಕೊಂಡಿದೆ.

೨೦೧೩ರ ಜನವರಿ-ಮಾರ್ಚ್ ಅವಧಿಯಲ್ಲಿ ಭಾರತದಲ್ಲಿ ಚಿನ್ನದ ಬೇಡಿಕೆ ೨೭% ಹೆಚ್ಚಿದೆ. ಅಂದರೆ ಚಿನ್ನದ ಆಮದು ೫.೭% ರಷ್ಟು ಇಳಿದಿದೆ (೨೧೫ ಟನ್ನು). ೨೦೧೨ರಲ್ಲಿ ಬೇಡಿಕೆ ೨೦೨.೧ ಟನ್ನು ಇದ್ದರೆ, ಚಿನ್ನದ ಆಮದು ೨೨೮ ಟನ್ನುಗಳು. ಭಾರತ ಸರ್ಕಾರ ಆಮದು ಸುಂಕವನ್ನು ೧೦ ಗ್ರಾಂಗೆ ೪೭೨ ಡಾಲರ್‌ನಿಂದ ೪೬೬ ಡಾಲರ್‌ಗೆ ಇಳಿಸಿದೆ. ಭಾರತ ಸರ್ಕಾರ ಚಿನ್ನದ ಆಮದು ತಡೆಗೆ ಸುಂಕವನ್ನು ಹೆಚ್ಚಿಸಿದರೂ ಯಾವುದೇ ನಿರೀಕ್ಷಿತ ಫಲಿತಾಂಶ ದೊರೆತಿಲ್ಲವೆಂದೇ ಹೇಳಬಹುದು. ಡಿಸೆಂಬರ್ ೨೦೧೨-೧೩ರಲ್ಲಿ ಚಾಲ್ತಿ ಖಾತೆಯ ಕೊರತೆ ಜಿ.ಡಿ.ಪಿ.ಯ ೬.೭ನಷ್ಟಿತ್ತು. ನಿರಂತರ ಹೆಚ್ಚುತ್ತಿರುವ ಚಿನ್ನ, ಬೆಳ್ಳಿ, ಕಚ್ಚಾ ತೈಲದ ಆಮದಿನಿಂದಾಗಿ ಭಾರತದ ವ್ಯಾಪಾರ ಕೊರತೆ ಹದಗೆಟ್ಟಿದೆ. ಮೇ ತಿಂಗಳಲ್ಲಿ ಚಿನ್ನದ ಆಮದು ೮೯.೭% ಹೆಚ್ಚಿದರೆ, ರಫ್ತು ೧.೧% ರಷ್ಟು ಕುಗ್ಗಿದೆ. ಚಿನ್ನದ ರಫ್ತು ವಿಶೇಷ ಆರ್ಥಿಕ ವಲಯದಿಂದಾಗಿ ಕುಗ್ಗಿದೆ. ವಿಶೇಷ ಆರ್ಥಿಕ ವಲಯಗಳು ಚಿನ್ನದ ವ್ಯಾಪಾರ ನಿಲ್ಲಿಸಿದ್ದರಿಂದ ಚಿನ್ನದ ರಫ್ತು ಈ ವಲಯದಿಂದ ಮೇ ತಿಂಗಳಲ್ಲಿ ೦.೮ ಬಿಲಿಯನ್ ಡಾಲರ್‌ನ ಮಟ್ಟಕ್ಕೆ ಕುಸಿದಿದೆ.

೨೦೧೨-೧೩ರ ಏಪ್ರಿಲ್ - ಫೆಬ್ರವರಿ ಅವಧಿಯಲ್ಲಿ ಚಿನ್ನದ ಆಮದು ೫೦ ಬಿಲಿಯನ್ ಡಾಲರ್ ಮಟ್ಟಕ್ಕೆ ಕುಸಿಯಿತು. ಮೇ ತಿಂಗಳಲ್ಲಿ ಚಿನ್ನದ ಆಮದು ೧೬೨ ಟನ್ನುಗಳಿಗೆ ಏರಿತು. ಅಖಿಲ ಭಾರತ ಆಭರಣ ವ್ಯಾಪಾರ ಫೆಡರೇಷನ್ ಜೂನ್ ತಿಂಗಳಲ್ಲಿ ತನ್ನ ಸದಸ್ಯರಿಗೆ ಒಂದು ಆದೇಶ ಹೊರಡಿಸಿ ಅದರಲ್ಲಿ ಚಿನ್ನದ ನಾಣ್ಯ ಗಟ್ಟಿ ಮಾರಾಟ ಮಾಡದಂತೆ ಕೇಳಿಕೊಂಡಿದೆ. ಇದರಿಂದ ಚಿನ್ನದ ಆಮದು ಕಡಿಮೆ ಯಾಗುವುದಲ್ಲದೆ ವ್ಯಾಪಾರ ಬಾಕಿಯ ಮೇಲಾಗುವ ಒತ್ತಡ ಕಡಿಮೆಯಾಗಲಿದೆ.

ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಚಿನ್ನದ ಬೆಲೆ ಇಳಿಮುಖವಾಗುತ್ತಿರುವುದರಿಂದ ಭಾರತದಲ್ಲೂ ಚಿನ್ನದ ಬೆಲೆಯಲ್ಲಿ ಇಳಿಕೆ ಕಂಡುಬಂದಿದೆ. ಹಬ್ಬ ಹರಿದಿನಗಳು ಜೂನ್ ಮಾಹೆಯಲ್ಲಿ ಇಲ್ಲದ ಕಾರಣ ಚಿನ್ನದ ಬೇಡಿಕೆ ಇಳಿಮುಖವಾಗುತ್ತದೆ. ಚಿನ್ನದ ಬೆಲೆ ೧೦ ಗ್ರಾಂಗೆ ೨೭,೦೭೪ ರೂ.ಗಳು. ಅದೇ ವೇಳೆ ಅಂತರರಾಷ್ಟ್ರೀಯ ಬೆಲೆ ಒಂದು ಔನ್ಸ್‌ಗೆ ೧೩೦೦ ಡಾಲರ್‌ನಷ್ಟಿತ್ತು. ರಿಸರ್ವ್ ಬ್ಯಾಂಕು ಹಾಗೂ ಕೇಂದ್ರ ಸರ್ಕಾರದ ಕಠಿಣ ಕ್ರಮಗಳು ಇದೀಗ ಫಲ ಕೊಡಲಾರಂಭಿಸಿವೆ. ವಿಶ್ವಮಟ್ಟದಲ್ಲಿ ಚಿನ್ನದ ಬೆಲೆ ಸುಧಾರಿಸಲು ಮುಖ್ಯ ಕಾರಣವೆಂದರೆ ಭಾರತ ಹಾಗೂ ಚೀನಾ ಚಿನ್ನವನ್ನು ಖರೀದಿಸಿರುವುದೇ ಆಗಿದೆ. ಜುಲೈ ತಿಂಗಳ ಕೊನೆಯ ವೇಳೆಗೆ ಚಿನ್ನದ ಬೆಲೆ ೧೦ ಗ್ರಾಂಗೆ ರೂ. ೨೬,೦೦೦ ಆಗಲಿದೆ ಎಂದು ಹೇಳಲಾಗಿದೆ. ಇತ್ತೀಚಿನ ಚಿನ್ನದ ಆಮದು ಏರಿಕೆಯ ಪರಿಹಾರಕ್ಕೆ ಚಿನ್ನದ ಬೇಡಿಕೆಯನ್ನು ನಿಯಂತ್ರಿಸುವುದು ಸೂಕ್ತ ಎಂಬುದಾಗಿ ಚಿನ್ನದ ಆಮದು ಮತ್ತು ಬ್ಯಾಂಕೇತರ ಹಣಕಾಸು ಸಂಸ್ಥೆಗಳ ಚಿನ್ನದ ಸಾಲ ಕುರಿತ ಅಧ್ಯಯನಕ್ಕೆ ರಚಿಸಲ್ಪಟ್ಟ ಕಾರ್ಯಕಾರಿ ಸಮಿತಿ ತನ್ನ ವರದಿಯಲ್ಲಿ ಅಭಿಪ್ರಾಯಪಟ್ಟಿದೆ.

ಈ ಸಮಿತಿ ಹೇಳುವಂತೆ ಚಿನ್ನದ ಕ್ರಯ-ವಿಕ್ರಯದ ಮಾಹಿತಿಯನ್ನು ಸೂಕ್ತ ರೀತಿಯಲ್ಲಿಡುವುದು ಮುಖ್ಯ. ಚಿನ್ನದ ಆಮದು ನಿಯಂತ್ರಣಕ್ಕೆ ಕೆಲವು ರಾಜ್ಯಕೋಶ ಕ್ರಮಗಳ ಪರಿಶೀಲನೆ ಅಗತ್ಯವಾಗಿದೆ. ಭಾರತೀಯರು ಹೊರದೇಶಗಳಿಂದ ತರಬಹುದಾದ ಚಿನ್ನ ಮತ್ತು ಆಭರಣಗಳ ಮೇಲೆ ನಿಯಂತ್ರಣ ವಿಧಿಸುವುದು, ವಾಸ್ತವ ಪ್ರತಿಫಲ ನೀಡುವ ಉಳಿತಾಯ ಯೋಜನೆಗಳು ಮತ್ತು ಸಾಧನಗಳನ್ನು ಜಾರಿಗೆ ತರುವುದು, ಚಿನ್ನ ಆಧಾರಿತ ಹಣಕಾಸು ಸಾಧನಗಳನ್ನು ಪರಿಚಯಿಸುವ ಇಂತಹ ಕ್ರಮಗಳ ಮೂಲಕ ಭೌತಿಕ ಚಿನ್ನಕ್ಕಿರುವ ಬೇಡಿಕೆಯನ್ನು ಕುಗ್ಗಿಸಬಹುದಾಗಿದೆ. ಇದಕ್ಕೆ ಕೆಲವು ಉದಾಹರಣೆಗಳೆಂದರೆ ಚಿನ್ನ ಸಂಗ್ರಹ ಯೋಜನೆ, ಚಿನ್ನ ಬಂಧಿತ ಖಾತೆ, ಚಿನ್ನ ಪೆನ್‌ಶನ್ ಸರಕು ಇತ್ಯಾದಿ. ಹೂಡಿಕೆದಾರರ ಶಿಕ್ಷಣ ಮತ್ತು ಹಣಕಾಸು ಸಾಕ್ಷರತೆ ಕೂಡ ಅಷ್ಟೇ ಮುಖ್ಯ. ಚಿನ್ನದ ಸಗಟು ಆಮದುಗಾರರ ಮೇಲೆ ರಫ್ತು ಕಡ್ಡಾಯ ವಿಧಿಸುವುದು ಒಂದು ಆಯ್ಕೆಯಾದರೆ ನಾಮಾಂಕಿತ ಬ್ಯಾಂಕು ಹಾಗೂ ಇತರ ಆಮದು ಸಂಸ್ಥೆಗಳ ಚಿನ್ನದ ಆಮದು ಗಾತ್ರ ಮತ್ತು ಮೌಲ್ಯದ ಮೇಲೆ ಮಿತಿಯನ್ನು ವಿಧಿಸುವುದು ಮತ್ತೊಂದು. ಇದನ್ನು ಹೊರತುಪಡಿಸಿ ಕೆಲವು ಪೂರೈಕೆ ನಿರ್ವಹಣಾ ಕ್ರಮಗಳನ್ನು ಸಮಿತಿ ಶಿಫಾರಸ್ಸು ಮಾಡಿದೆ. ಅವುಗಳಲ್ಲೊಂದು ಅನುತ್ಪಾದಕ ಸ್ವರೂಪದ ಚಿನ್ನದ ಆಸ್ತಿಯನ್ನು ಹಣಕಾಸಿನ ರೂಪದಲ್ಲಿ ಉತ್ಪಾದಕ ಸಾಧನವನ್ನಾಗಿ ಪರಿವರ್ತಿಸುವುದು. ಪ್ರಸ್ತುತ ವ್ಯಾಪಾರಿ ಸಂಸ್ಥೆಗಳು ಚಿನ್ನವನ್ನು ಆಮದು ಮಾಡಿಕೊಂಡು ಮಾರಾಟ ಮಾಡಲು ಮಾತ್ರ ಬಳಸುತ್ತಿವೆ. ಆದರೆ ಸಮಿತಿ ಹೇಳುವಂತೆ ಈ ಸಂಸ್ಥೆಗಳಿಗೆ ಚಿನ್ನದ ನಾಣ್ಯವನ್ನು ಪಾರದರ್ಶಕ ಬೆಲೆಯಲ್ಲಿ ಖರೀದಿಸುವ ಅವಕಾಶವನ್ನು ನೀಡಬಹುದಾಗಿದೆ. ಇದರಿಂದ ಆಂತರಿಕವಾಗಿ ಲಭ್ಯವಿರುವ ಚಿನ್ನವನ್ನು ಪುನರ್‌ಬಳಕೆ ಮಾಡಬಹುದಲ್ಲದೆ ಚಿನ್ನದ ಆಮದನ್ನು ತಡೆಯಬಹುದಾಗಿದೆ. ಚಿನ್ನದ ಬಾಂಡುಗಳಿಗೆ ತೆರಿಗೆ ರಿಯಾಯಿತಿ ಕೊಡುವ ಬಗ್ಗೆಯೂ ಆಲೋಚಿಸಬಹುದಾಗಿದೆ.

ಚಿನ್ನದ ನಾಣ್ಯೀಕರಣಕ್ಕೆ ಸೂಕ್ತ ಕ್ರಮ ಕೈಗೊಳ್ಳುವತ್ತ ಆಲೋಚಿಸಬಹುದು. ಎಲ್ಲ ಬಗೆಯ ಉತ್ಪಾದಕ ಉದ್ದೇಶಗಳಿಗೆ ಚಿನ್ನದ ಮೇಲೆ ಸಾಲ ನೀಡಬಹುದಾಗಿದೆ. ಚಿನ್ನದ ನಿಗಮ ಸ್ಥಾಪಿಸಲು ಚಿಂತಿಸಬಹುದಾಗಿದೆ. ಈ ನಿಗಮ ಚಿನ್ನ ಹಾಗೂ ಚಿನ್ನ ಆಧಾರಿತ ಸರಕುಗಳಿಗೆ ಸಂಬಂಧಿಸಿದಂತೆ ಸೂಕ್ತ ನೀತಿಗಳನ್ನು ಕೈಗೊಳ್ಳಬಹುದು. ಚಿನ್ನದ ಬೇಡಿಕೆಯ ಇಳಿತಕ್ಕೆ ಸಂಬಂಧಿಸಿದಂತೆ ಬೆಳವಣಿಗೆ ಆಮದು ಸುಂಕ, ಹಣದುಬ್ಬರ, ಬಡ್ಡಿಯ ದರ, ಬದಲಿ ಹಣಕಾಸು ಸಾಧನಗಳು, ಸುಲಭ ಸಾಲ ಸೌಲಭ್ಯ, ಚಾಲ್ತಿ ಖಾತೆ ವ್ಯವಹಾರದ ಮೇಲೆ ಮಿತಿಯನ್ನು ವಿಧಿಸುವುದು - ಇವುಗಳ ಕುರಿತು ಗಮನ ಹರಿಸಬೇಕಾಗುತ್ತದೆ.

ರಿಸರ್ವ್ ಬ್ಯಾಂಕು ಚಿನ್ನದ ಬೆಲೆಯ ಅಸ್ಥಿರತೆಗೆ ಸಂಬಂಧಿಸಿದಂತೆ ಕೆಲವು ಕಠಿಣ ಕ್ರಮಗಳನ್ನು ಜಾರಿಗೊಳಿಸುತ್ತಲೇ ಇದೆ. ಈಗಾಗಲೇ ಚಿನ್ನದ ಮೇಲೆ ಬ್ಯಾಂಕುಗಳು ನೀಡುವ ಸಾಲದ ಮೇಲೆ ನಿಯಂತ್ರಣ ವಿಧಿಸಿದೆ. ಅಲ್ಲದೆ, ಚಿನ್ನದ ಆಮದನ್ನು ಕೇವಲ ಚಿನ್ನದ ಆಭರಣಗಳ ರಫ್ತುದಾರರಿಗೆ ಮಾತ್ರ ಮೀಸಲಾಗಿಡಲಾಗಿದೆ. ಈ ನಿಯಮದ ಪ್ರಕಾರ ರಿಸರ್ವ್ ಬ್ಯಾಂಕ್ ಚಿನ್ನದ ನಾಣ್ಯದ ಮೇಲೆ ನೀಡುವ ಸಾಲ ೫೦ ಗ್ರಾಂಗಳಿಗೆ ಮಾತ್ರ ಸೀಮಿತಗೊಂಡಿರಬೇಕು. ಇತ್ತೀಚಿನ ಅವಧಿಯಲ್ಲಿ ರೂಪಾಯಿ ಮೌಲ್ಯ ಕುಸಿತವನ್ನು ನಿಯಂತ್ರಿಸುವಲ್ಲಿ ಕೇಂದ್ರ ಬ್ಯಾಂಕು ಹೆಚ್ಚಿನ ಕ್ರಮ ಕೈಗೊಳ್ಳುತ್ತಿದೆ. ಜುಲೈ ತಿಂಗಳ ಎರಡನೇ ವಾರದಲ್ಲಿ ನಾಮಾಂಕಿತ ಬ್ಯಾಂಕು ಹಾಗೂ ಸಂಸ್ಥೆಗಳಿಗೆ ಆಮದಾದ ೨೦% ಚಿನ್ನ ರಫ್ತು ಬಳಕೆಗೆ ಇರಬೇಕೆಂದು ಆದೇಶ ನೀಡಿದೆ. ಅಲ್ಲದೆ ಆಂತರಿಕ ಬಳಕೆಗೆ, ಅದರಲ್ಲೂ ಆಭರಣ ತಯಾರಿಕೆಗೆ ಮಾತ್ರ ಬಳಕೆಯಾಗುವಂತಿರಬೇಕು. ಒಟ್ಟಿನಲ್ಲಿ ಹೇಳುವುದಾದರೆ ರಿಸರ್ವ್ ಬ್ಯಾಂಕಿನ ನೀತಿ ಹಾಗೂ ಕ್ರಮಗಳು ಎಷ್ಟರಮಟ್ಟಿಗೆ ಚಿನ್ನದ ಹೊಳಪನ್ನು ಉಳಿಸುವಲ್ಲಿ ಮತ್ತು ವ್ಯಾಪಾರ ಬಾಕಿ ಸಮಸ್ಯೆ ನಿಯಂತ್ರಿಸುವಲ್ಲಿ ಯಶಸ್ಸು ಕಾಣುತ್ತವೆಂಬುದನ್ನು ಕಾಲವೇ ನಿರ್ಧರಿಸಬೇಕು.

**ಆಧಾರ :** *ಚಿನ್ನದ ಆಮದು ಮತ್ತು ಚಿನ್ನದ ಮೇಲೆ ನೀಡಲಾಗುವ ಸಾಲ, ಇವುಗಳ ಕುರಿತು ಅಧ್ಯಯನ ನಡೆಸಲು ನೇಮಿಸಿದ್ದ ತಜ್ಞರ ತಂಡವು ನೀಡಿರುವ ವರದಿ (ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ - ಡಿಸೆಂಬರ್ ೨೦೧೨)*

**ಡಾ॥ ಜಯಂತಿ ಜೆ.**
ಪ್ರಾಂಶುಪಾಲರು, ಸರ್ಕಾರಿ ಪದವಿ ಕಾಲೇಜು, ಹೊಳೆಹೊನ್ನೂರು ಶಿವಮೊಗ್ಗ ಜಿಲ್ಲೆ

# ಶಾಲಾ ಶಿಕ್ಷಣದಲ್ಲಿ ಪಠ್ಯಗಳು




ಎ. ಆರ್. ನಾರಾಯಣಘಟ್ಟ

ಓದಬೇಕಾದ ಅಥವಾ ಅಭ್ಯಾಸಕ್ಕೆ ತಕ್ಕುದಾದ ಯಾವುದೇ ಒಂದು ವಿಷಯವನ್ನು 'ಪಠ್ಯ' ಎನ್ನುವರು. ಇಂಥ ಪಠ್ಯವೊಂದನ್ನು ಅಥವಾ ಹಲವಾರು ಪಠ್ಯಗಳನ್ನು ಒಳಗೊಂಡಿರುವಂಥ ಪುಸ್ತಕವನ್ನು ಪಠ್ಯಪುಸ್ತಕ ಎನ್ನುವರು.

ಶಾಲಾ ಶಿಕ್ಷಣ ವ್ಯವಸ್ಥೆಯಲ್ಲಿ ಗೊತ್ತುಪಡಿಸುವ ಯಾವುದೇ ಒಂದು ಪಠ್ಯ ಎರಡು ಅಂಶಗಳನ್ನು ಒಳಗೊಂಡಿರುತ್ತದೆ, ಅವು ಯಾವುವೆಂದರೆ ಪಠ್ಯವಸ್ತು ಮತ್ತು ಪಠ್ಯಕ್ರಮ.

ಕಲಿಸಬೇಕಾದ ಮೂಲ ವಿಷಯವೇ ಪಠ್ಯವಸ್ತು. ಉದಾಹರಣೆ : ಕೋಮು ಸೌಹಾರ್ದ, ಧರ್ಮಸಮನ್ವಯ, ಅಸ್ಪೃಶ್ಯತಾ ನಿವಾರಣೆ, ಸಮಾನ ಭ್ರಾತೃತ್ವ ಇತ್ಯಾದಿ. ಈ ವಿಷಯಗಳನ್ನು ಆಯಾ ವಯೋಮಾನದ ವಿದ್ಯಾರ್ಥಿಗಳಿಗೆ ಆಯೋಜಿಸ ಬೇಕಾದ ರೀತಿಯನ್ನು ಅನುಸರಿಸಿ, ಸರಳತೆಯಿಂದ ಸಂಕೀರ್ಣತೆಯೆಡೆಗೆ ಆಸಕ್ತಿದಾಯಕವಾಗಿ ರೂಪಿಸುವ ಪಾಠವನ್ನು ಪಠ್ಯಕ್ರಮ ಎನ್ನುವರು.

ಯಾವುದೇ ಒಂದು ಪಠ್ಯವಸ್ತು ಮತ್ತು ಪಠ್ಯಕ್ರಮ ಆಯಾದೇಶ ಮತ್ತು ಆಯಾಕಾಲವನ್ನು ಅನುಸರಿಸಿ ರೂಪುಗೊಳ್ಳುತ್ತವೆ. ಅವು ಎಲ್ಲ ದೇಶಕ್ಕೂ ಮತ್ತು ಎಲ್ಲ ಕಾಲಕ್ಕೂ ಒಂದೇ ತೆರನಾಗಿರುವುದಿಲ್ಲ. ಮಾತ್ರವಲ್ಲ, ವಿವಿಧ ಜನಾಂಗ ಹಾಗೂ ವಿವಿಧ ಸಂಸ್ಕೃತಿಯಿರುವ ಒಂದೇ ದೇಶದಲ್ಲಿ ಮತ್ತು ಒಂದೇ ಕಾಲದಲ್ಲಿ ವಿಭಿನ್ನವಾಗಿರುವ ಸಂಭವವೂ ಉಂಟು.

ಉದಾಹರಣೆ : ಚೀನಾ ಅಥವಾ ಜಪಾನ್ ದೇಶಗಳಲ್ಲಿ ಚಾತುರ್ವರ್ಣ್ಯ ವ್ಯವಸ್ಥೆ ಇಲ್ಲದಿರುವುದರಿಂದ ಅದರ ಜನ್ಯವಾಗಿರುವ ಅಸ್ಪೃಶ್ಯತಾ ನಿವಾರಣೆ ಆ ದೇಶಗಳ ಪಠ್ಯಕ್ರಮದಲ್ಲಿ ಸೇರುವ ಅಗತ್ಯವಿಲ್ಲ. ಪ್ರಾಚೀನ ಕಾಲದ ವೈದಿಕಧರ್ಮ ಜನ್ಯವಾದ ಬ್ರಾಹ್ಮಣ್ಯ ಕುರಿತ ಪಠ್ಯ ಆಧುನಿಕ ಕಾಲದ ಮಾನವಧರ್ಮ ಪ್ರಾಧಾನ್ಯ ವಿಜ್ಞಾನಯುಗದ ಪಠ್ಯಕ್ರಮದಲ್ಲಿ ಸ್ಥಾನ ಪಡೆಯುವ ಅಗತ್ಯವಿಲ್ಲ.

ಪ್ರಸ್ತುತ ನಮ್ಮ ದೇಶದಲ್ಲಿ ಸ್ವಾತಂತ್ರ್ಯಾನಂತರ ನಾವು ರೂಪಿಸುವ ಪಠ್ಯವು ನಮಗೆ ಎಲ್ಲ ರೀತಿಯಿಂದಲೂ ಮಾರ್ಗದರ್ಶಿಯಾಗಿರುವ ನಮ್ಮ ಸಂವಿಧಾನದ ಆಶಯಗಳಿಗೆ ಅನುಗುಣವಾಗಿರಬೇಕು. ಅಂದರೆ, ಸಂವಿಧಾನದ ಪ್ರಸ್ತಾವನೆಯಲ್ಲಿ ಅಡಕವಾಗಿರುವ ರಾಷ್ಟ್ರೀಯ ಸಾರ್ವಭೌಮತ್ವ, ಸಮಾಜವಾದ, ಜಾತ್ಯತೀತ ಜನತಂತ್ರ ವ್ಯವಸ್ಥೆ ಮತ್ತು ಗಣತಂತ್ರ ಸಿದ್ಧಾಂತಗಳಿಗೆ ಪೂರಕವಾಗಿರಬೇಕು.

ಅಲ್ಲದೆ, ಸಾಮಾಜಿಕ, ಆರ್ಥಿಕ, ರಾಜಕೀಯ 'ನ್ಯಾಯ', ಆಲೋಚನೆ, ಅಭಿವ್ಯಕ್ತಿ, ನಂಬಿಕೆ, ಶ್ರದ್ಧೆ ಮತ್ತು ಉಪಾಸನಾ 'ಸ್ವಾತಂತ್ರ್ಯ', ಸ್ಥಾನಮಾನ ಮತ್ತು ಅವಕಾಶ ಗಳಲ್ಲಿ 'ಸಮಾನತೆ', 'ಭ್ರಾತೃತ್ವ' ಮತ್ತು 'ರಾಷ್ಟ್ರೀಯ ಏಕತೆ ಹಾಗೂ ಸಮಗ್ರತೆ' – ಈ ಗುಣ ಸ್ವಭಾವಗಳಿಗೆ ಧಕ್ಕೆಯಾಗದ ರೀತಿಯಲ್ಲಿ ನಮ್ಮ ಪಠ್ಯಕ್ರಮ ನಿರ್ಮಾಣವಾಗಬೇಕು.

ಗುರುಕುಲ ಪದ್ಧತಿಯ ವಿದ್ಯಾಭ್ಯಾಸದಲ್ಲಿ ಆ ವಿದ್ಯಾರ್ಥಿಗಳಿಗೆ ಬೇಕಾದ ಸಿದ್ಧ ಪಠ್ಯವನ್ನು ಆ ಗುರುಕುಲದ ಮುಖ್ಯಸ್ಥನೇ ನಿರ್ಧರಿಸಿ ಆಯಾಯ ಹಂತಕ್ಕೆ ಬೇಕೆನಿಸಿದ ರೀತಿಯಲ್ಲಿ ಆಯೋಜನೆ ಮಾಡುತ್ತಿದ್ದ. ಅದರ ಆಯ್ಕೆಗೆ ಯಾವ ಸಮಿತಿಯೂ ಇರಲಿಲ್ಲ.

ಬ್ರಿಟಿಷರು ಭಾರತಕ್ಕೆ ಬಂದು ಈ ದೇಶದಲ್ಲಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದ ಮೇಲೆ ಈ ದೇಶದ ಜನರಿಗಾಗಿ ಸ್ಥಾಪಿಸಿದ ಸಾರ್ವಜನಿಕ ಶಾಲೆಗಳಲ್ಲಿ ವಿದ್ಯಾಭ್ಯಾಸ ಮಾಡುವ ವಿದ್ಯಾರ್ಥಿಗಳಿಗಾಗಿ ನಿರ್ದಿಷ್ಟವಾದ ಪಠ್ಯಕ್ರಮವನ್ನು ಗೊತ್ತು ಮಾಡುವುದಕ್ಕಾಗಿ ಪಠ್ಯಕ್ರಮ ಸಮಿತಿಯನ್ನು ನೇಮಿಸಿದರು. ಅದರ ಅಡಿಯಲ್ಲಿ ಪಠ್ಯಪುಸ್ತಕ ರಚನಾ ಸಮಿತಿಯೊಂದನ್ನು ರೂಪಿಸಿ, ಅದಕ್ಕೆ ಪರಿಣತರಾದ ಅಧ್ಯಕ್ಷರು ಮತ್ತು ಸದಸ್ಯರನ್ನು ನೇಮಿಸಲಾಯಿತು. ಅವರು ಆ ಕಾಲದ ವಿದ್ಯಾರ್ಥಿಗಳಿಗೆ ಅಗತ್ಯವೆನಿಸಿದ ಪಠ್ಯಪುಸ್ತಕಗಳನ್ನು ನಿರ್ಮಿಸಿದರು.

ಪಠ್ಯಪುಸ್ತಕ ರಚನೆ ಕೇವಲ ಪಠ್ಯಕ್ರಮವನ್ನು ಮಾತ್ರ ಅವಲಂಬಿಸಿಲ್ಲ. ಅದು ಶಿಕ್ಷಣದ ಗುರಿಗಳನ್ನೂ ಒಳಗೊಂಡಿದೆ. ಈ ಗುರಿಗಳನ್ನು ಸಾಮಾನ್ಯ ಗುರಿ ಮತ್ತು ನಿರ್ದಿಷ್ಟ ಗುರಿ ಎಂದು ಪರಿಗಣಿಸಲಾಗಿದೆ.

ಸಾಮಾನ್ಯಗುರಿಯ ವ್ಯಾಪ್ತಿಯಲ್ಲಿ ಓದುವುದು, ಬರೆಯುವುದು ಮತ್ತು ಲೆಕ್ಕ ಮಾಡುವುದು ಸೇರುತ್ತವೆ. ವಿದ್ಯಾರ್ಥಿಯ ಸರ್ವತೋಮುಖ ಬೆಳವಣಿಗೆಗೆ ಪೂರಕವಾಗುವ ಹಲವಾರು ಅಂಶಗಳು ನಿರ್ದಿಷ್ಟ ಗುರಿಯ ವ್ಯಾಪ್ತಿಯಲ್ಲಿ ಸೇರುತ್ತವೆ. ಅವುಗಳನ್ನು ಈ ಕೆಳಕಂಡಂತೆ ವರ್ಗೀಕರಿಸಬಹುದು :

ಸಾಮಾಜಿಕ ಪ್ರಜ್ಞೆ, ಆರ್ಥಿಕ ಪರಿಜ್ಞಾನ, ನೈತಿಕ ಒಲವು, ವೈಜ್ಞಾನಿಕ ಮನೋಧರ್ಮ, ದೈಹಿಕಶ್ರಮ ಸಹಿಷ್ಣುತೆ (ಕಾಯಕ ಗೌರವ), ಸ್ತ್ರೀತ್ವದ ಬಗೆಗೆ

ಅಗ್ಗಳಿಕೆ, ರಾಷ್ಟ್ರಪ್ರೇಮ, ದೇಶಸೇವೆಯ ಅರಿವು, ದೇಹದಾರ್ಢ್ಯ ಮತ್ತು ಆತ್ಮವಿಕಸನ. ಅಂತಿಮವಾಗಿ ಮತ್ತು ಮುಖ್ಯವಾಗಿ ಜೀವನ ನಿರ್ವಹಣೆಗೆ ಬೇಕಾದ ಒಂದು ವೃತ್ತಿ ಮತ್ತು ಅದಕ್ಕೆ ಸಂಬಂಧಿಸಿದ ಕೌಶಲ ದೊರೆಯುವಂತೆ ಮಾಡುವುದು.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಯಾವುದೇ ಒಂದು ಪಠ್ಯಕ್ರಮವು ಅಧಿಕಾರದಲ್ಲಿರುವ ರಾಜಕೀಯ ಪಕ್ಷದ ಮನೋಧರ್ಮ ಮತ್ತು ಅದರ ಶೈಕ್ಷಣಿಕ ಒಲವು–ನಿಲವುಗಳನ್ನು ಅವಲಂಬಿಸಿರುತ್ತದೆ. ವಿಶಾಲ ಮನೋಧರ್ಮ, ಧಾರ್ಮಿಕ ಔದಾರ್ಯ, ಸಂವಿಧಾನದ ಆಶಯಗಳ ಪರಿಜ್ಞಾನ, ವೈಚಾರಿಕತೆಗೆ ಪ್ರಾಧಾನ್ಯ – ಇಂಥ ಗುಣವಿಶೇಷವುಳ್ಳ ರಾಜಕೀಯ ಪಕ್ಷ ವಸ್ತುನಿಷ್ಠವಾದ ಪಠ್ಯಪುಸ್ತಕಗಳ ರಚನೆಗೆ ಮುಂದಾಗುತ್ತದೆ. ಸಂಕುಚಿತ ಮನೋಧರ್ಮ, ಧಾರ್ಮಿಕ ನಿಷ್ಠುರತೆ, ಸಂವಿಧಾನದ ಆಶಯಗಳ ಅಲಕ್ಷ್ಯ, ಸಂಪ್ರದಾಯ ಶರಣತ್ವ – ಇಂಥ ವರ್ಜ್ಯಗುಣವುಳ್ಳ ರಾಜಕೀಯ ಪಕ್ಷ ಯುಗಧರ್ಮಕ್ಕೆ ಉಪಯುಕ್ತವಲ್ಲದ ಮತ್ತು ಪಕ್ಷಪಾತಪೂರಿತ ಪಠ್ಯಪುಸ್ತಕಗಳ ರಚನೆಗೆ ತೊಡಗುತ್ತದೆ.

ಜಾತ್ಯತೀತ ರಾಷ್ಟ್ರವೊಂದರ ಪಠ್ಯಗಳಲ್ಲಿ ಧಾರ್ಮಿಕ ಭಾವನೆಗಳ ವೈಭವೀಕರಣಕ್ಕಿಂತ ನೈತಿಕ ಮೌಲ್ಯಗಳ ಪಾರಮ್ಯವನ್ನು ಎತ್ತಿಹಿಡಿಯಬೇಕು. ಸರ್ವಜನಾಂಗದ ಪ್ರೀತಿಗೆ ಪಾತ್ರವಾಗಬೇಕು. ಜಾತ್ಯತೀತ ತತ್ತ್ವವನ್ನು ಲೇವಡಿ ಮಾಡುವ, ಅದರ ಆಶಯವನ್ನು ತಿರಸ್ಕರಿಸುವ, ಹಿಂದುತ್ವವನ್ನು ಉಪಾಸಿಸುವ, ಅದರ ಪ್ರಚಾರಕ್ಕಾಗಿ ಸಂಘಸಂಸ್ಥೆಗಳನ್ನು ಕಟ್ಟಿಕೊಂಡಿರುವ ವೈದಿಕಧರ್ಮವನ್ನು ವೈಭವೀಕರಿಸುವ, ಧಾರ್ಮಿಕ ಅಲ್ಪಸಂಖ್ಯಾತರ ಬಗೆಗೆ ಸಹನೆಯಿಲ್ಲದ ಭಾರತೀಯ ಜನತಾಪಕ್ಷ ತನ್ನ ಆಡಳಿತಾವಧಿಯಲ್ಲಿ (ಕರ್ನಾಟಕದಲ್ಲಿ) ಪಕ್ಷಪಾತ ಪೂರಿತ ಪಠ್ಯಪುಸ್ತಕಗಳನ್ನು ತಯಾರಿಸಿ, ವಿದ್ಯಾರ್ಥಿಗಳ ಮಾನಸಿಕ ಸ್ವಾಸ್ಥ್ಯವನ್ನು ಹಾಳುಮಾಡಿರುವುದು ಸಮೀಕ್ಷೆಯಿಂದ ಸಾಬೀತಾಗಿದೆ.

ಕೋಮು ಪ್ರಾಧಾನ್ಯ ರಾಜಕೀಯ ಪಕ್ಷವೊಂದು ಗಣಿತಶಾಸ್ತ್ರ ಮತ್ತು ವಿಜ್ಞಾನ ವಿಷಯಗಳ ಪಾಠಗಳಲ್ಲಿ ಕೈವಾಡ ನಡೆಸಲಾಗುವುದಿಲ್ಲ. ಭೂಗೋಳ ಮತ್ತು ಪೌರನೀತಿಯ ಪಾಠಗಳನ್ನು ಸಂಕರಗೊಳಿಸಲಾಗುವುದಿಲ್ಲ. ಆದರೆ ತನ್ನ ಮೂಗಿಗೆ ನೇರವಾಗಿ ಇತಿಹಾಸವನ್ನು ತಿರುಚುವ ಕೆಲಸವನ್ನು ಎಗ್ಗುಸಿಗ್ಗಿಲ್ಲದೆ ಮಾಡುತ್ತದೆ ಮತ್ತು ಅದನ್ನು ಸಮರ್ಥಿಸುವ ಧಾರ್ಷ್ಟ್ಯವನ್ನೂ ತೋರಿಸುತ್ತದೆ.

ಅದು ಇತಿಹಾಸವನ್ನು ತಿರುಚುವ ವೈಖರಿಯೇ ವಿಚಿತ್ರವಾದುದಾಗಿದೆ. ಈ ದಿಶೆಯಲ್ಲಿ ಕೆಲವು ಉದಾಹರಣೆಗಳು : "ಆರ್ಯರು ಭಾರತಕ್ಕೆ ಹೊರಗಿನಿಂದ ವಲಸೆ ಬಂದವರಲ್ಲ; ಅವರು ಭಾರತದ ಮೂಲನಿವಾಸಿಗಳು. ವಿಗ್ರಹಾರಾಧನೆಯ ವಿರೋಧಿಗಳಾದ ಮ್ಲೇಚ್ಛ ಮುಸ್ಲಿಮರು ವಿಗ್ರಹ ಭಂಜಕರು; ಅವರು ಆಧುನಿಕ ಕಾಲದ ಅಸುರರು. ಸಿಂಧೂ ಬಯಲಿನ ಹರಪ್ಪ–ಮಹೇಂಜದಾರೊ ನಾಗರಿಕತೆಯೇ ಸರಸ್ವತೀ ತೀರದ ನಾಗರಿಕತೆ."

"ತಾಜ್‌ಮಹಲ್, ಮೊಗಲರ ಷಹಜಹಾನ್‌ನ ನಿರ್ಮಾಣವಲ್ಲ; ಹಿಂದುಗಳ ಶಿವದೇವಾಲಯವಾಗಿದ್ದ ತೇಜ್‌ಮಹಲ್‌ಅನ್ನು ರೂಪಾಂತರಗೊಳಿಸಿದ್ದು. ಅಯೋಧ್ಯೆಯ ಬಾಬರಿ ಮಸೀದಿ ಇರುವ ಸ್ಥಳವೇ ರಾಮಜನ್ಮಭೂಮಿ."

"ಟಿಪ್ಪು ಸುಲ್ತಾನ್ ದೇಶಪ್ರೇಮಿಯಲ್ಲ, ದೇಶದ್ರೋಹಿ; ಹಿಂದೂ ವಿರೋಧಿ ಮತ್ತು ಕನ್ನಡ ವಿರೋಧಿ. ಅವನ ಕಾಲದಲ್ಲಿ ಅನೇಕ ದೇವಾಲಯಗಳು ಮಸೀದಿಗಳಾಗಿ ಮಾರ್ಪಾಟಾದವು" – ಇತ್ಯಾದಿ.

ಭಾಷಾ ಪಾಠಗಳಲ್ಲಿಯೂ ಇದು ತನ್ನ ಪ್ರಚ್ಛನ್ನ ಧೋರಣೆಯನ್ನು ಪ್ರಕಟಪಡಿಸಲು ಭಿಡೆ ಪಡುವುದಿಲ್ಲ. ಸಾಮಾಜಿಕ ಕಥೆಗಳಿಗಿಂತ ಮೌಢ್ಯದ ಆಗರವಾಗಿರುವ ಪೌರಾಣಿಕ ಕಥೆಗಳಿಗೆ ಆದ್ಯತೆಯನ್ನು ನೀಡುತ್ತದೆ. ವೈದಿಕ ಧರ್ಮಾಚರಣೆಯ ಭಕ್ತರ ಜೀವನದಲ್ಲಿ ಕೆಲ ಅಸಂಗತ ಘಟನೆಗಳನ್ನು ಪವಾಡಗಳ ರೂಪದಲ್ಲಿ ವೈಭವೀಕರಿಸುತ್ತದೆ. ಧಾರ್ಮಿಕ ಆಚರಣೆಗಳನ್ನು ಪರಿಚಯಿಸುವ ಮರೆಯಲ್ಲಿ ವೈಚಾರಿಕತೆಯನ್ನು ಕೊಲೆಮಾಡಿ ಸಂಪ್ರದಾಯಶರಣತೆಯನ್ನು ಉಂಟುಮಾಡುತ್ತದೆ.

ಹಿಂದುತ್ವವಾದಿಗಳಿಗೆ ಕೋಮುಸಾಮರಸ್ಯ, ಪರಧರ್ಮ ಸಹಿಷ್ಣುತೆ, ಅಸ್ಪೃಶ್ಯತೆಯ ನಿರ್ಮೂಲನೆ, ಅಹಿಂಸೆಯ ಮಹತ್ವ, ಸಮಾನ ಭ್ರಾತೃತ್ವ ಇಂಥ ಮಾನವೀಯ ಮೌಲ್ಯಗಳ ಬಗೆಗೆ ಸ್ವಲ್ಪವೂ ಕಾಳಜಿಯೇ ಇಲ್ಲದಿರುವುದು ಬಿಜೆಪಿ ಪ್ರಭುತ್ವ ರೂಪಿಸಿರುವ ಪಠ್ಯಗಳಲ್ಲಿ ಸಾಬೀತಾಗಿದೆ.

ಶೈಕ್ಷಣಿಕ ಮನೋವಿಜ್ಞಾನದ ಪ್ರಕಾರ ಯಾವುದೇ ಒಂದು ಪಠ್ಯ ಇರಬೇಕಾದ ರೀತಿಯನ್ನು ತಿಳಿದುಕೊಳ್ಳಬೇಕು :

ಯಾವುದೇ ಒಂದು ಸಮಾಜದಲ್ಲಿ ಬುದ್ಧಿಮತ್ತೆ (ಐಕ್ಯೂ)ಯಲ್ಲಿ ಎಲ್ಲರೂ ಏಕಪ್ರಕಾರವಾಗಿ ಇರುವುದಿಲ್ಲ. ಸಾಮಾನ್ಯವಾಗಿ ಮೂರು ರೀತಿಯ ಬುದ್ಧಿಮತ್ತೆಯವರು ಕಂಡುಬರುತ್ತಾರೆ. ಅವರೆಂದರೆ : ಸರಾಸರಿ ಅಥವಾ ಸಾಮಾನ್ಯ ಬುದ್ಧಿವಂತರು, ಸರಾಸರಿಗಿಂತ ಕಡಿಮೆ ಬುದ್ಧಿವಂತರು ಮತ್ತು ಸರಾಸರಿಗಿಂತ ಅಧಿಕ ಬುದ್ಧಿವಂತರು. ಇವರು ಬೇರೆ ಬೇರೆ ಪ್ರಮಾಣದಲ್ಲಿರುತ್ತಾರೆ. ಈ ಅಂಶವನ್ನು ಗಮನದಲ್ಲಿಟ್ಟುಕೊಂಡು ಪಠ್ಯಪುಸ್ತಕಗಳನ್ನು ಸಿದ್ಧಗೊಳಿಸಬೇಕು.

ಸರಾಸರಿಗಿಂತ ಕಡಿಮೆ ಬುದ್ಧಿಮತ್ತೆಯವರನ್ನು ಗಮನದಲ್ಲಿಟ್ಟುಕೊಂಡು ರಚಿಸಿದ ಪಠ್ಯಪುಸ್ತಕ ಸರಾಸರಿ ಬುದ್ಧಿಮತ್ತೆಯವರನ್ನು ಸ್ವಲ್ಪಮಟ್ಟಿಗೆ ಆಕರ್ಷಿಸಿದರೂ ಸರಾಸರಿಗಿಂತ ಮೇಲಿರುವ ಬುದ್ಧಿಮತ್ತೆಯವರನ್ನು ಆಕರ್ಷಿಸುವುದರಲ್ಲಿ ವಿಫಲ ವಾಗುತ್ತದೆ. ಅತಿಶಯ ಬುದ್ಧಿಮತ್ತೆಯವರನ್ನು ಗಮನದಲ್ಲಿಟ್ಟುಕೊಂಡು ಸಿದ್ಧಪಡಿಸಿದ ಪಠ್ಯಪುಸ್ತಕ ನಿಮ್ನ ಬುದ್ಧಿಮತ್ತೆಯವರಿಂದ ತಿರಸ್ಕೃತವಾಗುತ್ತದೆ. ಆದ್ದರಿಂದ ಸರಾಸರಿ ವ್ಯಾಪ್ತಿಯಲ್ಲಿ ಇರುವವರನ್ನು ಗಮನದಲ್ಲಿಟ್ಟುಕೊಂಡು ಪಠ್ಯವನ್ನು ರಚಿಸಿದರೆ ಕೆಳಗಿನವರಿಗೆ ಹೊರೆ ಎನಿಸದೆ, ಮೇಲಿನವರಿಗೆ ಕಳಪೆ ಎನಿಸದೆ ಮೂವರನ್ನೂ ಸಂಧಿಸುವ ಸುವರ್ಣಸೇತುವೆಯಂತೆ ಅಪೇಕ್ಷಣೀಯವಾಗಿ ವರ್ತಿಸುತ್ತದೆ.

ಪಠ್ಯವನ್ನು ಕುರಿತಂತೆ ಇನ್ನೂ ಒಂದು ಮಾತನ್ನು ಹೇಳಬೇಕು. ನಮ್ಮಲ್ಲಿ ಪ್ರತಿಯೊಂದು ರಾಜ್ಯಕ್ಕೂ ಅದರದೇ ರಾಜ್ಯ ಪಠ್ಯಕ್ರಮ ಮತ್ತು ಕೇಂದ್ರಕ್ಕೆ ಸಂಬಂಧಿಸಿದ ಕೇಂದ್ರೀಯ ಪಠ್ಯಕ್ರಮ ಜಾರಿಯಲ್ಲಿದೆ. ಕೇಂದ್ರೀಯ ಪಠ್ಯಕ್ರಮ ಕೇಂದ್ರ ಸರ್ಕಾರದ ಅಧಿಕಾರಿಗಳ ಮತ್ತು ನೌಕರರ ಮಕ್ಕಳು ಅಭ್ಯಾಸ ಮಾಡಲು ರೂಪಿಸಲಾಗಿರುವ ಕೇಂದ್ರೀಯ ಶಾಲೆಗಳಿಗಾಗಿ ರಚಿಸಿರುವಂಥದು. ಇದು ರಾಜ್ಯಗಳ ಪಠ್ಯಕ್ರಮಕ್ಕಿಂತ ಉನ್ನತವಾದುದೆಂದು ಭಾವಿಸಲಾಗಿದೆ. ಅಂದರೆ ರಾಜ್ಯಗಳ ಪಠ್ಯಕ್ರಮ ಕೇಂದ್ರದ ಪಠ್ಯಕ್ರಮಕ್ಕಿಂತ ಕಡಿಮೆಯದೆಂದು ಅರ್ಥೈಸಲಾಗಿದೆ.

ಕೇಂದ್ರೀಯ ಶಾಲೆಗಳಲ್ಲಿ ಅಭ್ಯಾಸ ಮಾಡುವವರೆಲ್ಲ ಅತಿಬುದ್ಧಿವಂತರೆಂದು ಭಾವಿಸ ಬೇಕಾಗಿಲ್ಲ. ಅವರಿಗೆ ಅನ್ಯರಿಗಿಂತ ಅವಕಾಶಗಳು ಮತ್ತು ಸೌಲಭ್ಯಗಳು ಹೆಚ್ಚಾಗಿ ದೊರೆಯುತ್ತವೆಯಷ್ಟೆ. ಅವರಲ್ಲಿಯೂ ಸರಾಸರಿಗಿಂತ ಕಡಿಮೆ ಬುದ್ಧಿಮತ್ತೆಯವರೂ ಇದ್ದಾರೆ. ಅಂಥವರಿಗೆಲ್ಲ ವಿಶೇಷವಾದ ಮನೆಪಾಠದಿಂದ ಹೆಚ್ಚಿನ ಶಕ್ತಿಯನ್ನು ತುಂಬಲಾಗುವುದು.

ಕೇಂದ್ರೀಯ ಪಠ್ಯಕ್ರಮವನ್ನು ಕೆಲವು 'ಪಬ್ಲಿಕ್ ಸ್ಕೂಲ್'ಗಳೂ ಅಳವಡಿಸಿಕೊಂಡು ಸಮಾಜದ ಉನ್ನತ ವರ್ಗದವರೆಂದು ಕರೆಸಿಕೊಳ್ಳುವವರ ಮಕ್ಕಳನ್ನು ಆಕರ್ಷಿಸಿ, ಪೋಷಕರಿಂದ ದೇಣಿಗೆಗಳನ್ನು ಕೊಳ್ಳೆಹೊಡೆಯುತ್ತಿವೆ. ಇದನ್ನು ನಿಯಂತ್ರಿಸಲು ಈ ತನಕ ಯಾರಿಗೂ ಸಾಧ್ಯವಾಗಿಲ್ಲ.

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಸರ್ವರೂ ಸಮಾನರು. ಸಮಾಜವಾದ ಸಿದ್ಧಾಂತದ ಪ್ರಕಾರ ಸರ್ವರಿಗೂ ಸಮಾನ ಅವಕಾಶಗಳು ಲಭ್ಯವಾಗಬೇಕು. ಆದರೆ ತಾರತಮ್ಯದಿಂದ ಕೂಡಿರುವ ಈಗಿನ ನಮ್ಮ ಪಠ್ಯಕ್ರಮ ಸಮಾನತೆಯನ್ನು ಗೌರವಿಸುವ ಮತ್ತು ಅದನ್ನು ಉಳಿಸಿಕೊಳ್ಳುವ ದಿಸೆಯಲ್ಲಿ ಯಾವುದೇ ರೀತಿಯಲ್ಲೂ ಯಶಸ್ವಿಯಾಗಿಲ್ಲ. ಆದ್ದರಿಂದ ಸ್ಥಳೀಯ ಆದ್ಯತೆಗಳ ಹೊಂದಾಣಿಕೆಯೊಂದಿಗೆ ಸಮಾನ ರೀತಿಯ ಪಠ್ಯಕ್ರಮವನ್ನು ರೂಪಿಸಿ, ಸಮಾನ ರೀತಿಯ ಪಠ್ಯಪುಸ್ತಕಗಳನ್ನು ಸಿದ್ಧಪಡಿಸಬೇಕು.

ಇಲ್ಲಿ ಒಂದು ಮುಖ್ಯ ವಿಷಯವನ್ನು ಹೇಳಬೇಕು. ಕೇವಲ ಸಮಾನ ಪಠ್ಯವ್ಯವಸ್ಥೆಯಿಂದಲೇ 'ಶೈಕ್ಷಣಿಕ ಸ್ವರ್ಗ' ಸ್ಥಾಪನೆಯಾಗುವುದಿಲ್ಲ. ಈ ಪಠ್ಯವನ್ನು ಉಪಯೋಗಿಸಿ ವಿದ್ಯಾರ್ಥಿಗಳ ಭವಿಷ್ಯವನ್ನು ರೂಪಿಸುವ ರೂವಾರಿಗಳಾಗಿರುವ ಶಿಕ್ಷಕರು ಶ್ರದ್ಧಾಪೂರ್ವಕವಾಗಿ ಅರ್ಪಣಾ ಮನೋಭಾವದಿಂದ ತಮ್ಮ ಬೋಧನಾ ಕಾರ್ಯವನ್ನು ನಿರ್ವಹಿಸಬೇಕು.

ಅಧ್ಯಾಪಕರ ಬೋಧನೆಯು ಲವಲವಿಕೆಯಿಂದ ಕೂಡಿದ್ದು, ವಿದ್ಯಾರ್ಥಿಗಳ ಅಂತರಂಗವನ್ನು ಸೆರೆಹಿಡಿಯುವ ಮತ್ತು ಅವರಲ್ಲಿ ಉದ್ಭವಿಸುವ ಸಂಶಯಗಳನ್ನು ನಿವಾರಿಸುವ ವೈಖರಿಯಿಂದ ಕೂಡಿದುದಾಗಿರಬೇಕು. ಅಲ್ಲದೆ, ಶೈಕ್ಷಣಿಕ ಮನೋ ವಿಜ್ಞಾನವು ನಿರ್ದೇಶಿಸುವಂತೆ ಎಳೆಯರ ಶಿಕ್ಷಣ ಮಾಧ್ಯಮವು ಮಾತೃಭಾಷೆ ಅಥವಾ ಅದಕ್ಕೆ ಸಮೀಪವರ್ತಿಯಾದ ಆಯಾ ರಾಜ್ಯದ (ಪ್ರಾದೇಶಿಕ) ಅಧಿಕೃತ ಭಾಷೆಯೇ ಆಗಿರಬೇಕು. ಈ ಕುರಿತು ಶಿಕ್ಷಣತಜ್ಞರು ಮತ್ತು ಪಠ್ಯಪರಿಣತರ ಸಹಚಿಂತನೆ ನಡೆಯಬೇಕು. ಹೀಗೆ ರೂಪುಗೊಳ್ಳುವ ಪಠ್ಯ ಸಾರ್ಥಕವಾಗಬೇಕು.

**ಎ. ಆರ್. ನಾರಾಯಣಭಟ್ಟ**
೧೬೬೮, 'ಗೀತಾ ಕುಟೀರ', ವಿಠಲನಗರ, ಕುಮಾರಸ್ವಾಮಿ ಬಡಾವಣೆ ೨ನೇ ಹಂತ, ಬೆಂ.– ೭೮




# ವಕ್ರರೇಖೆ

ವಸುಮತಿ ಉಡುಪ

ಮದುವೆಗೆ ಮುಂಚೆ ಇವನು ಕಂಡೀಷನ್ ಹಾಕಿದ್ದ, "ನಮ್ಮಪ್ಪನ್ನ ಚೆನ್ನಾಗಿ ನೋಡ್ಕೋಬೇಕು. ತಮ್ಮ ಸುಖಾನ ತ್ಯಾಗ ಮಾಡಿ ನನ್ನ ಸಾಕಿದಾರೆ. 'ಕಣ್ಣಲ್ಲಿ ಕಣ್ಣಿಟ್ಟು' ಅನ್ನೋ ಹಾಗೆ ನೋಡ್ಕಂಡಿದಾರೆ. ಅವರನ್ನ ಚೆನ್ನಾಗಿಟ್ಕೋಬೇಕು ಅನ್ನೋದೇ ನನ್ನ ಜೀವನದ ಧ್ಯೇಯ. ಇದಕ್ಕೆ ನೀವು ಸಹಕಾರ ಕೊಡ್ತೀರೀಂತಾದ್ರೆ ನಿಮ್ಮನ್ನ ಮದುವೆಯಾಗೋಕೆ ನನ್ನ ಅಭ್ಯಂತರ ಇಲ್ಲ." ಕೊಂಚ ಗ್ರಾಂಥಿಕವಾಗಿ ಮಾತಾಡಿದ ಅನ್ನಿಸಿ ಕಿಸಕ್ಕನೆ ನಗು ಬಂದುಬಿಟ್ಟಿತ್ತು. ನಗಲು, ಅತ್ತ ಹಾಗೆ ಮಾಡಲು, ಸಕಾರಣ ಇರಬೇಕೂಂತಲೂ ಇರಲಿಲ್ಲ. ಯಾವುದಾದರೂ ಕಾರಣಕ್ಕೆ ಹಟ ಹಿಡಿಯಬೇಕಾದ ಪ್ರಸಂಗ ಬಂದರೆ ಸುಳ್ಳುಸುಳ್ಳೇ ಅಳುವ ನಟನೆ ಮಾಡಿ, ಹುಟ್ಟಿದಾಗಿನಿಂದ ನೋಡಿದ ಅಮ್ಮನಿಗೆ ನಟನೆ ಗೊತ್ತಾಗುವುದಿಲ್ಲವಾ ? 'ಕಣ್ಣಲ್ಲಿ ನೀರಿಲ್ಲ, ಮೂಗಲ್ಲಿ ಸಿಂಬಳ ಇಲ್ಲ. ಅಳೋ ಚಂದ ನೋಡು' ಚುಡಾವಣೆಯ ಮಾತಾಡುತ್ತಿದ್ದಳು ಅಮ್ಮ.

ನಮ್ಮಮ್ಮನ ತಲೆಯೇ ತಲೆ. ಇವನು ಏಕಾಂತದಲ್ಲಿ ಮಾತಾಡುವ ಅಪೇಕ್ಷೆ ತೋರಿಸಿ ಇವನೊಂದಿಗೆ ನಾನು ಉಪ್ಪರಿಗೆ ಹತ್ತುವ ಮುಂಚೆ ಸನ್ನೆ ಮಾಡಿ ಒಳಗೆ ಕರೆದು ದೇವರ ಮುಂದಿದ್ದ ಮಲ್ಲಿಗೆಮಾಲೆಯನ್ನು ಗೇಣುದ್ದ ಕತ್ತರಿಸಿ ನನ್ನ ಜಡೆಗೆ ಮುಡಿಸಿ, 'ಹೋಗು...' ಅನ್ನುವಂತೆ ಬೆನ್ನಿನ ಮೇಲೆ ಕೈಯಿಟ್ಟು ಚೂರೇ ದೂಕಿದ್ದಳು. ಹೂವು ಅಂದರೆ ನನಗೆ ಇಷ್ಟ ಇಲ್ಲ ಅಂತಿಲ್ಲ. ಹೂವಿನ ಘಮ್ಮನೆ ಪರಿಮಳ ಅಂದರೆ ಮೂಗು ಅರಳುತ್ತದೆ. ಮನಸ್ಸಿಗೆ ಮುದವಾಗುತ್ತದೆ. 'ಸುಗಂಧ ಚಿಕಿತ್ಸೆ' ಅನ್ನುವ ಚಿಕಿತ್ಸಾಪದ್ಧತಿಯೇ ಇದೆಯಂತಲ್ಲ ? ಆದರೆ ಹೂವನ್ನು ಎದುರಿಗೆ ಹಿಡಿದು, 'ತಗೋ, ಮುಡ್ಕೋ...' ಅಂದರೆ ನಾನು ಮಾರು ದೂರ. ಹೂವನ್ನು ಹೂವಿನ ಹಾಗೆ ಎಷ್ಟೆಲ್ಲಾ ನಾಜೂಕಾಗಿ ಕಾಪಾಡ್ಕೋ ಬೇಕಾಗುತ್ತಪ್ಪಾ. ಮಲ್ಲಿಗೆ ಹೂವಂತೂ ಕೂತು ಎದ್ದಲ್ಲಿ, ಓಡಾಡಿದಲ್ಲಿ, ದಳ ಉದುರಿಸುತ್ತಾ ಘಂಟೆ ಹೊತ್ತು ಅನ್ನುವುದರಲ್ಲಿ ತಲೆ ಶಾಖಕ್ಕೆ ಬಾಡಿ ಸೊಪ್ಪಾಗಿ ಜೋಲಾಡುತ್ತದೆ. ನಮ್ಮಮ್ಮ ಮನೆಯಿಡೀ ಕಸ ಉದುರುತ್ತದೆ ಅನ್ನುವ ಕಾರಣಕ್ಕೆ ಹೂ ಮುಡಿಯುವುದನ್ನು ಇಷ್ಟಪಡುವುದಿಲ್ಲ. ನಮ್ಮ ಮನೆಯಲ್ಲಿ ಹೂವಿನ ಸ್ಥಾನ ದೇವರಪಟದ ಮೇಲೆ ಮಾತ್ರ. ಹಬ್ಬಹರಿದಿನಗಳಲ್ಲಿ ಹಣ್ಣು, ಹೂವಿನ ಬೆಲೆ ಗಗನಕ್ಕೇರುವ ಕುರಿತು ಪೇಪರಲ್ಲಿ ಓದುವಾಗ, ಅವರಿವರ ಬಾಯಲ್ಲಿ ಕೇಳುವಾಗ, ನಮಗೆ ಆಶ್ಚರ್ಯ. ಗಗನಕ್ಕೇರುವುದನ್ನು ಕೊಳ್ಳದೆ ಇದ್ದರೆ ಏನಾಗುತ್ತಪ್ಪಾ ? ದೇವರು ಇಂಥಾದ್ದೇ ಹೂವು ಬೇಕು, ಹಣ್ಣು ಬೇಕು ಎಂದು ಹಟ ಹಿಡಿಯುತ್ತಾನಾ ? 'ಪತ್ರಂ, ಪುಷ್ಪಂ, ಫಲಂ, ತೋಯಂ..' ಅಂತೇನೋ ಮಂತ್ರ ಉಂಟಂತಲ್ಲ ? ಹೂವು ಇಡುವಲ್ಲಿ ಹೂವಿನ ದಳ ಇಟ್ಟರೂ ಸಾಕು. ಅಪ್ಪ ಹೇಳ್ತಿದ್ದಿದ್ದನ್ನು ಕೇಳ್ಕೊಂಡಿದ್ದು ಅನ್ನಿ. ಅವತ್ತು ಹೆಣ್ಣು ನೋಡಲು ಬಂದ ದಿನ ಕೂಡಾ ನಾನು ಹೂ ಮುಡಿದುಕೊಂಡಿರಲಿಲ್ಲ. 'ಮುಡ್ಕೋ...' ಅಂತ ಅಮ್ಮ ಹೇಳಿರಲಿಲ್ಲ. ಬಂದೋರಿಗೆ ಕೊಡೋಕೆ ಅಂತ ತಂದಿದ್ದ ಒಂದು ಮಾರು ಹೂವಿಗೆ ಅಮ್ಮ ನೀರು ಚಿಮುಕಿಸಿಟ್ಟು ಕಾಪಾಡಿಕೊಂಡಿದ್ದಳು. ಇದೆಲ್ಲಾ ಪುರಾಣ ಪ್ರಸ್ತುತ ವಿಷಯಕ್ಕೆ ಬೇಕೇ ಆಗಿಲ್ಲ. ಯಾಕೋ ತನ್ನಷ್ಟಕ್ಕೆ ನೆನಪಿಗೆ ಬಂದಿತ್ತು. ಮಲ್ಲಿಗೆಮಾಲೆ ಮುಡಿಗೇರಿಸಿಕೊಂಡ ನಾನು ಮುಂದೆ ಮುಂದೆ, ನನ್ನ ಕೈ ಹಿಡಿಯಲಿರುವ ಸುರೇಶ ಹಿಂದೆ ಹಿಂದೆ. ಹೂವಿಗೆ ಮತ್ತೇರಿಸುವ ಗುಣ ಖಂಡಿತಾ ಇರುತ್ತೆ ಕಣ್ರೀ. ರೂಮಿ ನೊಳಗೆ ಕಾಲಿಟ್ಟ ಅವನು ಉಸಿರನ್ನು ದೀರ್ಘವಾಗಿ ಎಳೆದುಕೊಂಡು ಸುಖಿಸುತ್ತಿದ್ದಾನೆ ಎಂದು ನನಗೆ ಅನುಮಾನ. ಇರಲಿ, ಏಕಾಂತದಲ್ಲಿ ಮಾತಾಡೋಕೆ ಜೊತೆಯಲ್ಲಿ ಬಂದವನು ಶುರೂನಲ್ಲಿ ಹೇಳಿದ ಆಣಿಮುತ್ತುಗಳನ್ನು ಉದುರಿಸಿದ್ದು. 'ನಮ್ಮಪ್ಪನ್ನ ಚೆನ್ನಾಗಿ ನೋಡ್ಕೋಬೇಕು', ಎನ್ನುವಲ್ಲಿಂದ ಶುರುವಾಗಿ 'ನನ್ನ ಅಭ್ಯಂತರ ಇಲ್ಲ' ಅನ್ನುವ ವರೆಗೆ ಒಂದೇ ಓಘ. ಬಾಯಿಪಾಠ ಮಾಡಿಕೊಂಡಿದ್ದನಾ ? ಅಥವಾ ಲೆಕ್ಚರರ್ಸ್ ಅನಿಸಿಕೊಂಡವರು ಮಾತಾಡುವುದೇ ಹೀಗಾ ? ಅವನ ಮುಖದ ಗಾಂಭೀರ್ಯ ನೋಡಿ, 'ಇದೇನು ಕ್ಲಾಸ್ ರೂಮಾ ?' ಅನಿಸಿ ನಗೆ ಬಂದು,

"ಯಾಕೆ ನಗ್ತಿದೀರಾ ?" ಕೇಳಿದ್ದ.

"ಸುಮ್ನೇ..."

"ಸುಮ್ಸುಮ್ನೆ ನಗೋರಿಗೆ ಏನಂತಾರೆ ಗೊತ್ತಾ ?"

ಯಾಕೋ ಮೊದಲ ಮಿಲಾಕತ್ತೇ ಕಹಿಯಾಗುತ್ತಿದೆ. ಮೂಗಿನ ತುದೀಲೇ ಕೋಪಾನಾ ? ಅಥವಾ ಲೆಕ್ಚರರ್ಸು ಅಂದ್ರೆ... ಅರಳುವುದರಲ್ಲಿದ್ದ ನಗೆ ಅಲ್ಲೇ ಮುರುಟಿಹೋಗಿ ಈಗ ನಗುವ ಸರದಿ ಈ ಘಟಿಂಗನದು.

"ಹೆದರ್ಕೊಂಡ್ರೇನ್ರೀ ? ತಮಾಷೆ ಅರ್ಥವಾಗಲ್ವಾ ?" ಕೇಳಿದ್ದ.

'ನೀವು ಬೇಕು ಅಂದ್ರೆ ನಿಮ್ಮಪ್ಪಾನೂ ಬೇಕು..' ಯಾವೊಂದು ದುರ್ಘಳಿಗೆಯಲ್ಲಿ ಹೇಳಿ 'ಬಲು ಜಾಣೆ' ಎಂದು ನನ್ನ ಬೆನ್ನು ನಾನೇ ತಟ್ಟಿಕೊಂಡೆನೋ ? ಮಾತು ಮಾತಿಗೆ ನಗುತ್ತಿದ್ದವಳ ನಗೆಗೆ ಗರ ಬಡಿದಿದೆ. ಬದುಕು ಅಂದರೆ ಹೂವಿನ ಹಾಸಿಗೆ ಅಂದುಕೊಂಡಿದ್ದ ಮುಗ್ಧತೆಗೆ ಬರೆ ಬಿದ್ದಿದೆ. ಆಡಲಾಗದ, ಅನುಭವಿಸಲಾಗದ ಸಂಕಟ.

'...'

"ನನ್ನ ಪ್ರಶ್ನೆಗೆ ಉತ್ತರ ಹೇಳಲ್ವಾ ?"

ದೇವರಾಣೆಗೂ ಹೀಗೊಂದು ಉತ್ತರ ನನ್ನ ಬಾಯಲ್ಲಿ ಬರುತ್ತೆ ಅಂತ ಅಂದ್ಕೊಂಡಿರ್ಲಿಲ್ಲ ಕಣ್ರೀ. ಎಷ್ಟೊಳ್ಳೇ ಡೈಲಾಗ್ ಹೊಡೆದಿದ್ದೆ ಅಂತ, ಸಮಯಸ್ಫೂರ್ತಿನಾ ?

"ನೀವು ಬೇಕು, ನಿಮ್ಮಪ್ಪ ಬೇಡ ಅನ್ನೋಕಾಗುತ್ತಾ ? ನೀವು ಬೇಕು ಅಂದ್ರೆ ನಿಮ್ಮಪ್ಪಾನೂ ಬೇಕು..."

ನಾನು ನೆಗೆತದ ನಡಿಗೆಯಲ್ಲಿ ಮೆಟ್ಟಿಲಿಳಿಯುವಾಗ ಅವನು ನನ್ನ ಮುಡಿಯ ಮಾಲೆಯಿಂದ ಉದುರಿದ ಮಲ್ಲಿಗೆಯೊಂದನ್ನು ಕೈಲಿ ಹಿಡಿದು ಆಘ್ರಾಣಿಸುತ್ತಾ...

* * *

'ನೀವು ಬೇಕು ಅಂದ್ರೆ ನಿಮ್ಮಪ್ಪಾನೂ ಬೇಕು..' ಯಾವೊಂದು ದುರ್ಘಳಿಗೆಯಲ್ಲಿ ಹೇಳಿ 'ಬಲು ಜಾಣೆ' ಎಂದು ನನ್ನ ಬೆನ್ನು ನಾನೇ ತಟ್ಟಿಕೊಂಡೆನೋ ? ಮಾತುಮಾತಿಗೆ ನಗುತ್ತಿದ್ದವಳ ನಗೆಗೆ ಗರ ಬಡಿದಿದೆ. ಬದುಕು ಅಂದರೆ ಹೂವಿನ ಹಾಸಿಗೆ ಅಂದು ಕೊಂಡಿದ್ದ ಮುಗ್ಧತೆಗೆ ಬರೆ ಬಿದ್ದಿದೆ. ಆಡಲಾಗದ, ಅನುಭವಿಸಲಾಗದ ಸಂಕಟ. ನನ್ನ ಸ್ವಭಾವ ಸಹಜವಾಗಿದ್ದ ಹಗುರ ಮನೋವೃತ್ತಿಯಲ್ಲಿ ಅಂತರಂಗವನ್ನು ತೆರೆದಿಟ್ಟವಳು ವಾಸ್ತವಕ್ಕೆ ಮುಖಾಮುಖಿಯಾಗಿರುವ ಈ ಗಳಿಗೆಯಲ್ಲಿ ನಿರ್ವಿಣ್ಣಳಾಗುತ್ತಿದ್ದೇನೆ. ಮೈಮನಗಳಲ್ಲಿ ಕಂಪನ. ತಾಯಿಲ್ಲದ ಮಗುವಿಗೆ ಮಲತಾಯಿಯನ್ನು ತರದೆ ಅಂಗೈ ಮಲ್ಲಿಗೆಯಂತೆ ಜೋಪಾನ ಮಾಡಿದ ಮಾವನಲ್ಲಿ ನನಗೆ ಗೌರವ ಇತ್ತು. ಶರೀರ ಸಹಜ ಬಯಕೆಗಳನ್ನು ಕೊಂದುಕೊಂಡು 'ಮಗುವಿಗಾಗಿ...' ಎನ್ನುವ ಹೆಸರಲ್ಲಿ ತಾಯಿಯಾದವಳು ಸನ್ಯಾಸಿನಿಯಂತಿರುವುದನ್ನು ಯಾವ ತ್ಯಾಗದ ಹಣೆಪಟ್ಟಿಯನ್ನೂ ಹಚ್ಚದೆ 'ಇರುವುದೇ, ಇರಬೇಕಾದ್ದೇ ಹಾಗೆ...' ಎನ್ನುವಂತೆ ನೋಡುವ ಇದೇ ಸಮಾಜ 'ಮಗುವಿಗಾಗಿ...' ಎನ್ನುವ ಹೆಸರಲ್ಲಿ ವಿಧುರನೊಬ್ಬ ಮರುಮದುವೆಯಾಗುವುದನ್ನು 'ಇರುವುದೇ ಹಾಗೆ...' ಎನ್ನುವಂತೆ ಸಲೀಸಾಗಿ ಸ್ವೀಕರಿಸಿಬಿಡುವ ವಿಪರ್ಯಾಸದ ನಡುವೆ ಇವನ ತಂದೆ ಒಬ್ಬ ಅಪರೂಪದ ಮನುಷ್ಯ, ಹೆಂಗರುಳಿನ ವ್ಯಕ್ತಿ ಅಂದುಕೊಂಡಿದ್ದೆ. ತ್ಯಾಗಿ ಅನ್ನಬೇಕೇ ? ಗಂಡಸರಿಗೆ ಮಾತ್ರ ಯಾಕೆ ಈ ವಿಶೇಷಣದ ಬಿರುದು ? ಮನಸ್ಸೊಪ್ಪಿರಲಿಲ್ಲ. ನಿಧನಿಧಾನವಾಗಿ ಅರ್ಥವಾಗುತ್ತಾ ಬಂತು, ಅದುಮಿಟ್ಟ ಬಯಕೆಗಳು ಹೊರಹರಿವನ್ನು ಕಂಡುಕೊಳ್ಳುವ ಪರಿಯೋ ಎನ್ನುವಂತೆ ಈ ಮನುಷ್ಯನ ನೋಟದಲ್ಲಿ ಒಂದು ಅಸಹಜತೆ ಇದೆ. ಅತೃಪ್ತ ಕಾಮನೆಗಳ ವಾಂಛೆ ಇದೆ. ಇದು ಪಿತೃಸಮಾನನೊಬ್ಬ ಸೊಸೆಯನ್ನು ನೋಡುವ ನೋಟ ಅಲ್ಲ. ಎಷ್ಟು ವಯಸ್ಸು ಮಾವನಿಗೆ ? ಐವತ್ಮೂರು, ಐವತ್ನಾಲ್ಕು ? ಅವತ್ತೊಂದು ದಿನ ನೀರು ಕುಡಿಯಲೆಂದು ಅನಿರೀಕ್ಷಿತವಾಗಿ ಕೋಣೆಯ ಬಾಗಿಲು ತೆಗೆದು ಈಚೆ ಬಂದಾಗ ಬಾಗಿಲ ಬದಿಯಿಂದ ಕಳ್ಳರಂತೆ ಸರಿದು ತನ್ನ ರೂಮು ಸೇರಿಕೊಂಡಿದ್ದವರನ್ನು ಕಂಡಿದ್ದೆ. ಕದದ ಬಿರುಕಿನಲ್ಲಿ ಕಣ್ಣಿಟ್ಟು... ಛೀ...ಛೀ... ಮೈ ಜುಂಗರಿಸಿತ್ತು. ಸ್ನಾನ ಮಾಡುವಾಗಲೂ ಭಯ, ಭೀತಿ. ಎಲ್ಲಿ ಯಾವ ಕಂಡಿಯಿದೆಯೋ ಎನ್ನುವ ಭ್ರಮೆ. ಕೈ ಹಿಡಿದವನಿಗೆ ಹೇಳಿದರೆ ನಂಬಿಯಾನೇ ? ಅಥವಾ ಬೇರೆ ಮನೆ ಮಾಡಬೇಕೆಂದು ಆಟ ಹೂಡುತ್ತಿದ್ದಾಳೆಂದು, ಈ ಆರೋಪ ಹೊರಿಸುತ್ತಿದ್ದಾಳೆಂದು ಭಾವಿಸಿದರೆ ? ಎಷ್ಟಾದರೂ ನಾನು ಹೊರಗಿನವಳು. ಪುಣ್ಯಕ್ಕೆ ಮಾವ ಕೆಲಸಕ್ಕೆ ಹೋಗುವಂತವರಾದ್ದರಿಂದ ಬಚಾವು. ದಿನದ ಇಪ್ಪತ್ನಾಲ್ಕು ಘಂಟೆ ಎಚ್ಚರ ತಪ್ಪದಂತೆ ಇರಬೇಕಾದ್ದಿಲ್ಲ. ಆದರೆ ನಾ ಬಂದ ಆರು ತಿಂಗಳಲ್ಲಿ ಆರು ಬಾರಿಯಾದರೂ ಪ್ರಾಣಿ ರಜಾ ಹಾಕಿದೆ. ಒಂದುಸಲವಂತೂ ಸುಳ್ಳೇ ಮೆಡಿಕಲ್ ಸರ್ಟಿಫಿಕೇಟ್ ಮಾಡಿಸಿ ಹದಿನೈದು ದಿನಗಳ ದೀರ್ಘಾವಧಿ ರಜ. ನನಗೆ ಸಜ. 'ಪಾಪ ಅಪ್ಪ, ಇನ್ನಾದ್ರೂ ಸುಖವಾಗಿರ್ಲಿ...' ಅನ್ನುತ್ತಾನೆ ಮಗ. ಅಪ್ಪ ಕೆಲಸ ಬಿಟ್ಟರೂ ಅವನಿಗೇನು ಅಭ್ಯಂತರ ಇಲ್ಲ. ಮಾವನ ಜೊತೆ ಅಗುಳಿ ಹಾಕಿದ ಮುಂಬಾಗಿಲ ಮನೆಯಲ್ಲಿ ಒಬ್ಬಳೇ ಇರಬೇಕೆಂದರೆ ಜೀವಭಯ. ಅಲ್ಲಲ್ಲ, ಮಾನಭಯ. ಅಡುಗೆಯಲ್ಲಿ ಪಳಗಿರುವ ನೆಪದಿಂದ ಸಹಾಯಕ್ಕೆ ಬರುವ, ಗಂಟೆಗೊಮ್ಮೆ ಕಾಫಿ ಕೇಳುವ ಹೆಳೆಯಲ್ಲಿ ಎದುರಿಗೆ ಕರೆಯುವ, ಒಟ್ಟಿಗೆ ಊಟ ಮಾಡೋಣವೆನ್ನುತ್ತಾ ಬಲಾತ್ಕಾರದಿಂದ ತಟ್ಟೆಗೆ ಬಡಿಸುವ, ಇಂಥಾ ಸೂಕ್ಷ್ಮಗಳು ಅರ್ಥವಾಗದಿರುವಷ್ಟು ನಾನು ಹೆಡ್ಡಿಯೇ ? ಹೆಡ್ಡಿ ಎಂಬಂತೆ ತೋರಿಸಿಕೊಳ್ಳುತ್ತೇನೆ, ಅಷ್ಟೆ. ಮಾವ ಮನೆಯಲ್ಲಿದ್ದರೆ ಬಿಡುಹೊತ್ತಿನಲ್ಲೆಲ್ಲಾ ಕೋಣೆಯ ಅಗುಳಿ ಎಳೆದು ಸ್ವಯಂ ಬಂಧನ. ಮೊನ್ನೆ ಮಾವ ಬಾಗಿಲು ಬಡಿದಿದ್ದರು. ಬೆವೆತು ನೀರಾಗಿದ್ದೆ. ಜೀವ ಕೈಲಿ ಹಿಡಿದು ಬಾಗಿಲು ತೆಗೆದು ನೋಡಿದರೆ ಕಾಫಿ ಮಾಡಿಕೊಂಡು ತಂದಿದ್ದಾರೆ ! ಆಹಾ, ವಾತ್ಸಲ್ಯವೇ ? ಹೀಗೆ ಎಷ್ಟು ದಿನ ಕಾಲ ಕಳೆಯಬಹುದು ? ಕಳೆಯಬೇಕು ? ಕುತ್ತಿಗೆ ಅಮುಕುವ ಕ್ರೌರ್ಯಗಳು ಬದುಕಿನ ಪಥದಲ್ಲಿ ಧಿಗ್ಗನೆ ಎದುರಾಗುವ ಪರಿಯೇ ವಿಸ್ಮಯ, ವಿಚಿತ್ರ, ನಿಗೂಢ.

**ವಸುಮತಿ ಉಡುಪ**
'ಗೌರಿ', ನಂ. ೧೯೫, ೯ನೇ ಕ್ರಾಸ್, ವಿಜಯನಗರ ರೈಲ್ವೆ ಬಡಾವಣೆ, ಮೈಸೂರು – ೫೭೦ ೦೧೬

ಕಾವ್ಯಲೋಕ



## ಕಣ್ಣೀರ ಕಡಲು

ಬೀದಿಯಲ್ಲಿ ಹೋಗೋರೆ ಹಾಡೆಂದು ಕಾಡಬೇಡಿ
ಹಾಡಲ್ಲ ನನ್ನ ಹೊಟ್ಟೆ ಉರಿ–ಭೀಮನೆ
ಬೆವರಲ್ಲ ನನ್ನ ಕಣ್ಣೀರು.

ಅತ್ತು ಅತ್ತು ನೀರು ಬತ್ತಿತ್ತೋ
ಕಣ್ಣಲ್ಲಿ ರಕ್ತ ಹರಿದು ಬಂದಿತೋ–ಭೀಮನೆ
ಕಣ್ಣು ಕೈಯಲ್ಲಿ ಬಂದಿತ್ತೋ.

ಬಡವರು ಸತ್ತರೆ ಸಿನಗಾರ ಅದಕ್ಕಿಲ್ಲ
ಕಣ್ಣೀರು ಇಡೋರು ಕಡಿಮಿಲ್ಲ–ಭೀಮನೆ
ಆಕ್ರಂದನ ಮುಗಿಲು ಮುಟ್ಟಿತೋ.

ಬಡವರು ಸತ್ತರೆ ಹೂಳಲು ಜಾಗ ಇಲ್ಲ
ಬಳಗದಲ್ಲಿ ಹೆಣ ಮುಚ್ಚಿತೋ–ಭೀಮನೆ
ಕಣ್ಣೀರ ಕಡಲ ವಣಗಿ ಹೋಯಿತೋ.

ಬಡವರು ಸತ್ತರೆ ಸುಡಲಿಕ್ಕೆ ಕಟ್ಟಿಗಿಲ್ಲ
ಉದರ ಬೆಂಕಿಯಲ್ಲಿ ಹೆಣ ಬೆಂದೋ–ಭೀಮನೆ
ಬಡವರಿಗೆ ಸಾವ ಬರಬಾರದೋ.

**ಶ್ರೀಮಂತ ಎಸ್. ಜುತ್ತಿ**
ಅಧ್ಯಕ್ಷರು, ಎರಗನ್ನಡ ವೇದಿಕೆ, ಹಸರಗುಂಡಗಿ ಅಂಚೆ – ೫೮೫ ೨೦೮
ಚಿಂಚೋಳಿ ತಾಲೂಕು, ಗುಲಬುರ್ಗಾ ಜಿಲ್ಲೆ

# ಇರುಳರು

ಪರಂಜ್ಯೋತಿ

ಇರುಳರು ನೀಲಗಿರಿ ಜಿಲ್ಲೆಯ ಉತ್ತರ ಪೂರ್ವ ಮತ್ತು ದಕ್ಷಿಣ ಇಳಿಜಾರು ಪ್ರದೇಶಗಳಲ್ಲಿ ವಾಸಿಸುತ್ತಾರೆ. ಇವರಲ್ಲಿ ಮುದುಮ, ಕಸಬ ಮತ್ತು ಉರುಳಿ ಇರುಳ – ಹೀಗೆ ಮೂರು ಪಂಗಡಗಳಿವೆ. ಇರುಳರ ವಸತಿ ಸ್ಥಳಗಳನ್ನು ಅಥವಾ ಊರುಗಳನ್ನು 'ಮೊಟ್ಟ' ಅಥವಾ 'ಅರಲ್' – ಎಂದು ಕರೆಯುತ್ತಾರೆ. ಐದಾರು ಮನೆಗಳಷ್ಟೇ ಇರುವ ಸಣ್ಣ ಮೊಟ್ಟಗಳೂ ಉಂಟು. ೬೨ ಊರುಗಳಲ್ಲಿ ವಾಸಿಸುವ ಇವರ ಜನಸಂಖ್ಯೆ ಸುಮಾರು ೧ ಲಕ್ಷದ ೭೫ ಸಾವಿರ.

ಅರಣ್ಯವಾಸಿಗಳಾದ ಇವರದು ಎತ್ತು ಏರುಗಳಿಲ್ಲದ, ಉತ್ತು ಹರಗದ ಪುರಾತನ ಸರತಿ ಬೇಸಾಯ ಪದ್ಧತಿ. ಕಾಡಿನಲ್ಲಿ ಅಷ್ಟಗಲಕ್ಕೆ ಗಿಡಗಳನ್ನು ಸವರಿ ಹಾಕಿ ಬೆಂಕಿ ಹಾಕಿ, ಮಳೆ ಬಿದ್ದನಂತರ ಅಲ್ಲಿ ಧಾನ್ಯ, ಕಾಳುಗಳನ್ನು ಬೆಳೆಸಿಕೊಳ್ಳುತ್ತಿದ್ದ ಪದ್ಧತಿ.

ನೀಲಗಿರಿಯ ಇತರ ಮೂಲ ನಿವಾಸಿಗಳಿಗಿಂತ ಹೆಚ್ಚು ಕಪ್ಪು. ಮಧ್ಯಮ ಎತ್ತರ, ಒಂದಿಷ್ಟು ಚಪ್ಪಟೆ ಎನಿಸುವಂಥ ಮೂಗು. ದಟ್ಟ ಕಪ್ಪು ಬಣ್ಣದ ಕಾರಣ ಇವರನ್ನು ಇರುಳರು ಎಂದು ಗುರುತಿಸಿರುವ ಸಾಧ್ಯತೆ ಇದೆ. ಕನ್ನಡ ಮತ್ತು ತಮಿಳಿನಲ್ಲಿ 'ಇರುಳು' ಶಬ್ದಕ್ಕೆ ಕತ್ತಲೆ ಎಂಬ ಅರ್ಥವಿರುವುದನ್ನು ನೆನಪಿಸಿಕೊಳ್ಳ ಬಹುದು. ಇವರದು ಕನ್ನಡ, ತಮಿಳು ಮತ್ತು ಮಲಯಾಳಂ ಮಿಶ್ರಣದ ದಕ್ಷಿಣ ದ್ರಾವಿಡ ಭಾಷೆಯ ಪ್ರಾಂತ ಭಾಷೆಯಾದ ಇರುಳ ಭಾಷೆ!

ಹಿಂದೆ ಗಂಡಸರು ಸೊಂಟಕ್ಕೆ ಒಂದು ತುಂಡು ಪಂಚೆ ಕಟ್ಟಿಕೊಳ್ಳುತ್ತಿದ್ದರು. ಹೆಂಗಸರು ಪಂಚೆಯನ್ನು ಉದ್ದಕ್ಕೆ ಎದೆ ಮುಚ್ಚುವಂತೆ ಬಿಗಿದು ಕಟ್ಟಿಕೊಳ್ಳು ತ್ತಿದ್ದರು. ಈಗ ಗಂಡಸರು ಅಂಗಿ ಪಂಚೆ ಧರಿಸುತ್ತಾರೆ. ಹೆಂಗಸರು ಬಣ್ಣದ ಸೀರೆ ಕುಪ್ಪಸ ಧರಿಸುತ್ತಾರೆ. ನೈಟಿಗಳೂ ಬಳಕೆಯಲ್ಲಿವೆ.

ಕಾಡಿನಲ್ಲಿ ಬೆಳೆಯುವ ವಿವಿಧ ಜಾತಿಯ ಗಿಡಮರ ಬಳ್ಳಿಗಳ, ಹಾಗೆಯೇ ಔಷಧಿಗಾಗಿ ಬಳಕೆ ಯಾಗುವ ಗಿಡಮೂಲಿಕೆಗಳ ಪರಿಚಯ ಇವರಿಗಿದೆ. ತಮ್ಮದೇ ನಾಟಿ ವೈದ್ಯ ಪದ್ಧತಿಯನ್ನು ಅನುಸರಿಸುತ್ತಾರೆ.

ನೀಲಗಿರಿ ವಾಸಿಗಳಾದ ಇರುಳರಿಗೂ ಕೋಯಂಬತ್ತೂರು ಹಾಗೂ ಚೆಂಗಲ್ಪಟ್ಟು ಜಿಲ್ಲೆಗಳಲ್ಲಿ ವಾಸಿಸುವ ಇರುಳರಿಗೂ ಸಂಬಂಧವಿಲ್ಲ.

ಕಾಡಿನಲ್ಲಿ ಸಿಕ್ಕುವ ಮರಮುಟ್ಟುಗಳಿಂದ ಗುಡಿಸಲು ಗಳನ್ನು ನಿರ್ಮಿಸಿಕೊಳ್ಳುತ್ತಾರೆ. ಇವು ಸಹ ಒಂದೇ ಕಡೆ ಇರುವುದಿಲ್ಲ. ತಮ್ಮ ಹೊಲದಲ್ಲಿಯೇ ಗುಡಿಸಲು ಹಾಕಿಕೊಂಡು ಜೀವಿಸುತ್ತಾರೆ. ತಮ್ಮ ಹೊಲಗಳಲ್ಲಿ ಸಾಮೆ, ರಾಗಿ, ಅವರೆ – ಮುಂತಾದ ಧಾನ್ಯ, ಕಾಳುಗಳನ್ನು ಬೆಳೆಯುತ್ತಾರೆ. ಬಿದಿರು ಮತ್ತು ಇತರ ಗಿಡಮರಗಳನ್ನು ಬಳಸಿಕೊಂಡು ಮನೆಯಲ್ಲಿ ಉಪಯೋಗಕ್ಕೆ ಬರುವ ಹಲವು ವಸ್ತುಗಳನ್ನು ತಯಾರಿಸಿ ಸಂತೆಗಳಲ್ಲಿ ಮಾರಾಟ ಮಾಡುತ್ತಾರೆ. ಈಗ ಸರಕಾರ ಇವರಿಗೆ ಮನೆ ಕಟ್ಟಿಸಿಕೊಟ್ಟಿದೆ.

ಇರುಳರ ವಾಸಸ್ಥಳಗಳು ಸಮಶೀತೋಷ್ಣ ಪ್ರದೇಶ ದಲ್ಲಿರುವ ಕಾರಣ ಅಲ್ಲಿ ಹಲಸು, ಮಾವು, ಸೀಬೆ – ಮುಂತಾದ ಹಣ್ಣಿನ ಮರಗಳು ಬೆಳೆಯುತ್ತವೆ. ಪ್ರತಿಯೊಂದು ಕುಟುಂಬಕ್ಕೂ ಒಂದೆರಡಾದರೂ ಹಲಸಿನ ಮರಗಳಿರುತ್ತವೆ. ಅಲ್ಲಿಂದ ಹಣ್ಣು ಖರೀದಿಸಿ ಒಯ್ಯುವ ವ್ಯಾಪಾರಿಗಳು ಅಪರೂಪ. ಹಾಗಾಗಿ ಅವರು ಧಾರಾಳ ಹಲಸಿನ ಹಣ್ಣು ತಿನ್ನುತ್ತಾರೆ. ನೆಂಟರಿಷ್ಟರು ಬಂದಾಗ ಅವರಿಗೆ ಹೊರಿಸಿ ಕಳಿಸುತ್ತಾರೆ. ಬೀಜ ಗಳನ್ನು ಸಂಗ್ರಹಿಸಿಟ್ಟು ವರ್ಷವಿಡೀ ಬಳಸುತ್ತಾರೆ.

ಈಗ ಪರಿಸ್ಥಿತಿ ಬದಲಾಗಿದೆ. ಕಾಫಿ ಮತ್ತು ಟೀ ತೋಟಗಳು ಇರುಳರ ನೆಲೆಗಳನ್ನು ಸುತ್ತುವರಿದಿವೆ. ಅವರು ಪಾರಂಪರಿಕವಾಗಿ ಅನುಸರಿಸುತ್ತ ಬಂದಿದ್ದ ಕೃಷಿ ಪದ್ಧತಿಯೂ ಬದಲಾಗಿದೆ. ತಮ್ಮ ಮನೆಗಳ ಸುತ್ತಲೂ ಇರುತ್ತಿದ್ದ ಒಂದೆರಡು ಎಕರೆಯಷ್ಟು ಜಮೀನಿನಲ್ಲಿ ಕಾಫಿ, ಟೀ ಸಸಿ ಹಾಕಿದ್ದಾರೆ. ಅವರಿಂದ ಕಾಫಿ ಬೀಜ ಮತ್ತು ಟೀ ಎಲೆಯನ್ನು ಖರೀದಿಸುವ ಸಣ್ಣ ಮಟ್ಟಿನ ವ್ಯಾಪಾರಿಗಳಿದ್ದಾರೆ. ಇರುಳರು ಸಾಮೆ, ರಾಗಿಗೆ ಬದಲು ಹೆಚ್ಚಾಗಿ ಅಕ್ಕಿ ಬಳಸತೊಡಗಿದ್ದಾರೆ. ಹಿಂದಿನಂತೆ ವನ್ಯಪ್ರಾಣಿಗಳಿಂದ ತಮ್ಮ ಬೆಳೆ ರಕ್ಷಿಸಿಕೊಳ್ಳಲು ಕಷ್ಟಪಡಬೇಕಾಗಿಲ್ಲ! ಅದೇ ವೇಳೆ, ಅರಣ್ಯೋತ್ಪನ್ನಗಳ ಸಂಗ್ರಹ ಸಹ ನಿಂತಿದೆ!

ಮದುವೆ, ನೆಂಟತನದ ವಿಷಯದಲ್ಲಿ ಇರುಳರು ತೀರಾ ಕಟ್ಟುನಿಟ್ಟಿನ ಕೆಲವು ಸಂಪ್ರದಾಯಗಳನ್ನು ಅನುಸರಿಸುತ್ತಾರೆ. ಅವು ಇತರ ಆದಿವಾಸಿ ಸಮುದಾಯಗಳಿಗಿಂತ ತುಸು ಭಿನ್ನವಾಗಿರುತ್ತವೆ. ಕೆಲವು ಸ್ವಾರಸ್ಯಕರವೂ ಆಗಿರುತ್ತವೆ.

ನಿಸರ್ಗದ ಮಕ್ಕಳಾದ ಇವರು ಕೆಲಸಕ್ಕೆ ಹೋಗುವಾಗ ಅಥವಾ ಯಾರ ಮನೆಗಾದರೂ ಔತಣಕ್ಕೆ ಹೋಗುವಾಗ ಗಂಡ–ಹೆಂಡತಿ ಜೊತೆಯಾಗಿ ಹೋಗುತ್ತಾರೆ. ನಿತ್ಯ ದುಡಿಯುವ ಇವರು ವಾರಕ್ಕೊಮ್ಮೆ ಹೊಳೆಯಲ್ಲಿ ಮೀಯುತ್ತಾರೆ. ಆ ಸಂದರ್ಭದಲ್ಲಿ ಜೊತೆಗೆ ಮಕ್ಕಳನ್ನು ಕರೆದೊಯ್ಯುತ್ತಾರೆ.

ಇರುಳ ಸ್ತ್ರೀ





ಇರುಳ ಪುರುಷ

ಔತಣಕ್ಕೆ ನೆಂಟರಿಷ್ಟರನ್ನು ಕರೆದಾಗಲಂತೂ ಭಾರಿ ದುಬಾರಿಯಾಗುತ್ತದೆ. ಔತಣಕ್ಕೆ ಬಂದವರಿಗೆ ತಾವು ಬೆಳೆದ ಧಾನ್ಯ, ಕಾಳು, ತರಕಾರಿ ಇತ್ಯಾದಿಯನ್ನು ತಮಗೆ ಸಾಧ್ಯವಾದಷ್ಟು ಕೊಟ್ಟು ಅವರನ್ನ ಸಂಪ್ರೀತರನ್ನಾಗಿ ಕಳಿಸಿಕೊಡುವುದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

ಯುವತಿ ತನಗೆ ಪ್ರಿಯನಾದ ಯುವಕನಿಂದ ಅಡಿಕೆ, ಎಲೆ ಪಡೆದು ಬಾಯಿ ತುಟಿ ಕೆಂಪಗೆ ಮಾಡಿಕೊಂಡರೆ ಅವರಿಬ್ಬರೂ ಪ್ರಣಯಿಗಳೆಂದು ಇತರರು ಊಹಿಸಿ ಕಾರ್ಯಪ್ರವೃತ್ತರಾಗುತ್ತಾರೆ. ಹಬ್ಬ ಉತ್ಸವಗಳ ಸಂದರ್ಭದಲ್ಲಿ ಕುಟುಂಬದ ಹಿರಿಯರು ಸಹ ಹೆಣ್ಣು ನೋಡಿ ನೆಂಟಸ್ತನ ಕೂಡಿಸುವುದುಂಟು. ಇನ್ನು ಮದುವೆ ಮಾತುಕತೆ ಬಹಳ ಬೇಗನೆ ಮುಗಿಯುವಂಥದ್ದಲ್ಲ. ಗಂಡಿನ ಕಡೆಯಿಂದ ಕೆಲವು ಮಂದಿ ಹೆಣ್ಣಿನ ಮನೆಗೆ ಹೋಗುತ್ತಾರೆ. ಊಟ ಉಪಚಾರದ ನಂತರ ಮರುದಿನ ಬೆಳಗ್ಗೆ, ಹೆಣ್ಣಿನ ತಂದೆ ನೀವು ಯಾವ ಜಂಬರಕ್ಕಾಗಿ ಬಂದಿರಿ, ಎಂದು ವಿಚಾರಿಸುತ್ತಾನೆ. ನಮಗೆ ಬೇಸಾಯ ಮಾಡಲು ನಿಮ್ಮ ಭೂಮಿ ಕೇಳಲು ಬಂದಿದ್ದೇವೆ – ಎನ್ನುತ್ತಾರೆ ಗಂಡಿನ ಕಡೆಯುವರು. ಅಯ್ಯೋ, ನಮ್ಮ ಭೂಮಿ ಬರೀ ಕಲ್ಲು, ನಿಮ್ಮಿಂದ ಬೇಸಾಯ ಮಾಡಲು ಸಾಧ್ಯವಿಲ್ಲ ಎಂದು ಹೆಣ್ಣಿನ ಮನೆಯವರು ಅವರನ್ನು ಸಾಗಹಾಕುತ್ತಾರೆ. ಆದರೂ ಗಂಡಿನ ಕಡೆಯವರು ಅದರ ಮುಂದಿನ ವಾರವೂ ಬರುತ್ತಾರೆ. ಊಟ ಉಪಚಾರದ ನಂತರ ಹೆಣ್ಣಿನವರದು ಅದೇ ಪ್ರಶ್ನೆ. ಗಂಡಿನವರದು ಅದೇ ಉತ್ತರ. ಆ ಭೂಮಿ ಬರೀ ಮುಳ್ಳಕಂಟಿ ಬೆಳೆದಿದೆ, ನಿಮಗೆ ಸಾಧ್ಯವಾಗಲಾರದು ಎಂದು ಮತ್ತೆ ಅವರನ್ನು ಅಲ್ಲಿಂದ ಸಾಗಹಾಕುತ್ತಾರೆ. ಹೀಗೆ ಏಳು ಬಾರಿ ಮಾತುಕತೆ ಪಟ್ಟು ಬಿಡದೆ ಮುಂದುವರಿದ ನಂತರ ಹೆಣ್ಣು ಹೆತ್ತವರು ಇನ್ನು ಪರೀಕ್ಷೆ ಸಾಕು ಎಂದು ನಿರ್ಧಾರಕ್ಕೆ ಬರುತ್ತಾರೆ. ನಂತರ ಮದುವೆಗೆ ಒಪ್ಪಂದವಾಗುತ್ತದೆ ! ಅದನ್ನು ಅವರು ದುಬಾರಿ ಸಂಪ್ರದಾಯ ಎಂದು ಭಾವಿಸುವುದಿಲ್ಲ.

ಹೆಣ್ಣು ಕೊಡಲು ಒಪ್ಪಿದ ನಂತರ ಗಂಡು ಮತ್ತು ಹೆಣ್ಣಿನ ಕಡೆಯ ಜಾತಿಕಾರರು ಕುಳಿತು ಮಾತುಕತೆಯಾಡಿ ಮದುವೆ ದಿನವನ್ನು ಗೊತ್ತುಪಡಿಸುತ್ತಾರೆ.

ಇರುಳರ ಮದುವೆ ಸಹ ಅಷ್ಟೇ ವಿಸ್ತಾರವಾಗಿ, ಅವರದೇ ಆದ ಶಾಸ್ತ್ರ, ಸಂಪ್ರದಾಯಗಳಂತೆ ನಡೆಯುವಂಥದ್ದು. ಕಲ್ಕಟ್ಟಿ, ಕುಪ್ಪರ್, ಪೇರದರ್, ಸಂಬರ್, ಕೊಡುವರ್, ಕುಸ್ನಾಗರ್, ಕುಪ್ಪಡಿಗರ್, ಪೋರಿಗರ್, ಬೆಳ್ಳಿಗರ್, ಕರ್ಟಿಗರ್, ಉಪ್ಪಿಲಿಗರ್ – ಇವು ಇರುಳರ ಕುಲಗಳು. ಕೊನೆಯಲ್ಲಿ ಬರುವ 'ರ್' ತಮಿಳು ಪ್ರಭಾವದಿಂದ ಸೇರಿಕೊಂಡದ್ದು. ಒಂದೇ ಕುಲಕ್ಕೆ ಸೇರಿದ ಹೆಣ್ಣು ಗಂಡು ನಡುವೆ ಮದುವೆ ನಿಷಿದ್ಧ. ಇರುಳರು ಇದನ್ನು ಬಹಳ ಸೂಕ್ಷ್ಮವಾಗಿ ಗಮನಿಸುತ್ತಾರೆ. ಹುಟ್ಟುವ ಮಕ್ಕಳು ತಂದೆಯ ಕುಲಕ್ಕೆ ಸೇರುತ್ತಾರೆ. ಇರುಳರ ಮದುವೆಗೆ ಕನ್ನಡದ 'ಮದುವೆ' ಪದವೇ ಬಳಕೆಯಲ್ಲಿದೆ.

ಇರುಳರ ಹುಟ್ಟು, ಸಾವು, ಮದುವೆ, ಹಬ್ಬ ಇತ್ಯಾದಿಗಳಲ್ಲಿ ಏಳರ ಸಂಖ್ಯೆಗೆ ಮುಖ್ಯ ಸಂಬಂಧವಿದೆ. ಈ ಏಳೂ, ಏಳುಲೋಕಗಳ ಸಂಕೇತವೆಂದವರು ನಂಬುತ್ತಾರೆ.

ಹಾಗಾಗಿ, ಹೆಣ್ಣು ಕರೆತರಲು ಹೆಣ್ಣಿನ ಮನೆಗೆ ಗಂಡಸರು, ಹೆಂಗಸರು ಸೇರಿ ಏಳು ಮಂದಿ ಹೊರಡುತ್ತಾರೆ. ಈ ಪೈಕಿ 'ಜಾತಿಕಾರ' ಮತ್ತು ಆತನ ಹೆಂಡತಿಗೆ ವಿಶೇಷ ಸ್ಥಾನ ಮತ್ತು ಕರ್ತವ್ಯಗಳಿವೆ. 'ಜಾತಿಕಾರ' ಎಂದರೆ ಕುಲದ ಮುಖ್ಯಸ್ಥ. ಹಿರಿಯ, ಮದುವೆಯ ಶಾಸ್ತ್ರ ನಡೆಸಿಕೊಡುವವನು ಅವನು ಮತ್ತು ಅವನ ಹೆಂಡತಿ.

ಹೆಣ್ಣಿನ ಮನೆಯಲ್ಲಿ ಏಳು ಕೊಡಗಳಲ್ಲಿ 'ಕೆರೆ ನೀರು' ತುಂಬಿಸಿಟ್ಟು, ಇವರನ್ನು ನಿರೀಕ್ಷಿಸುತ್ತಾರೆ. ಬಂದವರು ತಾಯಿಕುಲ, ತಂದೆಕುಲ ಮತ್ತು ಭೂಮಿ ತಾಯಿಗೆ ಶರಣು ಮಾಡಿದ ನಂತರ ಪ್ರತಿಯೊಂದು



ಶಾಲೆಗೆ ತಯಾರಿ

---

ಕೋಯಂಬತ್ತೂರು ಮತ್ತು ಚೆಂಗಲ್ಪಟ್ಟು ಜಿಲ್ಲೆಗಳಲ್ಲಿ ವಾಸಿಸುವ ಇರುಳರು ಮತ್ತು ನೀಲಗಿರಿಯ ಇರುಳರ ಬಣ್ಣ ಮತ್ತು ದೇಹ ಲಕ್ಷಣಗಳಲ್ಲಿ ಹೆಚ್ಚು ವ್ಯತ್ಯಾಸವಿಲ್ಲ. ವಾಸಿಸುವ ಪ್ರದೇಶಗಳ ಪ್ರಭಾವದಿಂದಾಗಿ ಅವರು ತಮಿಳು ಮತ್ತು ತೆಲುಗು ಮಿಶ್ರಿತ ಭಾಷೆ ಬಳಸುತ್ತಾರೆ. ಬೆಟ್ಟದ ತಪ್ಪಲುಗಳು ಮತ್ತು ಕಾಡಿನ ಅಂಚಿನಲ್ಲಿ ಅವರ ಊರುಗಳು ಇರುತ್ತವೆ. ಸಣ್ಣ ಜಮೀನುಗಳಲ್ಲಿ ವ್ಯವಸಾಯ ಮಾಡಿದರೂ ಅರಣ್ಯೋತ್ಪನ್ನಗಳನ್ನು ಸಂಗ್ರಹಿಸಿ ಇತರರಿಗೆ ಮಾರಾಟ ಮಾಡಿ ಜೀವನ ಸಾಗಿಸುತ್ತಾರೆ.



ಹಾವಿನ ವಿಷ ಸಂಗ್ರಹಣೆ

ನುರಿತ ಬೇಟೆಗಾರರು ಮೊಲ, ಇಲಿ, ಹಂದಿ, ಬರ್ಕ ಮುಂತಾದ ಪ್ರಾಣಿಗಳಲ್ಲದೆ ಪಕ್ಷಿಗಳನ್ನೂ ಬೇಟೆಯಾಡುತ್ತಾರೆ. ಹಾವುಗಳನ್ನು ಹಿಡಿಯುವುದರಲ್ಲೂ ನಿಪುಣರು. ಆದರೆ ಹಾವಾಡಿಗರಲ್ಲ. ಹಾವುಗಳನ್ನು ಕೊಂದು ಚರ್ಮವನ್ನು ಮಾರಾಟ ಮಾಡುತ್ತಿದ್ದರು.

೧೯೬೦ರ ದಶಕದಲ್ಲಿ ಹಾವುಗಳನ್ನು ಕೊಲ್ಲುವುದನ್ನು, ಅವುಗಳ ಚರ್ಮದಿಂದ ತಯಾರಾದ ಅಲಂಕಾರ ವಸ್ತುಗಳ ಬಳಕೆಯನ್ನು ಸರಕಾರ ನಿಷೇಧಿಸಿತು. ನೂರಾರು ವರ್ಷಗಳಿಂದ ಅನುಸರಿಸುತ್ತ ಬಂದಿದ್ದ ವೃತ್ತಿಯೊಂದು ಇರುಳರ ಪಾಲಿಗೆ ಇಲ್ಲವಾಯಿತು.

ಅದೇ ಸಂದರ್ಭದಲ್ಲಿ ರೊಮುಲಸ್ ವಿಟ್ಟೇಕರ್ ಎಂಬ ಸರ್ಪತಜ್ಞ, ಹಾವುಗಳ ಬಗ್ಗೆ ಜನರಲ್ಲಿ ಜಾಗೃತಿ ಮೂಡಿಸುವ ಉದ್ದೇಶದಿಂದ ಮದರಾಸಿನಲ್ಲಿ ಒಂದು ಸರ್ಪವನ ಸ್ಥಾಪಿಸಿದ್ದ.

ಹಾವು ಕಡಿತಕ್ಕೆ ವಿಷನಿರೋಧಕ ಮದ್ದಾಗಿ ಹಾವಿನ ವಿಷವನ್ನೇ ಬಳಸಲಾಗುತ್ತದೆಯಷ್ಟೆ. ಸರ್ಪವನದಲ್ಲಿ ಹಾವುಗಳಿಂದ ವಿಷ ತೆಗೆದು ಸಂಗ್ರಹಿಸಿಡುವ ಸಾಧ್ಯತೆಯೂ ಮನವರಿಕೆಯಾಯಿತು. ಆಗ ಹಾವುಗಳ ಬಗ್ಗೆ ಹೆಚ್ಚು ತಿಳಿವಳಿಕೆಯಿರುವ ಇರುಳರನ್ನು ಆ ಕಾರ್ಯದಲ್ಲಿ ತೊಡಗಿಸುವ ಪ್ರಯತ್ನಗಳಾದವು. ಇರುಳರ ವೃತ್ತಿಯಲ್ಲಿ ಒಂದು ಹೊಸ ಅವಕಾಶ ತೆರೆದುಕೊಂಡಿತು.

ಹಾವು ಹಿಡಿಯುವುದು ಅವರಿಗೆ ಸಿದ್ಧಿಸಿದ ಕಸುಬಾಗಿತ್ತು. ವಿಷ ತೆಗೆಯುವ ಬಗ್ಗೆ ಅವರಿಗೆ ತರಬೇತಿ ನೀಡಲಾಯಿತು. ಕಾಡುಗಳಿಂದ ಹಿಡಿದು ತರುವ ಹಾವುಗಳಿಂದ ವಿಷ ಕಕ್ಕಿಸಿಕೊಂಡನಂತರ ಅವನ್ನು ಮತ್ತೆ ಕಾಡಿಗೇ ಬಿಡುವ ರೂಢಿ ಪ್ರಾರಂಭವಾಯಿತು.



ಈಗ ಇರುಳರು ತಮ್ಮ ಸಹಕಾರಿ ಸಂಸ್ಥೆಗಳ ಮೂಲಕ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುವ, ಹಾಗೆಯೇ ಹಾವುಗಳಿಂದ ವಿಷ ತೆಗೆಯುವ ಕಾಯಕಗಳಲ್ಲಿ ತೊಡಗಿಕೊಂಡಿದ್ದಾರೆ.

ಇವರ ನಾಟಿವೈದ್ಯದ ವಿಶೇಷವೆಂದರೆ ಬಹುಪಾಲು ಮಹಿಳೆಯರೇ ಮದ್ದುಗಾತಿಯರಾಗಿರುವುದು. ಗಂಡಸರು ಬೇಕಾದ ಗಿಡಮೂಲಿಕೆಗಳನ್ನು ತಂದುಕೊಡಲು ಸಹಕರಿಸುತ್ತಾರೆ.

ಕೊಡದಿಂದ ಒಂದೊಂದು ಬೊಗಸೆ ನೀರು ಕುಡಿದು, ಚಾಪೆಗಳ ಮೇಲೆ ಕುಳಿತು ದಣಿವಾರಿಸಿಕೊಳ್ಳುತ್ತಾರೆ.

ಈ ಮಧ್ಯೆ ಹೆಣ್ಣಿನ ಕಡೆಯಿಂದ ಜಾತಿಕಾರ ಮತ್ತು ಆತನ ಹೆಂಡತಿ ಸೇರಿದಂತೆ ಏಳೂ ಮಂದಿ ಗಂಡಿನ ಮನೆಯವರ ಜೊತೆಗೆ ಸೇರಿಕೊಳ್ಳುತ್ತಾರೆ. ತಾಯಿಕುಲ, ತಂದೆಕುಲ ಮತ್ತು ಭೂಮಿತಾಯಿಗೆ ಶರಣು ಮಾಡಿದ ನಂತರ ಕ್ಷೇಮ ಸಮಾಚಾರಗಳ ವಿನಿಮಯದ ಮಧ್ಯೆ, ಮನೆಯಲ್ಲಿ ಔತಣದ ಅಡುಗೆ ಕೆಲಸ ಮುಂದುವರಿಯುತ್ತದೆ.

ಊಟ, ತಾಂಬೂಲದ ನಂತರ ಹೆಣ್ಣನ್ನು ಕರೆದು ಮತ್ತೊಮ್ಮೆ ಈ ಮದುವೆಗೆ ಸಮ್ಮತವೇ ಎಂದು ವಿಚಾರಿಸುತ್ತಾರೆ. ಹೆಣ್ಣು ಒಪ್ಪಿಗೆ ಸೂಚಿಸಿದ ನಂತರ, ಹೆಣ್ಣಿನ ಮತ್ತು ಆಕೆಯ ತಾಯಿ-ತಂದೆಯರಿಗೆಂದು ತಂದಿರುವ ಹೊಸ ಬಟ್ಟೆಗಳನ್ನು ನೀಡಲಾಗುತ್ತದೆ. ಗಂಡಿನ ಕಡೆಯ ಜಾತಿಕಾರ ಹೆಣ್ಣಿನ ತಂದೆಗೆ ಆರೂಕಾಲು ರೂಪಾಯಿ 'ತೆರ' ಗಂಡಿನ ತಂದೆ-ತಾಯಿ ಪರವಾಗಿ ನೀಡುತ್ತಾನೆ. ಹೊಸ ಉಡುಪು ಧರಿಸಿ ಬಂದ ಹೆಣ್ಣಿನ ಕೊರಳಿಗೆ 'ಜಾತಿಕಾರ'ನ ಹೆಂಡತಿ ಮಣಿಗಳ ಒಂದು ಸರವನ್ನು ಹಾಕುತ್ತಾಳೆ. ಹೆಣ್ಣು ಎಲ್ಲರಿಗೂ ಅಡ್ಡಬಿದ್ದು ಆಶೀರ್ವಾದ ಪಡೆಯುತ್ತಾಳೆ.

ಹೆಣ್ಣಿನ ಜೊತೆಯಲ್ಲಿ ಅವರೆಲ್ಲರೂ ಗಂಡಿನ ಊರಿಗೆ ಹೊರಡುತ್ತಾರೆ. ಕಾಡಿನ ಒಂದು ಮೂಲೆಯಿಂದ ಮತ್ತೊಂದು ಮೂಲೆಯಲ್ಲಿರುವ ಊರು. ದಾರಿಯಲ್ಲಿ ಹಳ್ಳಕೊಳ್ಳಗಳು ಎದುರಾದರೆ ಮದುವೆ ಹೆಣ್ಣಿನ ಕಾಲಿಗೆ ನೀರು ಸೋಂಕುವಂತಿಲ್ಲ. ಗಂಡಿನ ಕಡೆಯವರ ಜೊತೆಗೆ ಬಂದಿರುವ ಗಂಡಿನ ಅಣ್ಣನ ಸಂಬಂಧವಾಗುವಾತ ಹೆಣ್ಣನ್ನು ಹೆಗಲ ಮೇಲೆ ಹೊತ್ತು ಹಳ್ಳ ದಾಟಿಸಬೇಕು. ಹೀಗೆ ಹಳ್ಳಗಳು ಸಿಕ್ಕುವ ಕಡೆಗಳಲ್ಲೆಲ್ಲ ಆತನು ಹೆಣ್ಣಿಗೆ ಹೆಗಲು ಕೊಡಬೇಕು.

ಅತ್ತ ಗಂಡಿನ ಮನೆಯನ್ನು ಅಲಂಕರಿಸಲಾಗಿರುತ್ತದೆ. ಎಲ್ಲರೂ ಹೆಣ್ಣು ಬರುವುದನ್ನು ಕಾಯುತ್ತಿರುತ್ತಾರೆ. ಇರುಳರು ಹೆಣ್ಣಿನ ಕೊರಳಿಗೆ ತಾಳಿ ಕಟ್ಟುವಾಗ ಯಾವುದೇ ಮುಹೂರ್ತ ನೋಡುವುದಿಲ್ಲ. ಕಾಡು ದಾರಿಯಲ್ಲಿ ನಡೆಯುತ್ತ ಹೆಣ್ಣು ಗಂಡಿನ ಊರಿಗೆ ತಲುಪಲು ರಾತ್ರಿಯೂ ಆಗಬಹುದು. ಹೆಣ್ಣು ಗಂಡಿನ ಮನೆಗೆ ತಲುಪಿದ ಕೂಡಲೇ ಗಂಡು ಆಕೆಯ ಕೊರಳಿಗೆ ಒಂದು ಮಣಿಗಳ ಸರ ಹಾಕುತ್ತಾನೆ. ಮದುವೆ ಮುಗಿಯುತ್ತದೆ. ಗಂಡು ಹೆಣ್ಣು ಹಿರಿಯರ ಆಶೀರ್ವಾದ ಪಡೆಯುತ್ತಾರೆ. ಮುಂದೆ ವಾದ್ಯಗಳ ಸಂಗೀತ, ಕುಣಿತ, ಊಟೋಪಾಚಾರ ನಡೆಯುತ್ತದೆ.

ಹಿಂದೆ ಕಪ್ಪುಮಣಿಗಳನ್ನು ಇರುಳರು ಮಾಂಗಲ್ಯವೆಂದು ಧರಿಸುತ್ತಿದ್ದರು. ಕಾಲ ಸರಿದಂತೆ ಕಪ್ಪುಮಣಿಗಳ ಸ್ಥಳದಲ್ಲಿ ಬೆಳ್ಳಿಯ ಮಣಿಗಳು, ಬೆಳ್ಳಿಯ ತಾಳಿ ಬಂದಿವೆ.

ಇರುಳರ ಜೀವನದಲ್ಲಿ ಉಂಟಾಗಿರುವ ಬದಲಾವಣೆಗಳ ಕಾರಣ ಮದುವೆಯ ಹಿಂದಿನ ಸಂಪ್ರದಾಯ ಸಡಿಲಗೊಂಡಿದೆ. ಎಸ್ಟೇಟುಗಳಲ್ಲಿ ಕೂಲಿಗಳಾಗಿ ದುಡಿಯುತ್ತಿರುವ ಅವರು ಮದುವೆಗೆ ಬರಲು ಅನುಕೂಲವಾಗುವಂತೆ ಒಂದು ಭಾನುವಾರ ಮದುವೆಗೆ ಏರ್ಪಾಡು ಮಾಡುತ್ತಾರೆ. ರಾಹುಕಾಲ ಇತ್ಯಾದಿ ನೋಡುವುದಿಲ್ಲ. ಊರಿನ ಜಾತಿಕಾರ ಕಾಡಿನಲ್ಲಿರುವ ದೇವರ ಗುಡಿಯ ಮುಂದೆ ಮದುವೆ ಮಾಡಿಸುತ್ತಾನೆ. ಅಲ್ಲಿಂದ ಊರಿಗೆ ವಾದ್ಯಮೇಳ ಸಹಿತ ಮೆರವಣಿಗೆ ಸಾಗುತ್ತದೆ. ಊರಿನಲ್ಲಿರುವ ಸಮುದಾಯ ಭವನದಲ್ಲಿ ಆರತಕ್ಷತೆ ನಡೆಯುತ್ತದೆ. ಮದುವೆಗೆ ಬಂದವರು 'ಮುಯ್ಯಿ' ಓದಿಸುತ್ತಾರೆ. ಸಿನಿಮಾ ಹಾಡುಗಳ ಕ್ಯಾಸೆಟ್ ಕಿವಿ ಕಿತ್ತುಹೋಗುವಂತೆ ಮೊಳಗುತ್ತಿರುತ್ತದೆ. ಬಂದವರು ಗಂಡು-ಹೆಣ್ಣನ್ನು ಹರಸುತ್ತಾರೆ. ಊಟದ ನಂತರ ತಮ್ಮ ತಮ್ಮ ಊರುಗಳ ದಾರಿ ಹಿಡಿಯುತ್ತಾರೆ.

ಗಂಡು-ಹೆಣ್ಣು ಪರಸ್ಪರ ಪ್ರೀತಿಸಿ ಮದುವೆಯಾಗುವುದು ಇರುಳರಲ್ಲಿ ಹಿಂದಿನಿಂದಲೂ ನಡೆದು ಬಂದಿರುವ ರೂಢಿ. ಈ ವಿಷಯದಲ್ಲಿ ನಾಗರಿಕ ಸಮುದಾಯದಂತೆಯೇ ಇರುಳ ಯುವಕ ಯುವತಿ ಸಹ ಮನೆಯವರ ವಿರೋಧ ಎದುರಿಸಬೇಕಾಗುತ್ತದೆ. ಹೆಣ್ಣಿನ ಅಥವಾ ಗಂಡಿನ ತಾಯಿ ತಂದೆಯರು ಯಾವುದಾದರೂ ಕಾರಣಕ್ಕೆ ಮದುವೆಗೆ ಒಪ್ಪಿಗೆ ನೀಡದೆ ತಕರಾರು ತೆಗೆಯಬಹುದು. ಆಗ ಆ ಜೋಡಿ ಆ ಊರನ್ನೇ ಬಿಟ್ಟು ಬೇರೆ ಊರಿಗೆ ಹೋಗಿ ಅಲ್ಲಿನ ಜಾತಿಕಾರನ ಆಶ್ರಯ ಪಡೆಯುತ್ತಾರೆ. ಜಾತಿಕಾರ ಅವರಿಬ್ಬರೂ ಒಂದೇ ಕುಲದವರಲ್ಲ ಎಂಬುದನ್ನು ಖಚಿತ ಪಡಿಸಿಕೊಂಡು ಅವರಿಗೆ ಆಶ್ರಯ ನೀಡುತ್ತಾನೆ. ಮದುವೆಯನ್ನು ಮಾಡಿಸುತ್ತಾನೆ. ಒಂದೆರಡು ವರ್ಷಗಳ ನಂತರ ಹೆತ್ತವರ ಕೋಪ ಶಮನವಾದಾಗ ಅವರನ್ನು ಸ್ವಂತ ಊರಿಗೆ, ಮನೆಗೆ ಬರಮಾಡಿಕೊಳ್ಳುತ್ತಾರೆ. ಪ್ರೇಮಿಗಳಿಗೆ ಆಶ್ರಯ ನೀಡಿ ಅವರನ್ನು ರಕ್ಷಿಸುವ ಹೊಣೆಗಾರಿಕೆ ಜಾತಿಕಾರನಿಗಿರುತ್ತದೆ.

ಇರುಳರ ವೈದ್ಯ

ಹೆಣ್ಣು ಮೈನೆರೆದಾಗ ಆಕೆಯನ್ನು ಏಳುದಿನ ಪ್ರತ್ಯೇಕ ಸೊಪ್ಪಿನ ಗುಡಿಸಲಿನಲ್ಲಿ ಇರಿಸುತ್ತಾರೆ. ಆ ಏಳು ದಿನ ಹೆಣ್ಣಿನ ತಂಗಿ ಅಥವಾ ಹೆಣ್ಣಿಗಿಂತ ಕಿರಿಯ ವಯಸ್ಸಿನ ಬಾಲಕಿ ಆಕೆಯೊಂದಿಗಿರುತ್ತಾರೆ.

ಮುಟ್ಟಿನ ವೇಳೆಯಲ್ಲೂ ಆಕೆ ಪ್ರತ್ಯೇಕವಾಗಿ ಮುಟ್ಟಿನ ಕೋಣೆಯಲ್ಲಿ ಐದು ದಿನ ವಿಶ್ರಾಂತಿ ಪಡೆಯಬೇಕು. ಆಗ ಆಕೆಯ ಗಂಡ ಅಡಿಗೆ ಕೆಲಸ ಮಾಡುತ್ತಾನೆ. ಐದು ದಿನ ಕಳೆದ ನಂತರ ಸ್ನಾನ ಮಾಡಿ, ಆಕೆ ಮನೆಯಲ್ಲಿ ಅಡಿಗೆ ಕೆಲಸ ಪ್ರಾರಂಭಿಸುತ್ತಾಳೆ!

ಇರುಳರ ಕುಲದೇವತೆಯ ಗುಡಿ ಕಾಡಿನೊಳಗಿರುತ್ತದೆ. ಏಳು ದಿನ ನಡೆಯುವ ವಿಶೇಷ ಹಬ್ಬವನ್ನು ಎಲ್ಲರೂ ಆಚರಿಸುತ್ತಾರೆ. ಇರುಳರ ಹಬ್ಬದ ಸಂದರ್ಭದಲ್ಲಿ ದೇವರ ಕುರಿತ ಹಾಡುಗಳದ್ದು, ಜೊತೆಗೆ ಅವರು ನುಡಿಸುವ ಹಲವು ವಾದ್ಯಗಳದ್ದು ಮುಖ್ಯ ಪಾತ್ರ. ಹಬ್ಬದ ಕೊನೆಯ ದಿನ ಕುರಿ, ಕೋಳಿ, ಆಡುಗಳನ್ನು ಬಲಿಕೊಟ್ಟು ಅಲ್ಲಿಯೇ ಅಡಿಗೆ ಮಾಡಿ ಎಲ್ಲರೂ ಉಂಡು ಊರುಗಳಿಗೆ ಹಿಂದಿರುಗುತ್ತಾರೆ.

ಅವರು ಅರಣ್ಯವಾಸಿಗಳಾದುದರಿಂದ ಕಾಡಿನ ಗಿಡಮರಗಳ ಪರಿಚಯ ಹೆಚ್ಚು. ಈಗ ಇರುಳರಲ್ಲಿ ಹೆಚ್ಚು ಮಂದಿ ತೋಟದ ಕೆಲಸಗಾರರಾಗಿದ್ದಾರೆ. ಅಕ್ಷರಸ್ಥರ ಸಂಖ್ಯೆ ಸಹ ಇತರ ಮೂಲ ನಿವಾಸಿಗಳಿಗಿಂತ ಕಡಿಮೆ.

**ಪರಂಜ್ಯೋತಿ**
ನಂ. ೧೦, ೧ನೇ ಮಹಡಿ, ೩ನೇ ಅಡ್ಡರಸ್ತೆ, ಶ್ರೀರಾಮ ದೇವಾಲಯ ರಸ್ತೆ ಈಜಿಪುರ
ವಿವೇಕನಗರ ಅಂಚೆ, ಬೆಂಗಳೂರು – ೫೬೦ ೦೪೭



ಇರುಳರ ಮದುವೆ



ಇರುಳರ ವಾದ್ಯಗಾರರು



# ಐಸನ್ ಧೂಮಕೇತು

**ಈ** ತಿಂಗಳಲ್ಲಿ ಸುದ್ದಿ ಮಾಡಲಿರುವ ಐಸನ್ ಧೂಮಕೇತು ಸೂರ್ಯನತ್ತ ಧಾವಿಸಿ ಬರುತ್ತಿದೆ. ಅದು (ಭಾರತೀಯ ಕಾಲಮಾನದ ಪ್ರಕಾರ) ಅಕ್ಟೋಬರ್ ೧ರ ನಡುರಾತ್ರಿ ಮಂಗಳ ಗ್ರಹವನ್ನು ಸಮೀಪಿಸಲಿದೆ. ಅವುಗಳ ನಡುವಿನ ಅಂತರ ಕೇವಲ ೧೧ ಮಿಲಿಯನ್ ಕಿ. ಮೀ. ಇದನ್ನು "ಬಹಳ ಸಮೀಪ" ಎಂದೇ ಕರೆಯಬಹುದು. ಮಂಗಳದ ಮೇಲೆ ಅಡ್ಡಾಡುತ್ತಿರುವ ಹಲವಾರು ಉಪಕರಣಗಳನ್ನು ಧೂಮಕೇತುವಿನ ದರ್ಶನಕ್ಕಾಗಿ ಅಣಿಗೊಳಿಸಲಾಗುತ್ತಿದೆ.

ಈಗಾಗಲೇ ನಮ್ಮ ಆಕಾಶದಲ್ಲಿ ಈ ಧೂಮಕೇತು ಮಂಗಳದ ಸಮೀಪವೇ ಕಾಣುತ್ತಿದೆ. ಅಕ್ಟೋಬರ್ ೧ ರಂದು ಚಂದ್ರ ಸಹ ಮಂಗಳದ ಪಕ್ಕವೇ ಇರುತ್ತದೆ. ಬೆಳಗಿನ ಜಾವ ಚಂದ್ರನ ಪಕ್ಕದ ಮಂಗಳಗ್ರಹವನ್ನು ಹುಡುಕಿ ಆಮೇಲೆ ದುರ್ಬೀನ್‌ನಿಂದ ಅದರ ಆಸುಪಾಸನ್ನು ತಡಕಾಡಿದರೆ ೫–೬ ಡಿಗ್ರಿ ಯೊಳಗೇ ಧೂಮಕೇತು ಕಾಣುತ್ತದೆ.

೩೦ರಂದು ಪುನಃ ಚಂದ್ರ ಮತ್ತು ಮಂಗಳ ಜೊತೆಗೂಡುವ ಸಂದರ್ಭ ದಲ್ಲಿಯೂ ಇದೇ ಉಪಾಯ ಬಳಸಿ ಪೂ ಧೂಮಕೇತುವನ್ನು ಹುಡುಕಬಹುದು. ಅಷ್ಟು ಹೊತ್ತಿಗೆ ಅದು ಬರಿಗಣ್ಣಿಗೆ ಕಾಣುವಂತಾಗಿರಬಹುದು. ಆದರೆ, ಈ ಧೂಮಕೇತು ಲೆಕ್ಕಹಾಕಿದಷ್ಟು ಪ್ರಕಾಶಮಾನ ವಾಗಿ ಇಲ್ಲದಿರುವುದೇ ದೊಡ್ಡ ಸಮಸ್ಯೆಯಾಗಿದೆ. ಬಹುಶಃ ಅಕ್ಟೋಬರ್ ತಿಂಗಳಲ್ಲಿ ಇದು ಇನ್ನೂ ಪ್ರಕಾಶ ಪಡೆದು ಆಕಾಶದಲ್ಲಿ ರಾರಾಜಿಸಬಹುದು ಎಂಬುದು ನಿರೀಕ್ಷೆ.

ಕಳೆದ ಹಲವಾರು ತಿಂಗಳುಗಳಿಂದ ಆಕಾಶದ ದರ್ಶನ ಭಾಗ್ಯವೇ ಇಲ್ಲದಂತಾಗಿದೆ. ಕೆಲವೇ ನಿಮಿಷಗಳಕಾಲ ನೀಲಿಯ ಕಿಂಡಿಯೊಂದು ತೆರೆದಂತೆ ಕಾಣಿಸಿದಾಗಲೆಲ್ಲಾ ಒಂದೆರಡು ಚುಕ್ಕೆಗಳೂ ಕಂಡಿವೆ. ಇಂತಹ ಸಂದರ್ಭ ಗಳಲ್ಲಿ ಸ್ಫುಟವಾಗಿ ಕಾಣುವ ಚುಕ್ಕೆಯೇ ಶುಕ್ರಗ್ರಹ. ರಾತ್ರಿ ಸುಮಾರು ಒಂಬತ್ತು ಗಂಟೆಯವರೆಗೂ ಕಾಣುವುದು. ಇದನ್ನು ಗುರುತಿಸಲು ಯಾರದೇ ನೆರವು ಬೇಕಿಲ್ಲ. ೮ರಂದು ರೇಖಾಚಂದ್ರನ ಪಕ್ಕದಲ್ಲಿಯೇ ಇದು ಕಾಣುವುದು. ಅದೇ ಹೊತ್ತಿನಲ್ಲಿ ಪಶ್ಚಿಮ ದಿಗಂತದತ್ತ ಕಣ್ಣು ಹಾಯಿಸಿದರೆ ಎರಡು ಚುಕ್ಕಿಗಳು ಕಾಣುವುವು. ಒಂದು ಶನಿ, ಇನ್ನೊಂದು ಬುಧ. ಶುಕ್ರದಿಂದ ದಿಗಂತದವರೆಗಿನ ಸುಮಾರು ಅರ್ಧ ದಷ್ಟು ಎತ್ತರದಲ್ಲಿ ಇವು ಕಾಣುವುವು. ಬುಧಗ್ರಹವನ್ನು ಪತ್ತೆ ಮಾಡಲು ಇದು ಒಳ್ಳೆಯ ಅವಕಾಶ. ೯ರ ನಂತರ ಬುಧ ಮತ್ತು ಶನಿ ಎರಡೂ ದಿಗಂತ ದತ್ತ ಓಡತೊಡಗುವುವು. ಶುಕ್ರ ಮಾತ್ರ ಅದೇ ಎತ್ತರದಲ್ಲಿ ಕಾಣುವುದು. ಆಕಾಶ ಶುಭ್ರವಾಗಿದ್ದರೆ ಹಿನ್ನೆಲೆಯಲ್ಲಿ ವೃಶ್ಚಿಕರಾಶಿಯನ್ನೂ ಗುರುತಿಸ ಬಹುದು. ೧೫ರಂದು ಕೆಂಪು ನಕ್ಷತ್ರ ಜ್ಯೇಷ್ಠಾದ ಪಕ್ಕದಲ್ಲಿಯೇ ಕಾಣುವುದು.


೮ರ ಸಂಜೆ ಶುಕ್ರ, ಚಂದ್ರ, ಶನಿ ಮತ್ತು ಬುಧ

ಉ




ದ

ಮಂಗಳ ಮತ್ತು ಗುರು ಗ್ರಹಗಳು ಬೆಳಗಿನ ಜಾವ ಕಾಣುವುವು. ೨೫ರಂದು ಚಂದ್ರ ಗುರುಗ್ರಹದ ಪಕ್ಕ ಕಾಣುವುದು. ೧ರಂದು ಮತ್ತು ೩೦ರಂದು ಮಂಗಳದ ಪಕ್ಕ ಕಾಣುವುದು.

ಈ ತಿಂಗಳಲ್ಲಿ ಎರಡು ಉಲ್ಕಾವೃಷ್ಟಿಗಳಿವೆ. ೭ರಂದು ಗರಿಷ್ಠ ಮುಟ್ಟುವುದು ಡ್ರಾಕೋನಿಡ್ಸ್, ಗಂಟೆಗೆ ೧೦ ಉಲ್ಕೆಗಳು ಕಾಣಬಹುದು. ೨೧ರಂದು ಗರಿಷ್ಠ ಮುಟ್ಟುವ ಓರಿಯನಿಡ್ಸ್ ವೃಷ್ಟಿಯಲ್ಲಿ ಗಂಟೆಗೆ ೨೦ರವರೆಗೂ ಉಲ್ಕೆಗಳು ಕಾಣುವುವು. ಆದರೆ, ಹುಣ್ಣಿಮೆಗೆ ಹತ್ತಿರವಾದದ್ದರಿಂದ ಚಂದ್ರನ ಬೆಳಕಿನಲ್ಲಿ ಕ್ಷೀಣ ಉಲ್ಕೆಗಳು ಕಾಣದಂತಾಗುವುವು.

ಈ ತಿಂಗಳ ಹುಣ್ಣಿಮೆಯ ಚಂದ್ರ ಆಶ್ವಯುಜ ಮಾಸವಾದದ್ದರಿಂದ ಅಶ್ವಿನಿ ನಕ್ಷತ್ರದ ಸಮೀಪವೇ ಕಾಣುವುದು. ಅಲ್ಲದೆ ಇನ್ನೊಂದು ವಿಶೇಷ ಇದೆ. ಅದು ಭೂಮಿಯ ನೆರಳಿನ ಹೊರವಲಯದ ಮೂಲಕ ಹಾದುಹೋಗುವುದು. ನೆರಳಿನ ಮಧ್ಯಭಾಗ ದಟ್ಟವಾದದ್ದು, ಅದರ ಮೂಲಕ ಹಾದುಹೋದಾಗ ಪೂರ್ಣಛಾಯಾಗ್ರಹಣ ಎಂದು ಗುರುತಿಸುತ್ತೇವೆ. ಆದರೆ ೧೯ರ ಬೆಳಗಿನ ಜಾವ ಹಾಗಾಗು ವುದಿಲ್ಲ. ಸುಮಾರು ೫ ಗಂಟೆಗೆ ಚಂದ್ರನನ್ನು ಗಮನಿಸಿದಿರಾದರೆ ಅದರ ದಕ್ಷಿಣದ ಅಂಚು ಸ್ವಲ್ಪ ಮಂಕಾದಂತೆ ಕಾಣಬಹುದು. ಪ ಚಂದ್ರ ಆ ಭಾಗವನ್ನು ಅಂದರೆ ನೆರಳಿನ ಹೊರವಲಯ – ಪಾರ್ಶ್ವಛಾಯೆಯನ್ನು ಹಾದುಹೋಗುವುದು. ಇದನ್ನು ಗ್ರಹಣ ಎಂದು ಕ್ಯಾಲೆಂಡರ್‌ಗಳಲ್ಲಿ ನಮೂದಿಸಿರು ವುದಿಲ್ಲ. ಸೂಕ್ಷ್ಮವಾಗಿ ಗಮನಿಸಿದರೆ ಬರಿಗಣ್ಣಿನಿಂದಲೇ ಇದನ್ನು ಗುರುತಿಸುವುದು ಸಾಧ್ಯ. (ಕುಂದಾಪುರದಿಂದ ಹಿರಿಯರೊಬ್ಬರು ಇಂತಹ ಚಂದ್ರಾಸ್ತವನ್ನು ಗಮನಿಸಿ, ಚಂದ್ರನ ಅಂಚು ಏಕೆ ಮಂಕಾಗಿತ್ತು ? ಎಂದು ಪ್ರಶ್ನಿಸಿದ್ದರು.)

**ಖಗೋಳ ದಿನಚರಿ** (ಅಕ್ಟೋಬರ್–ನವೆಂಬರ್)

೧ ಮಂಗಳ–ಚಂದ್ರ ಜೋಡಿ* (ಮುಂಜಾವು)
೫ ಅಮಾವಾಸ್ಯೆ ೦೬:೦೫
೬ ಬುಧ–ಚಂದ್ರ ಜೋಡಿ* (ಸಂಜೆ)
೭ ಶನಿ–ಚಂದ್ರ ಜೋಡಿ* (ಸಂಜೆ) ಡ್ರಾಕೋನಿಡ್ಸ್ ಉಲ್ಕಾವೃಷ್ಟಿ
೮ ಶುಕ್ರ–ಚಂದ್ರ ಜೋಡಿ* (ಸಂಜೆ)
೯ ಬುಧಗ್ರಹದ ಗರಿಷ್ಠ ಕೋನೋನ್ನತಿ* (ಸಂಜೆ)
೧೦ ಬುಧ–ಶನಿ ನಡುವೆ ಕನಿಷ್ಠ ಕೋನ (ಸಂಜೆ)
೧೧ ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ ಚಾಂದ್ರಮಾಸದ ಮೊದಲ ಪಾದ
೧೪ ಮಂಗಳ–ಮಘ ಜೋಡಿ* (ಮುಂಜಾವು)
೧೬ ಶುಕ್ರ–ಜ್ಯೇಷ್ಠಾ ಜೋಡಿ* (ಸಂಜೆ)
೧೯ ಹುಣ್ಣಿಮೆ ೦೫:೦೮ಕ್ಕೆ; ಪಾರ್ಶ್ವಛಾಯಾಗ್ರಹಣವಿದೆ. (ಮುಂಜಾವು)
೨೧ ಓರಿಯನಿಡ್ಸ್ ಉಲ್ಕಾವೃಷ್ಟಿ (ಮುಂಜಾವು)
೨೫ ಚಂದ್ರ–ಭೂಮಿ ನಡುವೆ ಗರಿಷ್ಠ ಅಂತರ
೨೬ ಚಾಂದ್ರಮಾಸದ ಕೊನೆಯ ಪಾದ
೨೮ ಬುಧ–ಶನಿ ಜೋಡಿ* (ಸಂಜೆ)
೩೦ ಮಂಗಳ–ಚಂದ್ರ ಜೋಡಿ*
೧ ಶುಕ್ರಗ್ರಹದ ಗರಿಷ್ಠ ಕೋನೋನ್ನತಿ*

(* ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ
ಹೈಗ್ರೌಂಡ್ಸ್ ಬೆಂಗಳೂರು – ೫೬೦ ೦೦೧

# ಸನಿ ಮಾತ್ಮೆ






ಸಂತೋಷ ಗುಡ್ಡಿಯಂಗಡಿ

**ಈ** ಕತಾ ಹುಟ್ಟುವ ಕಾಲಕ್ಕ ದೇಸಕ್ಕ ಹಿಡ್ಕಂತ ಸನಿ ಬುಡಿಸುವುದಕ್ಕಂತ ಯಾರೋ ಒಬ್ಬಾಂವ ಮುದುಕಪ್ಪ ಅನ್ನ-ನೀರು ಬುಟ್ಕಂಡು ಟೀವಿ ಪೇಪರ್ನೊಳಗ ಕುಂತಿದ್ನಂತ. ತಾನು ಅನ್ನ-ನೀರು ಬುಟ್ಕಂಡಂತ ಇಸ್ಯ ಅವಗ ಗೆಪ್ತಿಗ ಬಾರದಿರ್ಲಿ ಅಂದ್ಕಂಡು ದೇಸದ ತುಂಬ ಒಂದಷ್ಟು ಮಂದಿ ಮುದುಕಪ್ಪಗ ಸಪೋರ್ಟು ಮಾಡಿ ಅದು ಗೌರ್ಮೆಂಟಿಗೂ ಅರುವಾಗಿ, "ಅಯ್ಯಯ್ಯೋ ಯಿ ಮುದುಕಪ್ಪಗ ಯಾನಾದ್ರು ಆದ್ರ ತಮ್ಗತಿ ನೆಟ್ಟಗಾಗಾಕಿಲ್ಲ ಅಂದ್ಕಬುಟ್ಟು, ಅಲ್ಲ ಅಜ್ಜಯ್ನೋರೆ ನೀವು ಅನ್ನ-ನೀರು ಬುಟ್ಕಂಡು ಕುಂತ್ರ ಜೀವುಕ್ಕೇನಾರು ಹೆಚ್ಚೂಕಮ್ಮಿ ಆಗ್ಬುಟ್ಟು ಆಮ್ಯಾಕೆ ಹೈಕಳಿಗೆ ಕತಾ ಹೇಳಾಕ ತಾತಪ್ಪನೋರು ಇಲ್ದಂಗಾಗ್ತದ ಕನಿ" ಅಂತಂದುದ್ಕ ಆ ಮುದುಕಪ್ಪ ಪಾರಮ್ಮಿನ ಕೋಳಿಪಿಳ್ಳ ಕಂಡಾಂಗಿನ ಎಲ್ಡು ಹೈಕಳನ್ನ ಟೀವಿ ಮುಂದ್ಗಡ ನಿಲ್ಸಿ ತಾನೂವಿ ಕುಂತ್ಗಂಡು ಜೂಸ ಕುಡ್ದು ದೇಸಕ್ಕ ತೋರಿಸುತಿದ್ನಂತ. ಅಲ್ಲುಗ ದೇಸಕ್ಕ ಹಿಡ್ಕಂತ ಸನಿ ಬುಡ್ತಾಂವ್ನ ಉಪಾಸ ಬುಡ್ಸಿ ಅವ್ನ ಸುತ್ತೂವಿ ಪೊಲೀಸ್ಗಳ ಮಡಗಿ ಕಯ್ಯಾಗೆ ಬಂದೂಕ ಕೊಟ್ಬುಟ್ಟು "ಮುದುಕಪ್ಪ ಕ್ಯಾತೆ ತಗುದ್ರ ಹೆದ್ರುಸ್ಬುಡಿ" ಅಂದ್ಕಂಡು ಗೌರ್ಮೆಂಟು ತನ್ನ ಪಾಡಿಗ ತಾನಾಯ್ತಂತ.

ದೇಸದ ಸನಿ ಬುಡ್ಸೋ ಮುದುಕಪ್ಪನ ಇಚಾರ್ವ ಕೇಳುತ್ಲೇ ಲಂಕೆಯ ಜನ್ಗಳು ಕಡೇ ಸ್ರಾವಣ ಸನಿವಾರಕ್ಕ ನಾಟ್ಗವಾಡೋದು ಅಂದ್ಕಂಡು ತೀರ್ಮಾನ ಮಾಡ್ತಾರ. ಈ ಲಂಕೆ ಇರಾದು ಬಾರತ ದೇಸದ ಕರ್ನಾಟಕ ರಾಜ್ಯ ಮಯ್ಸೂರು ಜಿಲ್ಲಾ ನಂಜ್ನಗೂಡ ತಾಲೂಕಿನಾಗೆ. ದಕ್ಸಯಜ್ಞವೋ... ಸನಿ ಮಾತ್ಮೆನೋ... ಅಂಬೋದು ತುಸು ಎಳದಾಟವಾಗಿ ಕೊನಗ ಊರಿನ ಹಿರಿತಲ ಮಾದೇಸ್ವಾಮಿಯವರು, "ಅದ್ಯಾಕುಡ ಮಾತು ಸ್ರಾವಣಕ್ಕ ಆಡೋದ್ರಿಂದ ಸನಿ ಮಾತ್ಮೇನೇ ಸರಿಕನ" ಅಂದುದ್ದೇ ಊರ ತೀರ್ಮಾನವೂ ಆಗಿ ಪೈನಲ್ಲಿಗೆ ಸನಿ ಮಾತ್ಮೆ ನಿಂತ್ಗತು.

ಈ ಲಂಕೇಲಿ ಒಂದು ಹಟ್ಟಿ ಅದ. ಅಲ್ಲಿ ಕೆಂಚ ಅನ್ನೋ ಗಂಡು ಟೀವಿ ನೋಡ್ಕಂತ ಮುದುಕಪ್ಪಗ ಹೈಕಳು ಜೂಸ ಕುಡ್ಸೂದ್ನ ಕಂಡು ಬ್ಯಾಸರ್ಕ ಪಟ್ಕಂಡು ಟೀವಿನ ಬಂದ್ಮಾಡ್ಬುಟ್ಟು ಚಿಂತವಾಗಿ ಇಸ್ಕೂಲ್ಮನಿ ದಿಕ್ಕುಗ ನಡ್ದನು. ಇಸ್ಕೂಲ್ಮನಿ ಪೀಲ್ಡಿನಾಗೆ ಮರಿಗಳ ಮೇಯಿಸ್ಕಂಡಿದ್ರೂವೆ ಕೆಂಚ ಅಕ್ಸರ ಕಲಿಯೋದ್ರಿಂದ ದೂರವೆ ಉಳ್ಕಂಡಿದ್ದನು. ಅದಕ್ಕ ಕಾರಣವು ಇಸ್ಕೂಲ ಸೇರ್ಕಂಡು ನಾಕಾರು ಜಿನ ಹೋಗೀಬಂದು ಮಾಡ್ತಿರಬೇಕಾರ ಒಂಜಿನ ಮಾಸ್ಟ್ರು ಎಲ್ಲಾ ಹೈಕಳ ಮುಂದೆ, "ಕೆಂಚ ನೀನು ಜಾತಿ ಸರ್ಟಿಫಿಕೇಟು ತಂದ್ಕೊಡಬೇಕಪ್ಪ. ನಿಮ್ಮಪ್ಪಗ ಹೇಳಿ ನಂಜ್ನಗೂಡಿಗೆ ಹೋಗಿ ಮಾಡಿಸ್ಕಂಡು ಬರಾಕೇಳು" ಅಂದುದಾಗಿತ್ತು. "ನಾನಿಂತಾ ಜಾತಿಯಾಗ ಹುಟ್ಟಿವ್ನಿ ಅಂಬೋದು ಇಡೀ ಊರ್ಗ ಗೊತ್ತದ. ಮ್ಯಾಗಲಕೇರಿ ಹೈಕಳ ಮುಂದ ನಂಗ ಅವುಮಾನ ಆಗ್ಲಿ ಅಂತ ಆ ಮೇಲ್ಜಾತಿ ಮಾಸ್ಟ್ರು ಹೀಂಗಂತರ. ನನ್ನೊಬ್ನಿಯಾ ಕರದು ಏಳಬೌದಿತ್ತು. ನಮ್ಮಪ್ಪ ಅವ್ವ ಕೇಳಿದ್ರು ಅಂತ ನಾ ಊಹೂಂ! ನಿಮ್ಮೀಸ್ಕೂಲು ಬ್ಯಾಡಿ ಆ ಸರ್ಟಿಫಿಕೇಟು ಮಾಡ್ಸಂಗಿಲ್ಲ" ಅಂದ್ಬುಟ್ಟು ಕೆಂಚ ಇಸ್ಕೂಲ್ಗ ಹೋಗೋದ್ಬುಟ್ಬುಟ್ಟು ಹೊರಕ್ಕ ಮರಿ ಮೇಯಿಸ್ಗಂಡು ಕೂತ್ಗತನ.

ಇದಾದ ಮ್ಯಾಲ ಕೆಂಚ ದಿನಾಲೂವಿ ಗಂಟಾ ಹೊಡಿಯೋ ಟೇಮಿಗ ಮರಿ ಕರ್ಕಬಂದು ಪೀಲ್ಡಿನಾಗೆ ಬುಟ್ಬುಟ್ಟು ಇಸ್ಕೂಲ್ಮನಿತಕ್ಕಿದ್ದ ಹೊಂಗಮರ ಹತ್ಗಂಡು ಕುಂತ್ಕತಿದ್ದ. ನಾಕ್ದಿನ ಮಾಸ್ಟ್ರು ಬಂದು ಒಳಕ್ಕ ಬರ್ಲಿಕ್ಕೇಳಿದ್ರೂವಿ ಅಂವ ಹೋಗ್ನಿಲ್ಲ. ಆಮ್ಯಾಕ ಅವುರು ಬುಟ್ಬುಟ್ಟರು. ಅವ್ನಿಂದ ಯಾವ ಅಪಾಯವೂ ಇಲ್ಲದ್ದ ಕಂಡು ಬರಬ್ಯಾಡ ಅಂತ್ಲೂ ಹೇಳ್ನಿಲ್ಲ. ಹೀಂಗ ತಿಂಗ ತಿಂಗಾ ಕಳ್ದು ಪರೀಕ್ಸಾ ಟೇಮೂ ಬಂದು ಹೈಕಳು ಓದೋದು ಬರಿಯೋದು ಜೋರು ನಡುದಿತ್ತು. ಒಂಜಿನ ಪರೀಕ್ಸಾ ಟೇಮಿಗ ಒಳಕ್ಕ

> ಕೆಂಚ ಸ್ಟೇಜಿನ ಹಿಂದ್ಕ ಒಡ್ಬೇಕು ಅನ್ನೋ ಹೊತ್ಗ ಹುಡುಗನೊಬ್ಬ ಜಾಡಮಾಲಿಯ ವೇಷ ತಾಳ್ಕಂಡು ಹಿಡುಗ್ಲ ಹಿಡ್ಕಂಡು ಕಾಗ ಮರಿ ಎತ್ತಾಕಲು ಬರುತ್ತಿದ್ದಂತೆ ಜನ್ಗಳು "ಹೋ" ಅಂತ ಕಿರುಚಿತು. ಯಾರೋ ಸ್ಟೇಜಿಗ ನುಗ್ಗಿ ಆ ಹುಡುಗ್ನ ತಳ್ಳಿದ್ರ ಕಂಬಕ್ಕ ತಲ ಬಡುದು ಹುಡುಗ ಚೀರಿತು. ಕೆಲವರು ಕೆಂಚನ ಹಿಡ್ಕಂಡು ಚಚ್ಚಿದ್ರು. ಸುದ್ದಿಮಾದಯ್ಯ ಕತ್ತಲ್ಲಿ ಕರಗಿದ್ರ ಜನ್ಗಳು ಊರ್ಗ ಕೇಡು ಅಂಬಂಗ ಕೆಂಚ್ಗ ನಾನಾ ತರವಾಗಿ ಬಯ್ಯುತ್ತಿದ್ದರು. ಆವೊಂದು ಕ್ಷಣದಲ್ಲಿ ಅಲ್ಲಿನ ಚಿತ್ರ ಬದಲಾಗಿಬಿಟ್ಟಿತು. ಇಂತಿರುವಾಗ ಕೆಂಚನ ಹಟ್ಟಿದಿಕ್ಕುಗ ಬೆಂಕಿಯೊಂದು ಮೊದ್ಲುಗ ಸಣ್ಣಕುರುದು ಆಮ್ಯಾಕ ದೊಡ್ಡದಾಗಿ ಉರ್ಕಂಡು ಎಲ್ಲರನ್ನ ಸೆಳ್ಕಂಡಿತು.

ನುಗ್ಗಿದ ಕೆಂಚ ಮಾಸ್ಟ್ರುಗ "ನಂಗ ಪರೀಕ್ಸಾ ಮಾಡ್ರಿ ಸಾ" ಅಂದುದ್ಕ ಅವುರು ಚೋಟುಗ ಪಟ್ಕಂಡು, "ಕೂಸು, ನಾ ಡಾಕ್ಟ್ರು ಅಲ್ಲಕಪ್ಪ" ಅಂತರ. "ಅಂಗಲ್ಲ ಸಾ, ನೀವು ಈ ಹೈಕಳಿಗೆಲ್ಲ ಏನ್ ಪರೀಕ್ಸಾ ಮಾಡ್ತಿರೋ ಅದ್ನ ನಂಗೂವಿ ಮಾಡಿ. ಆದ್ರ ನಾ ಬರಿಯಾಂಗಿಲ್ಲ ಯೋಳ್ತಿನಿ" ಅಂದ್ಕ ಪಟ್ಟು ಹಿಡ್ದು ನಿಂತ್ಗಂಡ್ರ ಮಾಸ್ಟ್ರುಗ ಯಾನಾಮ್ಡ್ಬೇಕು ಅಂಬೋದು ಅರುವಾಗದೆ, "ಒಂದು ಪ್ಲಸ್ ಒಂದು ಎಷ್ಟ?" ಅಂದ್ರ "ಅದ್ಯಾಡಿ ಸಾ ಪಾಟ್ದಾಗಿನ ಪ್ರಸ್ನ ಕೇಳ್ರಿ. ನಾ ಉತ್ರ ಕೊಡ್ನಿಲ್ಲ ಅಂದ್ರ ನನ್ನ ಪೊಲೀಸ್ಗ ಕೊಡಿ" ಅಂದ್ಕಬುಟ್ಟು ಕೆಂಚ ದುಡವಾಗಿ ನಿಂತ್ಗಂಡನು. ಮಾಸ್ಟ್ರುಗ ಒಂದ್ಮನ್ಸಾಗಿ ಪಾಟ್ದಾಗಿನ ಪ್ರಶ್ನಗಳ ಒಕ್ಕಡೆಯಿಂದ ಕೇಳ್ತಿದ್ರ ಕೆಂಚ ನೀರ್ಕುಡ್ದಂಗ ಉತ್ರ ಹೇಳುತ್ತಿದ್ದನು. ಪ್ರಶ್ನ ಕೇಳಿ ಕೇಳಿ ಮಾಸ್ಟ್ರೇ ಸುಸ್ತಾದ್ರೇ ವಿನಾ ಕೆಂಚ್ಗ ಅದ್ಯಾವುದು ಕಾಣಿಸದೆ ಕುಸಿ ಅಂಬೋದು ಮನುಕ್ಕೆಲ್ಲ ಆವರಿಸ್ಕಂಡು ಕಣ್ಣುಗಳು ಹೊಳೆಯುತ್ತಿದ್ದವು. ಮೂಕರಂತಾಗಿದ್ದ ಮಾಸ್ಟ್ರು ಸುಧಾರಿಸ್ಗಂಡು "ನೀನು ಇಸ್ಕೂಲ್ಮನಿ ಒಳಕ್ಕ ಬರ್ಬೇಕಪ್ಪ" ಅಂದ್ಕ ತಬ್ಗಂಡ್ರು. ಕೆಂಚ, "ಇಸ್ಕೂಲ್ಮನಿ ಒಳಕ್ಕ ಕೂತಿರೋದು ನಂಗ್ಯಾಕೋ ಬ್ಯಾಸರ್ಕಕನಿ. ಅದ್ಕ ನಾನು ಅಲ್ಲಿದ್ದೇ ಕಲಿತಿವ್ನಿ" ಅಂದ್ಕಂಡು ಹೊರಗ ಕಯ್ತೊರ್ಸಿ ಅತ್ತಗ ನಡ್ದನು.

ಕೆಂಚ ಇಂದ್ಗ ದೊಡ್ಡವನಾಗಿ ಒಂದು ಮಟ್ಟಕ್ಕ ಬೆಳೆದಿದ್ದರೂ ಅವಗ ಅಕ್ಸರ ಅಂಬೋದು ಬರ್ನೇ ಇಲ್ಲ. ಬರ್ಕಂಡಿರಾದ್ನ ಅನ್ಮಂದ್ಕ ಓದ್ಬುಟ್ರ ಮತ್ತದನ್ನ ಅಳ್ಸೋದು ಸಾಧ್ಯಾನೇ ಇರ್ತಿರ್ಲಿಲ್ಲ. ಹಾಂಗ ಪ್ರಿಂಟಾಗ್ಬಿಡೋದು. ಊರ್ನ ಇಸ್ಕೂಲಲ್ಲಿ ಏನೇನ್ ಪಾಠ ಅದ ಅದೆಲ್ಲವಿ ಅವನ ತಲೇಲದ. ಆದರ ಅದರ ಮುಂದ್ಕ ಯಾನೂ ಕಂಡಿಲ್ಲ ಅಂವ. ಆಗೀಗ ಅವುನು ಇಚಾರ ಮಾಡೋ ರೀತಿಗ ಊರ್ಜನ ಅವನ ಜಾತೀನೂ ಮೀರಿ ಮೆಚ್ಚಂಡಿದ್ದು ಬಹಳ ಸಲ ನಡ್ದದ.

ಇಂತಾ ಕೆಂಚ್ಗ ಚಿಂತಾವು ಈ ಕ್ಷಣಕ್ಕ ಆವರಿಸೋಕೆ ಕಾರಣವು ಟೀವಿ ನೋಡಿದ್ದಾಗಿತ್ತು. ಇಸ್ಕೂಲ್ಮನಿ ಪೀಲ್ಡಿನಾಗೆ ನಾಟ್ಗ ಆಡಾಕ ಕಿಲೀನ್ ಮಾಡೋ ಕಾಯಕವು ಬರದಿಂದ ಸಾಗಿತ್ತು. ಹೈಕಳ ಕೆಲ್ಸಕ್ಕ ಡೈರೆಕ್ಸನ್ ಕೊಡೋ ಸಲುವಾಗಿ ಕಡ್ಡಿ ತಗಂಡು ಪೊಲೀಸಾಗಿದ್ದ ಮಾಸ್ಟ್ರುಗ ಕೆಂಚ, "ಸಾ ಬಾರತ ದೇಸ್ದಾಗೆ ಯಿಂತಾ ಐಕ ಎಷ್ಟಿರ್ಬೋದು?" ಅಂದ. "ಕೋಟಿಗಟ್ಟಳೆ ಅವೆ" ಅವ್ರಂತಂದ್ರ ಕೆಂಚ್ಗ ಆ ಉತ್ತರವು ಸರಿಬರದೆ, "ನಂ ದೇಸ್ದಾಗೆ ಬಡೋರೆಷ್ಟು ಸಾ ?" ಅಂಬುದ್ಕ ಮಾಸ್ಟ್ರತಪು ಉತ್ತರ ಇಲ್ಲ. ಆದರೂ ಕೆಂಚನ ಮುಗ್ಧತೆಯ ಅರಿವಿದ್ದ ಅವರು, "ಎಂಬತ್ತು ಕೋಟಿಗೂ ಮಿಗಿಲಪ್ಪ" ಅಂದ್ರು. "ಅಂದಮ್ಯಾಗ ಆ ಮುದುಕಪ್ಪ ಇಂತಾ ಯಾವ್ದಾದ್ರೂ ಮಕ್ಕಳ ಕಯ್ನಲ್ಲಿ ಜೂಸ ಕುಡಿಬೋದಿತ್ತು ಇಲ್ಲಾ ಅಂತೋರಟ್ಟೀಲಿ ಮುದ್ದೆ ಉಂಡಿದ್ರೆ ನಾ ಮೆಚ್ಚಗತಿದ್ದಿ. ನಿಜ ಹೇಳ್ತಿನಿ ಸಾ, ಯಾವುದೇ ಓರಾಟ ಮಾಡ್ವಾಗ್ಲೂ ನಂ ಶತ್ರುನ ಕರೆಟ್ಟಾಗಿ ಹುಡೀಕಬೇಕು" ಅಂದ್ಬುಟ್ಟು ಅಂವ ಹೈಕಳ ಜೊತ್ಗ ಕೆಲ್ಸವಾದ್ರ ಮಾಸ್ಟ್ರುಗ ಇದೇನು ಎತ್ತ ಅಂಬೋದು ಅರುವಾಗದೆ ಕಡ್ಡಿ ಪೊಲೀಸಾಗ್ಬುಟ್ರು.

✶ ✶ ✶

ಊರ್ಲಿ ನಾಟ್ಗ ಆಡ್ತಾರ ಅಂದ್ರ ಅದ್ರ ತಾಲೀಮಂಬೋದು ಮಠದ ಪಡಸಾಲದ ಮ್ಯಾಲನ ನಡಿಯೋದು. ಯಾಕಂದ್ರ ನಾಟ್ಗ ಆಡೋರೆಲ್ಲವಿ ಮಠದೊಳಕ್ಕ ಸಲೀಸಾಗಿ ಹೋಗಿಬರೋ ಜಾತಿಯವರಾಗಿರುತ್ತಿದ್ದರು. ಈ ಸಂಜೇಕ ಪಡಸಾಲದ ಮ್ಯಾಕ್ಕ ನಾಟ್ಗದ ಸಲುವಾಗಿ ಕೂಟ ಸೇರುವದಿತ್ತು. ಪಾರ್ಟು ಮಾಡೋ ಉಮೇದುವಾರಿಗಳೂ ಪಾರ್ಟು ಸಿಗದಿದ್ರೂ ವಡಾ–ಟೀ ಸಿಗ್ತದಲ್ಲ ಅಂಬೋ ಆಶೆಬುರುಕರೂ ಹೆಚ್ಚು ಕಾಸಾಕ್ಬುಟ್ಟು ತಾನೇ ಸನಿಪಾರ್ಟು ಹಿಡಿಬೇಕಂಬೋರೂ ಥಂದದ ಹುಡುಗೀರ್ನ ಕರೆಸ್ತಪ್ಪೋ ಅಂಬೋ ಚಪಲಚನ್ನಿಗರೂ ಸಂಜೆ ಕೂಡಿಕೊಳ್ಳುತ್ತಿರುವಾಗ ಪಡಸಾಲದಲ್ಲಿ ಒಗ್ಗಟ್ಟಾದರು. ಅಷ್ಟೊತ್ಗ ಕೆಂಚ ಪೇಪರು ಹಿಡ್ಕಂಬಂದು ಗೆಳೆಯ ಸುದ್ದಿ ಮಾದಯ್ಯನಿಗಾಗಿ ತಡಕಿದ್ರ ಅವನೋ ಮುಂದ್ಕ ನಡಿಯೋ ಮೀಟಿಂಗಿನಲ್ಲಿ ತನ್ನದೊಂದು ಟಾಂಗು ಕೊಡುವುದಕ್ಕೆ ತಯಾರಿ ನಡೆಸಿದ್ದನು. ಸುದ್ದಿಮಾದಯ್ಯ ಊರಲ್ಲೇ ಕೊಂಚ ಲಿಬರಲ್ಲಾಗಿದ್ದು 'ಚೇಂಚ್ಗ' ಅಂತ ಕೆಂಚನ ಗೆಳೆತನವ ಮಾಡಿದ್ದನು. ಓದಲು ಬಾರದ ಆ ಹೊಲಾರ ಹುಡುಗಗ ಸುದ್ದಿ ಓದುವುದೇ ತನ್ನ ಜಾತ್ಯಾತೀತ ಮನೋಭಾವವೆಂದುಕೊಂಡಿದ್ದ ಮಾದಯ್ಯ ಸುದ್ದಿ ಓದೀ ಓದೀನೇ ಜನ್ಗಳ ಬಾಯೊಳಗೆ ಸುದ್ದಿಮಾದಯ್ಯ ನಾಗಿದ್ದನು. ಚೆನ್ನಾಗಿ ಓದಬಲ್ಲ, ಆದರೂ ತಿಕ್ಕಲು ಬುದ್ಧಿಯ ಮ್ಯಾಗಲಕೇರಿಯ ಮಾದಯ್ಯನ ಗೆಳೆತನವ ಕೆಂಚನೂ ಒಪ್ಗಂಡಿದ್ದನು.




ಈ ಕ್ಷಣ ಕೆಂಚ ಗೆಳೆಯನ ಕಾಣಲು ಗಡ್ಡ ಬಿಟ್ಕಂಡಂತ ಸ್ವಾಮಿ ಒಬ್ಬ ಹೆಣ್ಣಯ್ಕಳ ಚೂಡೀದಾರವ ದರುಸ್ಕಂಡು ಪೊಲೀಸ್ಗ ಸಿಗಾಯ್ಕಂಡಂತ ಪೋಟವೊಂದು ಆ ಪೇಪರಿನಾಗಿತ್ತು. ಅದೇನಂಬೋದು ಅವಗ ತಿಳಿಬೇಕಾಗಿದ್ರಿಂದ ಕಡೆಗೂ ಗೆಳೆಯನ್ನ ತಡಕಾಡಿ ಸನ್ನೆ ಮಾಡುದ್ರ "ಆಮ್ಯಾಕೋದುವ" ಅಂದ್ಕಂಡು ಅವ ತನ್ನ ತಯಾರಿಯಲ್ಲಿ ತೊಡಗಿದನು. ಅಷ್ಟೊತ್ಗ ಚುಮ್ಮುರಿ ಪ್ರಕಾಸಣ್ಣನಿಂದ ಚುಮ್ಮುರಿಯೂ ಸೀನಪ್ಪನ ಓಟ್ಲಿಂದ ಟೀ ಬಂದು ಅಲ್ಲಿ ಹೊಸ ಗದ್ದಲವೆದ್ದಿತು. ಸ್ವಾಮಿ ಎಂಬೋ ಉದಾರಿಯು ನೀರು ಬಾರದ ಬೋರಿನ ಮ್ಯಾಕ್ಕ ಕೂತಿದ್ದ ಕೆಂಚನ ನೋಡ್ಬುಟ್ಟು, "ಡೇ ಕೆಂಚ, ಟೀ ತಕ್ಕ" ಅಚಿತಂದ್ರ ಅಂವ, "ನಂಗ ಬ್ಯಾಡಿ ಅಳಿ" ಅಂದನು. ಅದ್ಕ ಸ್ವಾಮಿಯು, "ಯಾಕಲೇ ಹೊಲ್ಯಾ... ತಕ್ಕ ಕುಡಿಲೇ" ಅಂತ ಗುರುಗುಟ್ಟಿದ್ರ ಪಡಸಾಲದ ಮ್ಯಾಲಿದ್ದ ನಾಕಾರು ಮಂದಿ,

"ಡೇ ಸ್ವಾಮಿ, ಮುಚ್ಕ ಕೂತ್ಗಳಲೇ."

"ಡೇ ನಿಮ್ಮವ್ವನಾ...ಕ್ಯಾ ಜಾತಿ ಯಾಕ್ಲಾ ನಿಂಗ ?"

"ಬ್ಯಾಡ ಅಚಿದ್ರ ಬುಡು ಬಡ್ಡೆತದೆ."

"ಕೆಂಚನಚಿತ ಕೆಂಚ್ಗಂದೀಚೆಯಾ ಸುಮ್ಕೆ ಕೂತ್ಗೊ" ಎಂಬುದಾಗಿ ಮಾತಲ್ಲೇ ಸ್ವಾಮಿಯ ಹದ್ದುಬಸ್ತಿಗ ತಂದರು. ಕೆಂಚ ಮಾತ್ರ ಸುಮ್ಮಗಿದ್ದನು.

ಸ್ವಾಮಿಯ ಮಾತಿಂದ ಸುದ್ದಿಮಾದಯ್ಯನ ಜಾತ್ಯಾತೀತ ಮನೋಭಾವಕ್ಕ ಪೆಟ್ಟುಬಿದ್ದು ಅದೇ ಅವನನ್ನ ಕೆಂಚನತ್ರಕ್ಕ ತಂದು "ಕೆಂಚ, ನಡಿ ಪೊಲೀಸ್ ಸ್ಟೇಶನ್ನಿಗ" ಅಂದ್ರ ಪಡಸಾಲದ ಜನ್ಗಳು ಗಾಬರಿಯಾಗಿ, "ಡೇ ಡೇ ಮಾದ್ಯ, ಕೆಂಚ ನಿಲ್ರುಡ" ಅಂದ್ಕಂಡು ಜಿಗಿದು ಬಂದರು. ಅವರೊಳಗ ಗುಸು ಗುಸು ಎದ್ದು ಕೊನಗ ದೊಡ್ಡೀರಯ್ಯ ಅಂಬೋ ದೊಡ್ಡಾಳು, "ಕೆಂಚ ನಿಂಗ ಅಂದುದ್ಕ ನಮ್ಗೂ ನೋವಾಗದ. ಪೊಲೀಸಂದ್ರ ಊರ್ನ ನೆಮ್ದಿ ಕೆಡ್ತದ" ಅಂದ್ರ ಸುದ್ದಿಮಾದಯ್ಯ, "ಅಲ್ಲಕಯ್ಯ, ಒಂದೇ ಊರಂದಮ್ಯಾಗ ಅಣ್ತಮ್ಮಂದಿರ ತರವಾಗಿರ್ಬೇಕು. ಈ ಸ್ವಾಮಿಯಂತ ಬಡ್ಡೇತದು ಇದ್ರ ಊರೇ ಕೆಟ್ಟೋಯ್ತದ. ನಡಿ ಕೆಂಚ" ಅಂದ್ಕ ಅವಸರ ಮಾಡಿದನು. ದೊಡ್ಡೀರಯ್ಯ, "ಅಂವ ಅಂದುದು ತಪ್ಪುಕಯ್ಯ. ಕೆಂಚ್ಗೂ ಇಚಾರ ಮಾಡೋ ಸಗ್ತಿ ಅದ. ಅವ್ನೂವಿ ವಸಿ ಮಾತಾಡ್ಲಿ ಬುಡು" ಅಂದ್ರೂವಿ ಕೆಂಚ ಮಾತಾಡ್ನಿಲ್ಲ.

ಅಲ್ಲಿ ನಡಿತಿರೋದು ಕವುಚಿಕೊಳ್ಳುತ್ತಿದ್ದ ಕತ್ತಲೆಯಲ್ಲಿಯೂ ಸುದ್ದಿಯಾಗಿ ಎಲ್ಲರ ಹಟ್ಟೀಲೂ ಕರೆಂಟ್‌ದೀಪ ಹತ್ಗಂಡು ಅದು ಪಡಸಾಲದ ಮುಂದ್ಕಿದ್ದ ಸಾರ್ವಜನಿಕ ದೀಪವೂ ಆಗಿ ಊರೊಳಗ ಅಷ್ಟೊದ್ಕ ಚಲ್ಕಂಡ್ರ ಜನ್ಗಳೋ ಅದನ್ನ ನೋಡಾಕ ಅಲ್ಲಲ್ಲೇ ನಿಂತ್ಗಂಡಿತು. ಇದರ ಅರುವಾದ ಸುದ್ದಿಮಾದಯ್ಯ ದನಿಯ ಎತ್ತರಿಸ್ಗಂಡು, "ಅಂವ ಅಂಬೋದು ತಪ್ಪು. ಅದ್ನ ನೀವೆಲ್ಲವಿ ಒಪ್ಕತೀರಿ ಅಂದಮ್ಯಾಗ ನಾನೂವಿ ಇದ್ನ ಇಲ್ಲಿಗೇ ಬುಟ್ಬುಡ್ತೀನಿ. ಆದ್ರ ಸ್ವಾಮಿ ಕೆಂಚ್ಗ ತಪ್ನ ಕೇಳಿದ್ರ ಕೇಳ್ಲಿ ಮತ್ತ" ಅಚಿದಂತ ಮಾತ್ನ ಕೇಳಿ ಸ್ವಾಮಿ ಕೆರಳಿ, "ಲೇ ಮಾದ್ಯ, ಹೊಲಾರಿಗುಟ್ಟಿದ ಬಡ್ಡಿ ಹೈದ್ನೇ" ಅಂತ ಕೂಗಾಡಿದ್ರ ಆ ಗುಂಪು ಅವುನ್ನ ಹಿಡ್ಕಂಡು

"ಡೇ, ಇನ್ನೂ ಒಂದಂದೀಯಾ"

"ಮುಂಡೆಮಗ್ನೆ ಮತ್ಯಾಕ ಜಾತಿಗ ಕಯ್ಯಾಕ್ತಿ ?" ಅಂದ್ಕಂಡು ಚೆನ್ನಾಗಿ ಇಕ್ಕಿದರು.

ಇದು ಇಲ್ಲಿಗೆ ನಿಲ್ಲುವಂತದ್ದಲ್ಲ ವೆಂಬುದ ಅರಿತುಕೊಂಡ ಹಿರಿತಲ

ಮಾದೇಸ್ವಾಮಿಯವರು ತನ್ನ ಕೆಮ್ಮಿನಿಂದಲೇ ಅಲ್ಲಿಯ ಎಲ್ಲವ ಹತೋಟಿಗ ತಂದ್ಕಂಡು, "ನಾವು ನಾಟ್ಗ ಮಾಡಾಕ ಸೇರ್ಕಂಡ್ರ ಅದಿಲ್ಲಿ ಬ್ಯಾರೆ ತರ್ವಾಗದ. ಸ್ವಾಮಿ ಅಂದುದು ತಪ್ಪುಕಯ್ಯ. ಅಂವ ತಪ್ನ ಕೇಳ್ನಿಲ್ಲ ಅಂದ್ರ ಪೊಲೀಸತಕ್ಕೋಗು. ಕೆಂಚ ಕೇಳಿದ್ರ ಇಲ್ಲಿಗ್ಬುಟ್ಬುಡು" ಅಂಬೋ ವಾಕ್ಷಕ್ಕ " ಕೇಳುಡ... ಕೇಳಲೇ ಬಡ್ಡೆತದೆ..." ಅಂಬಂತ ಒತ್ತಡಗಳು ಗುಂಪಿಂದ ಗುಂಪು ಗುಂಪಾಗಿ ಬಂದ ಸ್ವಾಮಿಯ ಮೇಲ್ಜಾತಿಯ ಪೀಠವ ತಿವುದಂತಾಗಿ "ತಪ್ಪಾಯ್ತು ಕಣ್ಲಾ" ಕೆಂಚ್ಗಂದ ಸುದ್ದಿಮಾದಯ್ಯನ ಕೆಕ್ಕರಿಸ್ಗಂಡು ನೋಡಿ ಹಟ್ಟಿದಿಕ್ಕುಗ ಓಡಿದನು.

ಅಂವ ಅತ್ತಗ ನಡದ್ರ ಇತ್ತಗ ಎಲ್ಲರ ಕಣ್ಣುಗಳ ಕೆಂಚನ ಮ್ಯಾಕ್ಕ ನೆಟ್ಗಂಡವ. ತನ್ನ ಮಯ್ಯಂಟಿದ್ದ ಜಾತಿಯಿಂದ ಈ ತರವಾಗೆಲ್ಲ ಬಲಿಯಾಗಬೇಕಾದ ಸನ್ನಿವೇಶಕ್ಕ ಅವನೊಳಗ ಯಾತನೆಯು ಉಂಟಾಗಿ ಪೇಪರು ಕೆಳಬಿದ್ದು ಹಟ್ಟಿದಿಕ್ಕುಗ ಕಾಲೆಳೆದನು.

ಚೆಲ್ಕಂಡಂತ ಕರೆಂಟು ಬೆಳಕಿನಲಿ ಮೀಟಿಂಗಂಬೋದು ನಡೀತೋ ನಡೀನೇ ಇಲ್ವೋ ಅನ್ನುವಂತಿದ್ದರೂ ಸನಿ ಮಾತ್ಮೆ ಆಡಲೇಬೇಕೆಂಬ ತೀರ್ಮಾನಕ್ಕೆ ಬದ್ಧರಾಗಿದ್ದ ಜನ್ಗಳು ತಾವೇನೇನ ಮಾಡ್ಬೇಕು ಅಂಬೋದ್ನ ಹಂಚ್ಕಂಡು ಹಟ್ಟಿ ಸೇರ್ಕಂಡ್ರು. ದೊಡ್ಡಮಠಕ್ಕ ಹೋಗಿದ್ದು ರಾತ್ರಿ ಮಾಡ್ಕಂಡು ಬಂದ ಬುದ್ಯೋರು ಊರೊಳಗಿನ ಬಿಸಿಗಾಳಿ ಉಸಿರಾಡಿ ಸ್ವಾಮೀನ ಕರಸ್ಗಂಡು ಸಮಾಧಾನ ಹೇಳಿದ್ರ ಕೆಂಚ್ಗ ಬೆಳಕರೀತ್ಲೇ ನೋಡಿಕೊಂಡು ಹೋಗಲು ಹೇಳಿಕಳಿಸಿದರು.

ಕೆಂಚನ ಕೇರಿಯೊಳಗ ರಾತ್ರಿ ತುಂಬಾ ಹೊತ್ತಿನಗಂಟ ದೀಪಗಳು ಉರಿದವು. ಹೇಳಲೇಬೇಕೆಂದು ಬಂದವರು ನಮಗ್ಯಾಕ ಅಂದ್ಕಂಡು ಹಿಂದ್ಕ ಹೋದರು. ಕೆಲವರು ಕೆಂಚನ ಅವ್ವಗ ಹೇಳಿದರು. ನಂಜ್ನಗೂಡ್ಲಿ ಬುದ್ಧಿಜೀವಿ ದನದ ಡಾಕ್ಟ್ರನ್ನ ನೋಡಿ ಬಲ್ಲಂತ ಜಗದೀಶ ಎಂಬವನು ನಾಳಕ ಆ ಡಾಕ್ಟ್ರನ್ನ ಕಂಡ್ಬುಟ್ಟು ಮುಂದ್ಕ ಕಾನೂನು ಮಾಡುವುದೆಂದು ಹೇಳಿದ್ರ ಕೆಂಚ, "ಯಾನ್ನೂ ಬ್ಯಾಡಿ. ಅವಗ ತಪ್ನ ಅರಿವಾಗದ. ನೀವೆಲ್ಲ ಮಲಿಕಳಿ." ಅಂದ್ಬುಟ್ಟು ಅದ್ನ ಅಲ್ಲಿಗೆ ಬುಟ್ಬುಟ್ಟನು.

✴ ✴ ✴

ನಾಟ್ಗದ ತಯಾರಿ ನಡೀತಿದ್ರೂ ಅದ್ಕ ಹಿಂದಿನ ದಿನಗಳಲ್ಲಿದ್ದ ಹುರುಪನ್ನ ಊರು ಕಳ್ಕಂಡಿತ್ತು. ಸೇರ್ಕಬೇಕು ಅಂದ್ಕಂಡಿದ್ದ ಸ್ವಾಮಿಯು ಈಗೀಗ ಊರೊಳಗೇ ಅಷ್ಟಾಗಿ ಕಾಣಿಸದಾದನು. ಸೇರ್ಕಳಕಾಗ್ದೇ ಇದ್ರೂವಿ ನಾಟ್ಗ ಅಂದ್ರ ಜೀವ ಬಿಡ್ತಿದ್ದ ಕೆಂಚ ಅತ್ತಗ ಸುಳಿಯದೆ ತನ್ನದೇ ಕಾಯಕದಲ್ಲಿ ಜೀವಂತವಾಗಿದ್ದನು. ಆದ್ರೂವಿ ನಾಟ್ಗ ತಯಾರಾಗ್ತಿತ್ತು.

✴ ✴ ✴

ನಾಟ್ಗಕ್ಕ ಹುಡುಗೀರ್ನ ಮಾತಾಡಿಕೊಂಡು ಬರಲು ಮೂರ್ಜನ ನಾಟ್ಗಮಾಸ್ತ್ರ ಜೊತ್ಗ ಹೋದವರು ಸಂಜೆ ಮಾಡಿಕೊಂಡು ಬಂದರು. ತಾವು ಮಂಡೇವುಕ್ಕ ಹೋಗಿದ್ದೂ ನಾಕ್ಜನ ಗೊಂಬಗಳು ಸಿಕ್ಕಿದ್ದೂ ಅವ್ರಿಗ ಒಂದೊಂದ್ ರಾತ್ರಿಗ ಒಂದೊಂದ್ ಸಾವುರ ಅಂಬುದ್ನೆಲ್ಲ ರಂಗಾಗಿ ಹೇಳಿ ಊರ ಗಂಡಸರೊಳಗ ಕಿಚ್ಚು ಹಚ್ಚಿಸಿದ್ದರು. ಆ ಮೂರ್ಜನ ಉಳ್ಕಿ ನಾಕ್ಜನ ರಾತ್ರನಗ ಸೇರಿಕೊಳ್ಳುವುದೆಂದು ಗುಟ್ಟುಮಾಡಿದರು.

ಹಟ್ಟಿಗಳಿಂದ ಹೊರಬಿದ್ದ ಆ ಏಳ್ಜನವಿ ಹೊಲಾರ ಕೇರಿಯ ದೊಡ್ಡ ಬೇವ್ನಮರದ ದಿಕ್ಕುಗ ನಡೆದು ಕೂಡಿಕೊಂಡರು. ಆ ಮೂರ್ಜನ ಅವುಸಿಟ್ಟಿದ್ದ ಬಾಟ್ಲೇನೂ ಕಬಾಬ್ನೂ ತೆಗೆದು ಬಾಯಿ ಚಪ್ಪರಿಸಿದ್ರ ಉಳ್ಕಿ ನಾಕ್ಜನ ಅವರ ಚಮತ್ಕಾರಕ್ಕ ಏನು ಹೇಳಬೇಕೆಂದು ಅರಿಯದೆ ಮೂಕರಾದರು. ಸಮಾರಾದ್ನೆ ಅಂಬೋದು ನಡೀತಾ ಇದ್ರ ಪೊದೆ ಹಿಂದ್ಕ ಕತ್ತಲೆಯಲ್ಲಿ ಎರಡು ಕಣ್ಣುಗಳು ಅಲ್ಲಿ ನಡೀತಿರೋದ್ನ ಹೀರಿಕೊಳ್ಳುತ್ತಿತ್ತು. ಬೆಳಕರಿತ್ಲೇ ಕತ್ತಲೆಯ ಸಮಾರಾದ್ನೆ ಸುದ್ದೀನ ಊರೆಲ್ಲ ಉಸುರಾಡಿ ಮಠವು ಆ ಏಳ್ಜನವ ಕರಸ್ಗಂಡಿತು. ಅವುರೆಲ್ಲರ್ನ ಸನಿ ಮಾತ್ಮೆಯೊಳಗಿಂದ ಕಿತ್ತುಹಾಕಿದ ಮಠವು ನಾಟ್ಗಕ್ಕ ಬ್ಯಾರೆಯವರನ್ನ

ಜನ-ವಾಹನಗಳು ಓಡಿ ಬಿಸಿಯೇರಿ
ರಸ್ತೆಗಳೆಲ್ಲ ಸುಟ್ಟುಹೋಗುತ್ತಿವೆ
ನೀರು ಹನಿಸೋಣವೆಂದರೆ
ಸಮುದ್ರಗಳೇ ಖಾಲಿಯಾಗುತ್ತವೆ,
ರಸ್ತೆಗಳೆಲ್ಲ ಸುಟ್ಟುಹೋಗಲಿ
ನನ್ನಂಥವನಿಗೆ ದಾಹವಾದಾಗ
ಬೇಕಾಗುತ್ತದೆ
ಸಮುದ್ರಗಳಾದರೂ ಉಳಿದುಕೊಳ್ಳಲಿ !

**ಗಣೇಶ ಹೊಸ್ಮನೆ**
ಜಾನ್ಮನೆ – ೫೮೧೩೧೫

ಹುಡುಕಿತ್ತು. ಇದು ಕೆಂಚನ ಘಟನೆಗಿಂತಲೂ ವಸಿ ಹೆಚ್ಚು ಊರನ್ನ ಕಂಗೆಡಿಸಿತ್ತು. ಆ ಏಳ್ಜನಕ್ಕ ಈ ಮಾಯದ ಅರುವಾಗದೆ ಕುಸಿದರೂ ಅವರೆಲ್ಲ ತಮ್ಮ ಸಮಯಕ್ಕ ಕಾದರು.

ಇನ್ನ ನಾಕ್ದಿನಕ್ಕ ಕಡೇ ಸ್ರಾವಣ ಸನಿವಾರ.

ಊರ್ಲಿ ನಾಟ್ಗದ ಸಲುವಾಗಿ ದೊಡ್ಡದೊಂದು ಫ್ಲೆಕ್ಸ್ ಬೋರ್ಡು ಮಠದ ಮುಂದ್ಕ ಅರಳಿಕೊಂಡು ಜನ್ಗಳ ಸೆಳ್ಕಂಡಿತು. ಅದರೊಳಗ ದೊಡ್ಡ ಬುದ್ಯೋರು, ಸಣ್ಣ ಬುದ್ಯೋರು, ಬಸವಣ್ಣೋರು ಪಾರ್ಟುಗಾರರು ಆ ಗೊಂಬಗಳು, ಜೊತ್ಗ ಊರ ಅರ್ದಕ್ಕರ್ದ ಗಂಡಸರು ನ್ಯೆಂಗ್ನಾಡ್ತ ಅಂಟ್ಕಂಡಿದ್ದರು. ಇದು ಊರೊಳ್ಗ ಹೊಸ ರಂಗುಮೂಡಿಸಿ ನಾಟ್ಗಕ್ಕ ಹೊಸ ಕಳೆ ತಂದಿತ್ತು.

✴ ✴ ✴

ಆವೊಂದು ಘಟನೆ ನಡೆದ ಮ್ಯಾಲ ಕೆಂಚ ನಂಜ್ನಗೂಡ ಲೈಬ್ರಿರಿಗ ಅಲೆದಾಡಿ ತನಗೆ ಬೇಕಾದಂತ ಬುಕ್ಕು ಪೇಪರ್ನ ತಡಕಿ ಆಯ್ಕಂಡು ತಂದು ಹಟ್ಟೀಲಿ ಗುಡ್ಡಾಕ್ಕಂಡಿದ್ದನು. ಮ್ಯಾಗಲಕೇರಿ ಕಿಲಾಡಿ ಹೈಕಳ ಗುಂಪ ಮಾಡ್ಕಂಡು ಹೊಲದಲ್ಲಿ ಕೂತ್ಗಂಡು ಬುಕ್ಕು ಪೇಪರ್ನ ಓದುಸ್ಕಂಡು ಹಾಡು ಕುಣ್ತ ಕಲ್ಸೋನು. ಅದ್ನ ಯಾರಿಗೂ ತಿಳಿಸಬಾರ್ದು ಅಂತ ಅಂದ್ಕಂಡಿದ್ದರೂ ಸುದ್ದಿಮಾದಯ್ಯಗ ತಿಳಿದು ಕೆಂಚನ ಕಾಯಕದಲ್ಲಿ ತನ್ನ ವಿಚಾರಧಾರೆಯ ತುರುಕುತ್ತಿದ್ದನು.

ಗೆಳೆಯನ ಕಾಯಕವು ತನ್ನ ಜಾತ್ಯಾತೀತ ಚಿಂತನೆಗಳನ್ನು ಜನ್ಗಳಿಗ ಅರ್ಥ ಮಾಡಿಸಲಿಕ್ಕ ಅಪೂರ್ವ ಅವಕಾಶದಂತೆ ಕಂಡು ಸುದ್ದಿಮಾದಯ್ಯ ಹಿಗ್ಗಿ ಆ ಹೈಕಳನ್ನು ಬುಟ್ಟಿಗ ಹಾಕ್ಕಂಡು ತಿಂಡಿ–ತಿನಿಸು ಕೊಡ್ಸಿದನು. ನಾಟ್ಗಕ್ಕ ಎರಡ್ದಿನ ಉಳ್ದಾಗ ಹೈಕಳಿಗೆ ಪ್ಲ್ಯಾನನ್ನ ತಿಳಿಸಿ ಕೆಂಚ್ಗ ಸುತ ಹೇಳ್ಬಾರ್ದು ಅಂದ್ಕ ಆಣೆ ಮಾಡಿಸ್ಕಂಡನು.

ಇಂದು ಕಡೇ ಸ್ರಾವಣ ಸನಿವಾರ.

ಸನಿ ಮಾತ್ಮೆ ತಯಾರಾಗಿತ್ತು. ಪಾರ್ಟುಗಾರರಿಗೆ ಬಣ್ಣ ಹಚ್ಕಂಡು ಕಾಣಿಸ್ಗಂಬೋ ಸಂಭ್ರಮ. ಕೆಲವರ್ಗ ಆ ಗೊಂಬಗಳ ಕಾಣೋ ತವಕ. ಆ ಏಳ್ಜನಕ್ಕ ಕಡೆಗೂ ಆ ಮುಂಡೆಮಗನ್ನ ಹಿಡಿಯಕಾಗ್ದೆ ಕಡೇ ಗಳುಗಲಿ ಕಯ್ಚಳಕ ತೋರಿಸಲು ಅವರವರು ಅವರವರ ಟೀಮಿಗ ಕಾಯ್ಕಂಡಿದ್ದರು. ಧಿಡೀರನೆ ಊರೊಳಗ ಕಾಣಿಸ್ಗಂಡ ಸ್ವಾಮಿಯ ಓಡಾಟ ಕೆಲವರ್ಗ ಬೆರಗು ತಂದಿಟ್ಟರ ಸುದ್ದಿಮಾದಯ್ಯ ಬೆಳಕರಿತ್ಲೇ ನಂಜ್ನಗೂಡ್ಗ ನುಗ್ಗಿ ಪತ್ರಕರ್ತರ ಕಂಡ್ಬುಟ್ಟು ತಮ್ಮೂರಿಗ ಕುದ್ದು ಬರಬೇಕೆಂದು ವೀಳ್ಯ ಕೊಟ್ಟುಬಂದನು.

ಅಚಿದು ಮದ್ಯಾನವು ಸಡಗರದಿಂದ ಸಂಜೇಕ ವಾಲುತಿದ್ದ ಗಳಿಗೇಲಿ ಬುದ್ಯೋರು ಗಾಳಿಗಂತ ಪಡಸಾಲದಲ್ಲಿದ್ದರು. ಇದ ಕಾಯ್ಕಂಡಿದ್ದ ಕೆಂಚ ಆ ಕೆಟ್ಹೋದ ಬೋರಿನತ್ರಕ್ಕೆ ಬಂದ್ಕಂಡು ಬುದ್ಯೋರ್ಗ ಅಲ್ಲಿಂದ್ಲೆ ಅಡ್ಡಬಿದ್ದನು. ಬುದ್ಯೋರು "ಏನು ಕೆಂಚ" ಅಂತಂದ್ರ ಸಣ್ಣಕಿವ ನಡುಗ್ತ "ಇಂದು ನಾಟ್ಗ ಬುದ್ದಿ" ಅಂದನು. "ಹುಂ. ನಿಂ ಕೇರಿಯವ್ರಿಗೂ ಬರೋಕೇಳು"

"ಹೇಳಿವ್ನಿ. ಬುದ್ದಿ ಸಂಜೇಕ ನಂ ಹೈಕಳಿಗೂ ನಾಟ್ಗ ಆಡಾಕ ಅವಕಾಶ ಕೊಡಿ ಬುದ್ದಿ."

"ಏನು ! ನಿಮ್ಮ ಹೈಕಳಾ ?"

"ನಂ ಕೇರಿಯವು ಅಲ್ಲ ಕನಿ ಬುದ್ದಿ. ಮ್ಯಾಗಲಕೇರಿಯವೆ. ಅವಕ್ಕ ನಾಟ್ಗ ನಾ ಕಲ್ಸಿವ್ನಿ. ಕಾಲ್ಗಂಟ ಅವಕಾಶ ಕೊಡಿ ಬುದ್ದಿ." ಈ ಮಾತಿಗ ಸಮಾಧಾನಗೊಂಡ ಬುದ್ಯೋರು, "ಹಾಗಾದ್ರೆ ನಾನೊಮ್ಮೆ ನೋಡ್ಬೇಕು. ಆಮ್ಯಾಲೆ ಹೇಳ್ತಿನಿ ಕೆಂಚ" ಅಂಬೋ ವಾಕ್ಷಕ್ಕ, "ಆಯ್ತು ಬುದ್ಯೋರೆ" ಅಂದವನೆ ಹೈಕಳನ್ನ ಹುಡೀಕಂಡು ಊರೊಳಗ ಒದಗಿ ಮಠದ ದಿಕ್ಕ ಕರ್ಕಂಡು ಬರ್ತಿರಬೇಕಾದ್ರ ಸುದ್ದಿಮಾದಯ್ಯ ನಡುವ ಸಿಕ್ಬುಟ್ಟು ಇಚಾರ್ವ ತಿಳಿದು ಗಾಬರಿಯಾದನು. ಹೈಕಳ ಕಿವೀನಲ್ಲಿ ಗುಸುಗುಟ್ಟಿ ಅವ್ನು ತಲೆಯಾಡಿಸಿದ್ರ ಕೆಂಚ ಅವನದೇ ಸಂಭ್ರಮದೊಳಗ ಮುಳುಗಿ ಹೋಗಿದ್ದ.

ಹೈಕಳೆಲ್ಲವಿ ಪಡಸಾಲದ ಮ್ಯಾಕತ್ತಿ ತಯಾರಾದ್ರ ಕೆಂಚ ಅದೇ ನೀರು ಬಾರದ ಬೋರಿನತ್ರಕ್ಕೆ ನಿಂತ್ಗಂಡಿದ್ದನು. ಬುದ್ಯೋರು ಬಂದು ಕೂತ್ಗತ್ಲೇ ಕೆಂಚ ಸನ್ನೆ

ಮಾಡಿದ್ರ ಆ ಹೈಕಳು ಹಾಡ್ಕಂಡು ನಲಿದಾಡಿ ಬಡಿದಾಡಿ ನಾಟ್ಗ ಮುಗ್ಸಿದ್ರು. ಬುದ್ಯೋರು ಎದ್ದು ಕೆಂಚನ ದಿಕ್ಕ ತಿರಿಕಂಡು, "ಕೆಂಚ, ಮಕ್ಕಳು ಮೊದ್ಲು ಆಡ್ತಾರ. ಆಮ್ಯಾಕ ದೊಡ್ಡೋರು" ಅಂತಂತ ಹೊಂಟೋದ್ರು. ಅಂವ ಹಟ್ಟಿದಿಕ್ಕ ಓಡಿ, "ಅವ್ವ ಅವ್ವ, ನಾ ಹೈಕಳಿಗ ನಾಟ್ಗ ಕಲಿಸಿವ್ನಿ ಸಂಜೇಕ ಅದ್ನೂವಿ ಆಡ್ತಾರ ಬೇಗ್ನ ಬವ್ವೋ..." ಎಂದು ಕುಣಿದಾಡಿದ.

ಅಚಿದು ಕೇರಿಯೊಳಗ ನುಗ್ಗಿ ಎಲ್ಲಾರ್ನೂ ಕರ್ದು ಇಸ್ಕೂಲ್ಮನಿ ದಿಕ್ಕ ಓಡಿದನು.

✶ ✶ ✶

ಇಸ್ಕೂಲ್ಮನಿ ಪೀಲ್ಡಿನಾಗೆ ಸಂಭ್ರಮ ಅಂಬೋದು ಕವುಚ್ಕಂಡು ಬಿದ್ದಿತ್ತು. ಹೆಮ್ಮರಗಾಲದಿಂದ ಬಂದ ಬಾಡ್ಗ ಸ್ಟೇಜ್ನೋರು ಬಣ್ಣ ಬಣ್ಣದ ಪರದೆಗಳ ಹಾಕ್ಬುಟ್ಟು ಹೊಸ ಅರ್ಮನೆ ಕಟ್ಟಿ ಅದ್ಕ ಲೈಟ್ನ ಮಡ್ಗಿ ರಂಗು ಮಾಡಿದ್ರ ಆ ಮೈಕಂಬೋದು ತಾನಿರೋದ ಚೀರ್ಲಿಕ್ಕಂಬಂಗ ಹೊಸ ಕನ್ನಡ ಪಿಚ್ಚರಿನ ಹಾಡಾಕಾಂಡು ಕಿರುಚುತ್ತಿತ್ತು. ಆ ಕಿರುಚಾಟಕ್ಕ ಹೈಕಳೋ ಒಂದು ಗಳುಗ ಅಂಡು ತಿರುಗಿಸ್ಬುಟ್ಟು ಓಡ್ತಿದ್ದವು. ಅಷ್ಟೊತ್ಗ ಸ್ವಾಮಿಯು ಸೀಮೆಎಣ್ಣೆ ಕ್ಯಾನ ಎತ್ಗಂಡ್ರ "ಅದ್ಯಾಕ ?" ಅಂತ ಅವ್ವವ್ವ ಅಂದುದ್ಕ "ಜನ್ರೇಟರಿಗ" ಅಂದ್ಕಂಡು ಹಟ್ಟಿ ಬಿಟ್ಟನು. ಕೆಂಚ ಹೈಕಳಿಗೆ ಬೇಕಾದ ಬಟ್ಟಬರನೆಲ್ಲವಿ ತಂದು ಇಸ್ಕೂಲ್ಮನಾಲಿ ಮಡ್ಗಿದ್ರ ಸುದ್ದಿಮಾದಯ್ಯ ಹೊಸ ಹಿಡುಗ್ಲನ್ನ ಪ್ಯಾಕ ಅಲ್ಲೇ ತಂದು ಅವುಸಿಟ್ಟನು.

ಲಂಕೆ ಅಂಬೋ ಈ ಊರ್ನಲ್ಲಿ ಎಲ್ಲವೂ ಈಗ ಸನಿ ಮಾತ್ಮೆ ನಾಟ್ಗಕ್ಕ ತಯಾರಾಗಿತ್ತು. ನಾಟ್ಗದೊಳಗ ಹಸಿವನ್ನೂ ಮರತ್ಗಂಡಿದ್ದ ಕೆಂಚ್ಗ ಅಂತ ಅವ್ವವ್ವ ಬೆಲ್ಲದನ್ನ ಮಾಡ್ಕಂಡು ಕಾಯ್ಕಂಡಿದ್ದಳು. ಅವ್ನೂಗ ಉಣ್ಣಕ್ಕಿಕ್ಕಿ ತಾನೂವಿ ಮಗನ ನಾಟ್ಗ ನೋಡ್ಬೇಕು ಅಂದ್ಕಂಡು ಕೆಂಚ್ಗ ಕಾದಳು.

ಅಲ್ಲಿ ನಾಟ್ಗ ನೋಡೋರಿಗಂತ್ಲೀಯಾ ಹಗ್ಗ ಕಟ್ಬುಟ್ಟು ಜಾಗ ಮಾಡಿದ್ರು. ಒಳಕ್ಕ ಮ್ಯಾಗಲಕೇರಿಯವ್ರಿಗಾದರ ಅದರಾಚ್ಗ ಬ್ಯಾರೆಯವ್ರಿಗಂತೇಳಿ ಮಾಡ್ದಂತ ಜಾಗದಾಗೆ ಅವ್ರವರು ಕೂತ್ಗಂಡು ಜನ ತುಂಬ್ಕಂಡಿತ್ತು. ಸ್ಟೇಜಿನ ಮ್ಯಾಕ್ಕ ಬುದ್ಯೋರು ಮತ್ತ್ಯಾರ್ಯಾರೋ ದೊಡ್ಡವರು ಕೂಡ್ಕಂಡು ಸಭೆ ನಡೀತಿರಬೇಕಾದರ ನಂಜ್ನಗೂಡಿಂದ ನಾಟ್ಗಕ್ಕಂತ ಬೆಳ್ಳನೆ ಕುದುರೆ ಕರ್ಕಂಡು ಸವಾರ ಬಂದ್ರ ಜನ್ಗಳೋ ಅತ್ತಗ ಹರಿದಾಡಿ ಕುದುರೆಗೂ ಗಾಬರಿಯಾಗಿ ಸ್ಟೇಜಿನ ಮ್ಯಾಗಿದ್ದೋರಿಗೂ ಬ್ಯಾಜಾರು ತುಂಬ್ಕಂಡು ಉದ್ದುದ್ದ ಭಾಷಣಗಳು ಗಿಡ್ಡವಾಗಿ ಕಡೇಗ ಬುದ್ಯೋರು ಮಾತಾಡಿ ಸಭೆ ಮುಗ್ಸಿದರು.

ಮುಂದ್ಕ ಮಕ್ಕಳಿಂದ ನಾಟಕ "ಕಾಗೆ ಕೊಂದವರು" ಎಂದು ಮೈಕಿನೊಳಗೆ ಕೂಗಿದ್ರ ಕೆಂಚನ ಹುಡುಗರು ಸ್ಟೇಜಿನ ಮ್ಯಾಕ್ಕ ಬಂದರು. ನಾಟ್ಗ ಕಲಿಸಿದ ಗುರು ಕೆಂಚ್ನ ಹೆಸರ ಎಲ್ಡೆಲ್ಡು ಸಲ ಕೂಗಿದ್ರ ಜನಕ್ಕ ನಂಬ್ಲಿಕಾಗ್ನಿಲ್ಲ. ಅವ ಮುಂದ್ಕ ಬಂದು ಹುಡುಗರಿಗೆ ಕಾಣೋ ಹಾಗೆ ನಿಂತ್ಗಂಡರ ಸುದ್ದಿಮಾದಯ್ಯ ಪತ್ರಕರ್ತರು ಬಂದಿರೋದ್ನ ಖಚಿತಪಡಿಸ್ಗಂಡು ಹಿಡುಗ್ಲ ಪ್ಯಾಕ್ನ ಹಿಡ್ಕಂಡು ಸ್ಟೇಜ್ನ ಹಿಂದ್ಕ ಬಂದನು.

ಅಷ್ಟೊತ್ಗ ಯಾರೋ ಓಡ್ಕಂಬಂದು ಮಂಡ್ಯದಿಂದ ನಟಿಯರು ಬಂದಿಲ್ಲವೆಂದು ಗಾಬರಿ ಹುಟ್ಟಿಸಿದರು. ನಾಟ್ಗವಾಡೋ ಎಲ್ಲರಿಗೂ ಇದು ತಲುಪಿ ಬುದ್ಯೋರ್ಗೂ ಮುಟ್ಟಿತು. ಅವರು ಆ ಮೂರ್ಜನವ ಕರೆಸಲು ಕಳಿಸಿದ್ರ ಆ ಮೂರ್ಜನವಿ ಮದ್ಯಾನಕ್ಕ ನಂಜ್ನಗೂಡ್ಗ ಹೋಗಿದ್ದರೆಂದು ಅವರವರ ಹಟ್ಟಿದಿಕ್ಕಿಂದ ಸುದ್ದಿ ಬಂದ್ರ ಎಲ್ಲರ ಮಾತುಗಳು ಇಂಗಿಹೋಗಿದ್ದವು. ನಟಿಯರು ಬಾರದೇ ಇದ್ದಲ್ಲಿ ನಾಟಗವಾಡೋದು ಕಷ್ಟವಾಗಿ ಊರ್ನ ಮಾನ ಹೋಗುವುದೆಂದು ಎಲ್ಲರಿಗೂ ಭಯಂಕರ ಚಿಂತೆಯಾಗಿ ಸಂಭ್ರಮವು ಭಯಕ್ಕ ಜಾರಿ ಮಕ್ಕಳ ನಾಟ್ಗ ಸುರುವಾಗಿತ್ತು.

ಕೆಂಚನ ಸನ್ನೆಗ ಮಕ್ಕಳು ನಾಟ್ಗ ಸುರು ಮಾಡ್ದಾಗ ಗುಸುಗುಸು ಮಾಡ್ತಿದ್ದ ಜನ್ಗಳು ಸ್ಟೇಜಿಗ ತಿರಿಕಂಡ್ರು. ನಾಕ್ಜನ ಮಕ್ಕಳು ಮಯ್ತುಂಬ ಹಸೂರ್ನ ಕಟ್ಕಂಡು ಮರಗಳ ತರವಾಗಿ ಹಾಡಾಡ್ಕಂಡು ಕುಣೀತಿರಬೇಕಾದ್ರ ಕಾಗ ಮರಿಯೊಂದು ಬೇಜಾರಿಂದ ಬರ್ತದ. ಅದ್ನ ಕಂಡ್ಬುಟ್ಟು ಮರಗಳು ಮರಿಗ ಸಮಾದಾನವ ತುಂಬಿ ಕೇಳಿದ್ರ ಅವ್ರವ್ವ ಮೂರ್ದಿನದಿಂದ ಕಾಣ್ತಿಲ್ಲವೆಂದಿತು. ಅದ್ಕ ಮರಗಳು ಲೊಚಗುಟ್ಟಿ ಮರದಾಗಿಂದ ಗೂಡ್ನ ತಗ್ದು ಮರೀನ ಮಲ್ಗಿಸಿ ಹಣ್ಣುಕೊಟ್ಟವು. ಮರಿಗಾಗಿ ಅವ್ವು ಕಾಗವ್ವನ ಹುಡುಕಾಕೋಯ್ತುವ. ಅದಕ್ಕೊಂದು ಹಾಡ್ನ ಹಿಂದಿದ್ದ ಹೈಕಳು ಮೈಕ್ನಾಗೆ ಬೇಜಾರಿಂದ ಹಾಡುತ್ತಿದ್ದವು. ಸುತ್ತೊಂದ್ನ ತಿರುಗಿ ಬರ್ಬೇಕಾದ್ರ ಹಾಡು ಮುಗೀತು. ಹುಡುಗನೊಬ್ಬ ಪೇಪರ್ನ ಹಿಡ್ಕಂಡು ಓಯ್ತಿದ್ದ ಮರನ ಹಿಡ್ದು ನಿಲ್ಸಿ ನೆರುಳಿಗ ಕೂತ್ಗಂಡು ಓದತಾನ. ಉಳಿದ ಮರಗಳು ನಿಂತ್ಗಂಡು ಕಾಗ ಮರಿ ಎದ್ದು ಆ ಇಚಾರ್ವ ಕೇಳಿದವು.

ಹೀಂಗ ಒಂದೂರ್ನಾಗೆ ತಾತಪ್ಪ ಇದ್ನಂತ. ಅಂವ ಜನ್ಗಳ ಕೂಡಿಸ್ಗಂಡು ಇಂಗು ಗುಂಡಿಮಾಡಿ ಊರ್ನಾಗೆ ನೀರ್ತುಂಬ್ಕಳುವಂತೆ ಮಾಡಿದ್ನಂತ. ಮರಗಳನ್ನ ಬೆಳ್ಸಿದ್ನಂತ. ಸಾರಾಯಿನೇ ಇಲ್ದಂಗ ಮಾಡಿ ಕುಡುಕ್ರಿಲ್ದ ಊರ್ನ ಮಾಡಿದ್ನಂತ. ಆ ಊರ್ನಾಗೆ ಜಾತಿ ಬೇದ ಅಂಬೋದೇ ಇಲ್ವಂತ. ಎಲ್ಲರೂವಿ ಅಣ್ಣ ತಮ್ಮಂದಿರ ತರವಾಗಿ ಬಾಳ್ತರಂತ. ಊರ್ಗ ಅಣ್ಣನ ತರವಾಗಿ ಬಾಳ್ತಿದ್ನಂತ. ಆ ಅಜ್ಜ ಇಂದು ದೇಸಕ್ಕಾಗಿ ಉಪಾಸ ಕುಂತವ್ನಂತ. ಅಂಬೋದ್ನ ಕೇಳ್ದಂತ ಕಾಗ ಮರಿ ತಾನು ಆ ಊರ್ಗೋಯ್ತಿನಿ ಅಂದುದ್ಕ ಜನ್ಗಳು ಗೊಳ್ಳಂತ ನಕ್ಕಿತು. ನಿಮ್ಮವ್ವ ನಿಂಗ ಬೇಡ್ವೆ ಅಂದುದ್ಕ "ನಮ್ಮವ್ವ ಬೇಕು" ಅಂತಂದ್ರ ಅದ್ಕೂ ಜನ ನೆಂಗ್ನಾಡಿತು. ಹುಡುಗ ಕಾಗವ್ವನ ಕತ ಕೇಳ್ಬುಟ್ಟು ಎಲ್ಲರೂವಿ ಕಾಗವ್ವನ ಹುಡುಕಾಕೋಯ್ತರ.

ಗಿಡುಗವೊಂದು ಕಾಗವ್ವನ ಜೀತಕ್ಕ ಮಡಿ ಕಂಡಿತ್ತು. ಅಲ್ಲುಗ ಅವ್ರೆಲ್ಲವಿ ಬಂದು ಕಾಗವ್ವನ ಬುಡು ಅಂತರ. ಗಿಡುಗ ಜಗಳಾಡಿ ಹುಡುಗ್ನ ಕಣ್ಣ ಕುಕ್ಕಿತು. ಕಾಗ ಮರಿಗ ಕತ್ತ ಕಚ್ಗಂಡಿತು. ಮರ್ಗಳು ಬುಡಿಸಿದ್ರೂ ಮರಿ ಸತ್ತೋಯ್ತು. ಅದಕ್ಕೊಂದು ಹಾಡ್ಬಂದು ಕಾಗವ್ವ ಕೂಸ್ನ ಕಂಡು ಅಳ್ತಾ ಕಾಲ್ನ ಸರಪಳಿ ಬುಡಿಸ್ಗಳಲು ಒದ್ದಾಡಿದಳು. ಮರವೊಂದು ಪೊಲೀಸ್ನ ಕರ್ಕಂಬಂದ್ರ ಗಿಡುಗ ಅವ್ನಿಗ ಚಿನ್ನವ ಕೊಡುತ್ಲೇ ಅಂವ ವೊಂಟೋಯ್ತನ. ಮರ್ಗಳು ಕಾಗವ್ವನ ಬುಡಿಸಿ ಆಮ್ಯಾಕ ಗಿಡುಗನ ಹಿಡಿದ್ಬುಟ್ಟು ಸರಪಳಿ ಹಾಕ್ತರ. ಹೀಂಗೆಲ್ಲ ಮಾಡ್ದೆ ನಾವೆಲ್ಲ ಜೊತ ಜೊತ್ಗ ಬಾಳ್ಬೇಕು ಅಂದ್ಕ ನೀತಿಪಾಠ ಹೇಳ್ಬುಟ್ಟು ಸರಪಳಿ ಬಿಚ್ಚತರ.

ಕೆಂಚ ಸ್ಟೇಜಿನ ಹಿಂದ್ಕ ಓಡ್ಬೇಕು ಅನ್ನೋ ಹೊತ್ಗ ಹುಡುಗನೊಬ್ಬ ಜಾಡಮಾಲಿಯ ವೇಷ ತಾಳ್ಕಂಡು ಹಿಡುಗ್ಲ ಹಿಡ್ಕಂಡು ಕಾಗ ಮರಿ ಎತ್ತಾಕಲು ಬರುತ್ತಿದ್ದಂತೆ ಜನ್ಗಳು "ಹೋ" ಅಂತ ಕಿರುಚಿತು. ಯಾರೋ ಸ್ಟೇಜಿಗ ನುಗ್ಗಿ ಆ ಹುಡುಗ್ನ ತಳ್ಳಿದ್ರ ಕಂಬಕ್ಕ ತಲ ಬಡುದು ಹುಡುಗ ಚೀರಿತು. ಕೆಲವರು ಕೆಂಚನ ಹಿಡ್ಕಂಡು ಚಚ್ಚಿದ್ರು. ಸುದ್ದಿಮಾದಯ್ಯ ಕತ್ಲಲ್ಲಿ ಕರಗಿದ್ರ ಜನ್ಗಳು ಊರ್ಗ ಕೇಡು ಅಂಬಂಗ ಕೆಂಚ್ಗ ನಾನಾ ತರವಾಗಿ ಬಯ್ಯುತ್ತಿದ್ದರು. ಆವೊಂದು ಕ್ಷಣದಲ್ಲಿ ಅಲ್ಲಿನ ಚಿತ್ರ ಬದಲಾಗಿಬಿಟ್ಟಿತು. ಇಂತಿರುವಾಗ ಕೆಂಚನ ಹಟ್ಟಿದಿಕ್ಕುಗ ಬೆಂಕಿಯೊಂದು ಮೊದ್ಲುಗ ಸಣ್ಣಕುರುದು ಆಮ್ಯಾಕ ದೊಡ್ಡದಾಗಿ ಉರ್ಕಂಡು ಎಲ್ಲರನ್ನ ಸೆಳ್ಕಂಡಿತು.

ಬೆಲ್ಲದನ್ನ ಮಾಡ್ಕಂಡು ಮಗಗ ಕಾಯ್ಕಂಡಿದ್ದ ಅವ್ವಗ ಮಾಯದ ನಿದ್ದೆ ಆವರಿಸ್ಕಂಡು ನೋಡುತ್ತಿದ್ದ ಟೀವಿ ನಿದ್ದೆ ಬಂದ ಮುದುಕಿಗ "ಅಣ್ಣಾ ತಂಡದಲ್ಲಿ ಬಿರುಕು" ಅಂಬುದ್ನ ತೋರಿಸ್ತಾನೇ ಬೆಂಕಿ ದೊಡ್ಡಕಾಗ್ತ ಆಗ್ತ "ಢಂ" ಎಂದು ಒಡ್ಕಂಡು ಸುಟ್ಟೋಯ್ತು. ಇಡೀ ಹಟ್ಟಿ ಮಯ್ಗ ಬೆಂಕಿ ಅಗತ್ಗಂಡು ಕೆಂಚನ ಅವ್ವನ ಮ್ಯಾಕ್ಕ ಬಿದ್ರ ಅವುಳು ಏಳಕಾಗದೆ ಒದ್ದಾಡ್ತ ಆ ಕ್ರೂರ ಬೆಂಕಿಯೊಳಗ ಉರಿದಳು. ಅಕ್ಕಿ ಡಬ್ಬಿಯು ಬಿರಿದು ಅದರೊಳಗಿನ ಅಕ್ಕಿಕಾಳುಗಳು ಸಿಡಿದು ಹಟ್ಟಿಗೆಲ್ಲ ತೂರ್ಕಂಡು ಅಲ್ಲುಗ ಬಂದವರ ಕಣ್ಣುಗ ಹಟ್ಟಿಯೊಳಗಿನ ಎಲ್ಲವು ನಿಗಿ ನಿಗಿಯಾಗಿ ಕೆಂಪಗೆ ಬೇಯುತ್ತಿತ್ತು.

**ಸಂತೋಷ ಗುಡ್ಡಿಯಂಗಡಿ**
ನಾಟಕದ ಮೇಸ್ಟ್ರು, ಸರ್ಕಾರಿ ಪ್ರೌಢಶಾಲೆ, ಹೆಗ್ಗಡಹಳ್ಳಿ
ನಂಜನಗೂಡು ತಾಲೂಕು, ಮೈಸೂರು ಜಿಲ್ಲೆ



# ತೆಲುಗು ಸಾಹಿತ್ಯದ ಇತ್ತೀಚಿನ ಒಲವುಗಳು

ತೆಲುಗಿನಲ್ಲಿ ‘ಪ್ರಪಂಚೀಕರಣಂ’ ಎನ್ನುವ ಜಾಗತೀಕರಣ, ಖಾಸಗೀಕರಣ, ಜಾಗತಿಕ ಮಾರುಕಟ್ಟೆಯಂಥ ವಿಚಾರಗಳಲ್ಲಿಯೂ ಸಾಹಿತ್ಯದ ಧ್ವನಿ ದೊಡ್ಡದು. ಕನ್ನಡಕ್ಕೆ ಹೋಲಿಸಿದರೆ ಪರಿಸರವಾದ ಕಾವ್ಯದಲ್ಲಿ ಕಾಣಿಸಿಕೊಂಡಿದ್ದು ಕೊಂಚ ತಡವಾಗಿಯೆ. ಇಲ್ಲಿಯೂ ಸಹ ಜನಮುಖೀ ಚಳವಳಿಗಳು ಪರಿಸರವಾದವನ್ನು ಒಂದು ಭಾಗವಾಗಿ ಕೈಗೆತ್ತಿಕೊಂಡ ಮೇಲೆಯೇ ಪರಿಸರವಾದಿ ಸಾಹಿತ್ಯ ರಚನೆಯಾದುದು ಎಂಬುದು ಗಮನಾರ್ಹವಾದ ಸಂಗತಿ.

**ಸ. ರಘುನಾಥ**

ತೆಲುಗು ಸಾಹಿತ್ಯ, ಸಾಂಸ್ಕೃತಿಕ ಕ್ಷೇತ್ರ ಸಂಭ್ರಮಾಚರಣೆಯಲ್ಲಿದೆ. ತೆಲುಗುನಾಡು ಅಭಿಮಾನದಿಂದ ಬೀಗುತ್ತಿದೆ. ಕಾರಣ ಆ ಭಾಷೆಯ ಖ್ಯಾತ ಲೇಖಕ ಡಾ॥ ರಾವೂರಿ ಭರದ್ವಾಜರಿಗೆ ಜ್ಞಾನಪೀಠ ಪ್ರಶಸ್ತಿ ದೊರೆತಿದೆ. ಇದು ತೆಲುಗಿಗೆ ಸಂದ ಮೂರನೇ ಜ್ಞಾನಪೀಠ ಪ್ರಶಸ್ತಿ. ಇದು ಕನ್ನಡದ ಸೋದರ ಭಾಷೆಯಷ್ಟೆ ಅಲ್ಲ, ಭೌಗೋಳಿಕ – ಸಾಮಾಜಿಕ – ರಾಜಕೀಯ – ಸಾಂಸ್ಕೃತಿಕವಾಗಿಯೂ ಪರಸ್ಪರ ಹತ್ತಿರ ಸಂಬಂಧ ಹೊಂದಿರುವುದರಿಂದ ಕನ್ನಡಕ್ಕೂ ಹೆಮ್ಮೆಯೇ.

ಭಾರತೀಯ ಸಮುದಾಯದಲ್ಲಿ ತೆಲುಗು ಒಂದು ಭಾಷೆಯಾಗಿ ಜೀವಂತಿಕೆಯಿಂದಿದೆ. ಅದರ ಮೈಯಲ್ಲಿ ಮೂಡಿಬರುವ ಚಿಂತನೆ, ಆಲೋಚನೆಗಳು ಭಾರತೀಯ ಬದುಕಿನಿಂದಲೇ ಕಟ್ಟಿಕೊಂಡು ಬೆಳೆಯುತ್ತಿವೆ. ತನ್ನ ಸ್ವಂತಿಕೆಯೊಂದಿಗೆ ಪ್ರಭಾವ, ಸ್ವೀಕರಣೆಗಳೂ ಹೀಗೆಯೇ.

ದ್ರಾವಿಡ ಭಾಷೆಗಳ ಸಾಹಿತ್ಯವನ್ನು ಸಮಗ್ರ ನೋಟದಿಂದ ಗ್ರಹಿಸಬಲ್ಲೆವಾದರೆ ತೆಲುಗಿನಲ್ಲಿಯೂ ಸಮನ್ವಯತೆಯೊಂದಿಗೆ ವೈವಿಧ್ಯತೆಯೂ ಗೋಚರಿಸುತ್ತದೆ. ಇಲ್ಲಿ ಮುಖ್ಯವಾಗಿ ಎದ್ದುಕಾಣುವಂತೆ ತೋರುವುದೆಂದರೆ ಹೋರಾಟ ಮತ್ತು ಬಂಡಾಯದ ನಿರಂತರತೆ. ದಟ್ಟವಾದ ಎಡಪಂಥೀಯ ವೈಚಾರಿಕತೆ. ವಿಶೇಷವಾಗಿ ಭಾರತ ಸ್ವತಂತ್ರವಾದ ನಂತರ ಕಮ್ಯುನಿಸ್ಟ್ ತತ್ತ್ವ–ಸಿದ್ಧಾಂತಗಳು ಪ್ರಬಲಗೊಂಡು ಇಲ್ಲಿನ ಹೋರಾಟಗಳನ್ನು ರೂಪಿಸಿದವು. ಇದಕ್ಕೆ ಸಾಹಿತ್ಯ ಕ್ಷೇತ್ರ ತೆರೆದ ಬಾಗಿಲಾಯಿತು. ಇಂದಿಗೂ ಈ ಬಾಗಿಲು ಮುಚ್ಚಿದ್ದಲ್ಲ.

ಸ್ವಾತಂತ್ರ್ಯದ ಬೆನ್ನಿನಲ್ಲೆ ತೆಲಂಗಾಣ ರೈತಾಂಗ ಹೋರಾಟ ನಡೆಯಿತು. ಇದು ಸಶಸ್ತ್ರ ಹೋರಾಟ. ಸಾಹಿತ್ಯದ ಒಂದು ಪ್ರಕಾರವಾದ ಕಾವ್ಯ ಪ್ರಧಾನ ಪಾತ್ರವಹಿಸಿದ್ದು ಚರಿತ್ರೆ ಮಾತ್ರವಲ್ಲ, ವರ್ತಮಾನವೂ ಹೌದು. ಗದ್ಯ ಪ್ರಕಾರದಲ್ಲಿ ಸಣ್ಣಕಥೆಗೆ ಆ ಸ್ಥಾನವಿದೆ. ಎಡಪಂಥೀಯ ವಿಚಾರಗಳನ್ನು, ಆದರ್ಶಗಳನ್ನು ಲಿಖಿತವಾಗಿ ಅಕ್ಷರಸ್ಥರಿಗೆ ತಲುಪಿಸಿದರೆ, ಹಾಡುಗಳ ಮೂಲಕ ಶ್ರಾವಣಿಕವಾಗಿ ಅನಕ್ಷರಸ್ಥರ ಬಳಿಗೆ ಕರೆದೊಯ್ಯಲಾಯಿತು. ತೆಲಂಗಾಣ ಸಾಯುಧ ರೈತ ಹೋರಾಟ ಆಂಧ್ರವನ್ನು ಸಾಮಾಜಿಕ ವರ್ಗ ಹೋರಾಟದ ನಾಡಾಗಿ ರೂಪಿಸಿತು.

ಮುಖ್ಯವಾಗಿ, ಜನಸಮುದಾಯದ ಪಾಡುಗಳೇ ಚಳವಳಿಗಳ ಒಲವುಗಳಾಗುವುದರಿಂದ ಸಾಹಿತ್ಯದ ಒಲವುಗಳೂ ಅದೇ ಆಗಿರುತ್ತವೆ. ಇದನ್ನು ತೆಲುಗು ಸಾಹಿತ್ಯ ಕ್ಷೇತ್ರ ಚೆನ್ನಾಗಿ ಅರ್ಥ ಮಾಡಿಕೊಂಡಿದೆ. ಹಾಗಾಗಿಯೇ ಅಲ್ಲಿ ಮೊದಲು ಚಳವಳಿ ಪ್ರಾರಂಭವಾಗಿ ನಂತರ ಸಾಹಿತ್ಯ ರಚನೆಗೊಳ್ಳುತ್ತಿದೆ. ಇದರಿಂದಾಗಿ ಅಲ್ಲಿ ಈ ಎರಡರ ನಡುವೆ ಸಾಮ್ಯ ಹಾಗೂ ನಿರಂತರತೆ ಇರುತ್ತದೆ. ಕನ್ನಡದಲ್ಲಿ ಹೀಗಾದುದಿಲ್ಲ. ಬಂಡಾಯ – ದಲಿತ ಚಳವಳಿಗಳು ಮೊಳಕೆಯೊಡೆವ ಮೊದಲೇ ಸಾಹಿತ್ಯ ನಿರ್ಮಾಣಗೊಂಡಿತು. ಚಳವಳಿಗಾರರಿಗಿಂತ ಅನುಕೂಲಕರವಾದ ಜಾಗಗಳಲ್ಲಿ ಕುಳಿತು ಬರೆದವರೆ ಮುಖ್ಯರಾಗುತ್ತ ಹೋದರು. ಹಾಗಾಗಿ ಆಂಧ್ರದಲ್ಲಾದಂತೆ ಇಲ್ಲಿ ಚಳವಳಿ – ಸಾಹಿತ್ಯಕ್ಕೆ ನಿರಂತರತೆ ಪ್ರಾಪ್ತವಾಗದೆ ಮಳೆಗಾಲದಲ್ಲಿ ಒಂದಿಷ್ಟು ಕಾಲ ಹರಿವ ನಂದಿಬೆಟ್ಟದ ನದಿಗಳಂತಾಯಿತು.

ಕನ್ನಡದಲ್ಲಿ ಬಂಡಾಯ ಸಾಹಿತ್ಯ ಚಳವಳಿ ಹುಟ್ಟುವುದಕ್ಕೆ ಕೆಲವು ದಶಕಗಳ ಮೊದಲೇ ಆಂಧ್ರದಲ್ಲಿ ಅಭ್ಯುದಯ ರಚಯಿತುಲ ಸಂಘಂ, ವಿಪ್ಲವ ರಚಯಿತುಲ ಸಂಘಂ, ಜನನಾಟ್ಯ ಮಂಡಲಿ, ಪ್ರಜಾನಾಟ್ಯ ಮಂಡಳಿಗಳಂಥವು ಬಹುದೊಡ್ಡದಾಗಿ ಬೆಳೆದುನಿಂತವು. ಇವು ಬೆಳೆದದ್ದೂ ಚಳವಳಿಗಳ ನಂತರ. ಬಲಗೊಂಡಿದ್ದು ಚಳವಳಿಗಳಂತೆ, ಚಳವಳಿಗಳೊಂದಿಗೆ ಎಂಬುದು ಗಮನಾರ್ಹ. ನಮ್ಮಲ್ಲಿನ ದಲಿತ – ಬಂಡಾಯ ಸಂಘಟನೆಗಳ, ಸಾಹಿತ್ಯದ ಮೇಲೆ ಇವುಗಳ ಪ್ರಭಾವವಾದುದೂ ಇದೆ. ಆದರೆ ಬೆಳವಣಿಗೆಯಲ್ಲಿ ಅದರ ಗುಣಪಾಠವಿಲ್ಲ ಎಂಬುದನ್ನು ಯಾರೂ ಗುರುತಿಸಬಹುದು.

ಕಾಲಗತಿಯಲ್ಲಿ ಆಂಧ್ರದಲ್ಲಿ ಚಳವಳಿಗಳು ಹುಟ್ಟಿಕೊಳ್ಳುತ್ತಿರುವುವಾದರೂ ಅವು ತಮ್ಮ ಪ್ರಭಾವವನ್ನು ಕಳೆದುಕೊಳ್ಳದೆ ಉಳಿದು ಮುಂದುವರಿಯುತ್ತಿರುವುದರಿಂದ ಅದರಂತೆ ಸಾಹಿತ್ಯವೂ ರಚನೆಗೊಳ್ಳುತ್ತಿದೆ. ಚಳವಳಿಗಳ ಆಶಯಗಳಿಗೆ ಬದ್ಧವಾಗಿಯೆ ಇಂದಿಗೂ ಬಹಳ ಲೇಖಕರು ಬರೆಯುತ್ತಿದ್ದಾರೆ. ಇಂಥವಕ್ಕೆ ಬದ್ಧತೆ ತೋರದ ಲೇಖಕನಿಗೆ ಅಲ್ಲಿ ಮನ್ನಣೆ

ಸಿಗುವುದು ಕಷ್ಟ. ಸ್ತ್ರೀವಾದಿ ಸಾಹಿತ್ಯದಲ್ಲಿಯೂ ಎಡಪಂಥೀಯತೆಯ ಛಾಯೆ ಇದ್ದೇ ಇದೆ.

ಪ್ರತ್ಯೇಕ ತೆಲಂಗಾಣಕ್ಕಾಗಿ ನಡೆದಿರುವ ಹೋರಾಟ ಸಾಹಿತ್ಯದ ಮೇಲೆ ಪ್ರಭಾವ ಬೀರಿದೆ. ಹಾಗೆಯೆ ಅದಕ್ಕೆ ಪ್ರತಿಯಾಗಿ ರೂಪಿತವಾದ 'ಸಮೈಖ್ಯಾಂಧ್ರ' ಹೋರಾಟ ತೆಲಂಗಾಣೇತರ ಪ್ರಾಂತ್ಯಗಳಲ್ಲಿ ಕಂಡುಬರುತ್ತಿದ್ದು ಅದಕ್ಕೆ ಪೂರಕವಾಗಿ ಲೇಖಕರು ಸ್ಪಂದಿಸಿ ಬರೆಯುತ್ತಿದ್ದಾರೆ. ಈ ಎರಡು ಹೋರಾಟಗಳೂ ಸಾಹಿತ್ಯಕ ಹಾಗೂ ರಾಜಕೀಯ, ಭೌಗೋಳಿಕ ವಾದವಿವಾದಗಳನ್ನು ಹುಟ್ಟು ಹಾಕಿದ್ದು, ಇವುಗಳಲ್ಲಿ ಸಾಹಿತಿಗಳು ಹಲವು ಮುಖಗಳಿಂದ ನೇರವಾಗಿ ಭಾಗವಹಿಸುತ್ತಿರುವುದಲ್ಲದೆ ಅವುಗಳ ಆಶಯಗಳಿಗೆ ತಕ್ಕಂತೆ ಬರೆಯುತ್ತಿದ್ದಾರೆ.




ಇಪ್ಪತ್ತನೆಯ ಶತಮಾನದ ಅಂತಿಮ ದಶಕ ಮತ್ತು ಇಪ್ಪತ್ತೊಂದನೆಯ ಶತಮಾನದಲ್ಲಿನ ಪ್ರಮುಖ ಬೆಳವಣಿಗೆಯೆಂದರೆ ಮುಸ್ಲಿಂವಾದ, ಮೈನಾರಿಟಿವಾದ, ಬಿ. ಸಿ. ವಾದ ಎಂಬಂಥವು. ಇವುಗಳಿಗೆ ಸೈದ್ಧಾಂತಿಕ ರೂಪವನ್ನೂ ಕೊಡಲಾಗುತ್ತಿದೆ. ಅಂಬೇಡ್ಕರ್‌ವಾದದ ದಟ್ಟ ಪ್ರಭಾವ ದಲಿತ ಕವಿತ್ವದಲ್ಲಿ ಕಾಣುತ್ತದೆ. ಮುಸ್ಲಿಂ ಕವಿಗಳು ದೊಡ್ಡದಾಗಿಯೇ ತಮ್ಮ ಧ್ವನಿಯನ್ನು ಕವಿತೆಯ ಮೂಲಕವೂ ಕೇಳಿಸಹೊರಟಿದ್ದಾರೆ. ದಲಿತವಾದದಂತೆಯೇ ಮುಸ್ಲಿಂವಾದವೂ ಪ್ರಬಲಗೊಳ್ಳುತ್ತಿದೆ. ಇವರಲ್ಲಿಯೂ ಪ್ರಗತಿಶೀಲವಾದ, ಸಮಾಜವಾದದಂತಹ ಜನಮುಖೀ ಚಿಂತನೆ ಕಂಡುಬರುತ್ತದೆ.

ಇವುಗಳ ನಡುವೆ ಕಂಡುಬರುವ ಇನ್ನೊಂದು ಅಂಶವೆಂದರೆ, ಛಂದೋಬದ್ಧವಾದ 'ಪದ್ಯಕವಿತ' ತನ್ನ ಅಸ್ತಿತ್ವವನ್ನು ಉಳಿಸಿಕೊಂಡಿರುವುದು. ಕವಿಗಳ ಒಂದು ಗುಂಪೇ ಇದರ ಪ್ರಚಾರಕ್ಕೆ ಟೊಂಕಕಟ್ಟಿರುವುದು. ದಲಿತ, ಮುಸ್ಲಿಂ, ಸ್ತ್ರೀವಾದ, ಹಿಂದುಳಿದ ವರ್ಗಗಳ ವಿಚಾರಧಾರೆಯಲ್ಲಿ ಹುಟ್ಟುವ ಕಾವ್ಯದ ನಡುವೆ ಪದ್ಯಕವಿತ್ವ ಉಸಿರಾಡುತ್ತಿರುವುದು ವಿಶೇಷ. ಸಾಹಿತ್ಯದಲ್ಲಿ ವ್ಯಾವಹಾರಿಕ ಭಾಷೆಯನ್ನು ತರಬೇಕೆಂದು ನಡೆಸಿದ ಚಳವಳಿಯ ಪ್ರಭಾವ ಪದ್ಯಕವಿತೆಯನ್ನು ಬಿಟ್ಟು ಉಳಿದೆಲ್ಲ ಸ್ವಭಾವದ ಕವಿತೆಗಳಲ್ಲಿ ಕಂಡುಬರುತ್ತದೆ.

ಇಂದು ಬದಲಾಗುತ್ತಿರುವ ಸಾಮಾಜಿಕ ದೃಷ್ಟಿ ತೆಲುಗು ಸಾಹಿತ್ಯದಲ್ಲಿ ಪ್ರತಿಬಿಂಬಿತವಾಗುತ್ತಿದೆ. ಸ್ತ್ರೀವಾದ, ದಲಿತವಾದ, ಮೈನಾರಿಟಿವಾದ, ಪ್ರಾಂತೀಯವಾದ ಮುಂತಾದ ಅಸ್ತಿತ್ವವಾದಗಳೆಲ್ಲವೂ ಸಾಹಿತ್ಯದಲ್ಲಿ ವಿಶ್ವರೂಪ ಪಡೆಯುತ್ತಿವೆ. ಅಷ್ಟು ಮಾತ್ರವಲ್ಲದೆ, ತೆಲಂಗಾಣ, ರಾಯಲಸೀಮ, ಉತ್ತರಾಂಧ್ರ, ಕೋಸ್ತಾ (ಕರಾವಳಿ) ಮುಂತಾದ ಪ್ರಾಂತ್ಯಗಳ ಆಡುಭಾಷೆ (ಇದನ್ನು ಮಾಂಡಲಿಕಂ, ಯಾಸ ಅನ್ನುವರು)ಗಳು ಗದ್ಯ ಪದ್ಯಗಳೆರಡರಲ್ಲಿಯೂ ಪ್ರಯೋಗಗೊಳ್ಳುತ್ತಿವೆ. ಕೃಷಿ ಕ್ಷೇತ್ರದಲ್ಲಿ ನಡೆಯುತ್ತಿರುವ ವಲಸೆ, ವಿಧ್ವಂಸ, ಮೌಲ್ಯಗಳ ಪತನ, ಸಾಮ್ರಾಜ್ಯವಾದಿ ಹಿನ್ನೆಲೆಯ ಮಾರುಕಟ್ಟೆ ಸಂಸ್ಕೃತಿ, ಶಿಥಿಲಗೊಳ್ಳುತ್ತಿರುವ ಕೌಟುಂಬಿಕ ಸಂಬಂಧಗಳು, ಕಾಣೆಯಾಗುತ್ತಿರುವ ಮಾನವೀಯತೆ ಮುಂತಾದುವು ಇಂದಿನ ತೆಲುಗು ಕಥೆಗಳ ವಸ್ತುವಾಗಿದೆ. 'ಕಥೆ ಜನರಿಗಾಗಿ' ಎಂಬ ದೃಷ್ಟಿ ಬಲಗೊಳ್ಳುತ್ತಿದೆ.

'ಬಿ. ಸಿ. ಕಥಲು' ಎಂಬುದೊಂದು ವಿಭಾಗವಾಗಿ ಪ್ರಚಾರಗೊಳ್ಳುತ್ತಿದೆ. ಇದೊಂದು 'ವಾದ'ವಾಗಿ ಕಥಾ –ಮೀಮಾಂಸೆಗೆ ಒಳಪಡುತ್ತಿದೆ. ಈ ಪಟ್ಟಿಗೆ ಬರುವ ಕಥೆಗಳನ್ನು 'ಬಹುಜನ ಕಥೆ' ಎಂದು ಹೆಸರಿಸಲಾಗಿದೆ. ಈ ಬಿ. ಸಿ. ಎಂಬುದರ ಅಡಿಗೆ ಕರಕುಶಲವೃತ್ತಿಗಳವರು, ಕುಲವೃತ್ತಿಗಳವರು, ಸೇವಾವೃತ್ತಿಗಳವರು ಬರುತ್ತಾರೆ. ಬಿ. ಸಿ. ಕಥೆಯೆಂದರೆ ಹಿಂದುಳಿದ ವರ್ಗಗಳ ಇಲ್ಲವೆ ಶೂದ್ರ ಕುಲಗಳ ಜೀವನ–ಸಂಸ್ಕೃತಿ–ಸಾಮಾಜಿಕ ಪರಿಣಾಮಗಳನ್ನು ಅಭಿವ್ಯಕ್ತಿಸುವ ಕಥೆಗಳೆಂದು ವ್ಯಾಖ್ಯಾನಿಸಲಾಗಿದೆ. ದಲಿತ ಬಹುಜನ ಸಿದ್ಧಾಂತದ ಪ್ರಚಾರಕ್ಕಾಗಿ 'ದರಕಮೇ' ಅನ್ನುವ ವೇದಿಕೆಯು ೧೯೯೦ರಲ್ಲಿ ಅಸ್ತಿತ್ವಕ್ಕೆ ಬಂದಿತು. 'ದರಕಮೇ' ಅಂದರೆ 'ದಳಿತ ರಚಯಿತುಲ ಕಳಾಕಾರುಲ ಮೇಧಾವುಲ' (ದಲಿತ ಲೇಖಕರ ಕಲಾವಿದರ ಬುದ್ಧಿಜೀವಿಗಳ) ವೇದಿಕೆ.

ತೆಲುಗಿನಲ್ಲಿ ಸೊರಗುತ್ತಿರುವ ಸಾಹಿತ್ಯವೆಂದರೆ ನಾಟಕ ಸಾಹಿತ್ಯ ಹಾಗೂ ವಿಮರ್ಶನ ಸಾಹಿತ್ಯ. ಆದರೆ ಈಗೀಗ ಪೌರಾಣಿಕ, ಚಾರಿತ್ರ್ಯಕ ನಾಟಕಗಳ ಮೂಲಕ ಸಾಮಾಜಿಕ ಒಳಶೋಧನೆಗಳ, ಮೌಲ್ಯಗಳ ಹುಡುಕಾಟ ನಡೆದಿದೆ.

ತೆಲುಗಿನ ಲೇಖಕರು ಹಿಂದಿನಿಂದಲೂ ಸಿನಿಮಾ ರಂಗದೊಂದಿಗೆ ಬೆಳೆಸಿಕೊಂಡು ಬಂದ ನಂಟನ್ನು ಮುಂದುವರಿಸಿದ್ದು, ತಾವು ನಂಬಿದ ತತ್ತ್ವ ಸಿದ್ಧಾಂತಗಳನ್ನು ಪ್ರತಿಪಾದಿಸುತ್ತ ಬಂದಿದ್ದಾರೆ. ಇದರಿಂದಾಗಿ ಅಲ್ಲಿ ರಾಜಕೀಯ, ಸಮಾಜವಾದಗಳಿಗೆ ಪ್ರಚಾರ ಸಿಗುವಂತಾಗಿದೆ. ಇದನ್ನು ಪ್ರಧಾನವೆಂದು ಪರಿಗಣಿಸಿ ಆ ಕುರಿತು ಕೃತಿಗಳನ್ನೂ ರಚಿಸಲಾಗುತ್ತಿದೆ. ಚಿತ್ರಗೀತೆ, ಸಾಹಿತ್ಯ, ಅವುಗಳ ಲೇಖಕರನ್ನು ಕುರಿತು ಸಂಪ್ರಬಂಧಗಳು ರಚನೆಗೊಳ್ಳುತ್ತಿವೆ. ಹಾಗೆಯೆ ಗೋಷ್ಠಿಗಳಲ್ಲಿ ಪ್ರಬಂಧ ಮಂಡನೆಯೂ ಆಗುತ್ತಿದೆ. ಇಂಥ ಬೆಳವಣಿಗೆಗೆ ಕನ್ನಡವಿನ್ನೂ ಆ ಮಟ್ಟದಲ್ಲಿ ಸಿದ್ಧವಾಗಿಲ್ಲ. ಅಂದರೆ ಅಲ್ಲಿ ಚಿತ್ರಗೀತೆಗಳಿಗೂ ಸಾಹಿತ್ಯಕವಾದ ಸ್ಥಾನವಿದೆ. ಕಾವ್ಯವನ್ನು ನೋಡುವಂತೆ ಚಿತ್ರಗೀತೆಗಳನ್ನೂ ನೋಡುವುದರಿಂದ ಕಳಪೆ, ಕೀಳುಗಳ ಕುರಿತು ಟೀಕೆ, ವಿಮರ್ಶೆಗಳೂ ನಡೆದಿವೆ.

ತೆಲುಗಿನಲ್ಲಿ 'ಪ್ರಪಂಚೀಕರಣಂ' ಎನ್ನುವ ಜಾಗತೀಕರಣ, ಖಾಸಗೀಕರಣ, ಜಾಗತಿಕ ಮಾರುಕಟ್ಟೆಯಂಥ ವಿಚಾರಗಳಲ್ಲಿಯೂ ಸಾಹಿತ್ಯದ ಧ್ವನಿ ದೊಡ್ಡದು. ಕನ್ನಡಕ್ಕೆ ಹೋಲಿಸಿದರೆ ಪರಿಸರವಾದ ಕಾವ್ಯದಲ್ಲಿ ಕಾಣಿಸಿಕೊಂಡಿದ್ದು ಕೊಂಚ ತಡವಾಗಿಯೆ. ಇಲ್ಲಿಯೂ ಸಹ ಜನಮುಖೀ ಚಳವಳಿಗಳು ಪರಿಸರವಾದವನ್ನು ಒಂದು ಭಾಗವಾಗಿ ಕೈಗೆತ್ತಿಕೊಂಡ ಮೇಲೆಯೇ ಪರಿಸರವಾದಿ ಸಾಹಿತ್ಯ ರಚನೆಯಾದುದು ಎಂಬುದು ಗಮನಾರ್ಹವಾದ ಸಂಗತಿ.

ವರ್ತಮಾನದ ತೆಲುಗು ಸಾಹಿತ್ಯ ಪರಿಸರವು ಪ್ರಾಂತೀಯ ಭಾವನೆಗಳಿಗೆ ಒಳಗಾಗಿದೆ. ಆಯಾ ಪ್ರಾಂತ್ಯಕ್ಕೆ ಒಂದೊಂದು ಲೇಖಕರ ಸಂಘ ತಲೆಯೆತ್ತುತ್ತಿದೆ. ಇದಕ್ಕೆ ಸಮರ್ಥನೆಗಳೂ ಹೊರಟಿವೆ. ತೆಲುಗು ಸಾಹಿತ್ಯ ಸಾಮಾಜಿಕವಾಗಿ ತೋರುವಷ್ಟೇ ಒಲವನ್ನು ರಾಜಕೀಯವಾಗಿಯೂ ತೋರುತ್ತಿದೆ.

ಸಾಹಿತ್ಯದಲ್ಲಿಯೂ ಕಾಣಿಸಿಕೊಳ್ಳುತ್ತಿರುವ ಪ್ರಾಂತೀಯ ವಿಭಕ್ತತೆಯ ಒಲವು ಮುಂದೆ ಹೇಗೆ ಪರಿಣಮಿಸುತ್ತದೆ ಎಂಬುದನ್ನು ಕಾದು ನೋಡಬೇಕಿದೆ.

ಹಾಲು ಫಸಲು ಉಕ್ಕಿ ಹರಿವ
ದಾರಿಯಲಿ ನೀ ದುಡಿಮೆ ಸಲಿಸೊ
ಅನ್ನ ದೊರೆತರೆ ದೇಹ ಬಲವೋ
ಬಲವು ಇರುವನೆ ಮನುಷನೋ
ಸ್ವಂತ ಲಾಭವ ಕೊಂಚ ಬಿಟ್ಟು
ನೆರೆಯವಗೆ ನೆರವು ನೀಡೊ
ದೇಶವೆಂದರೆ ಮಣ್ಣು ಅಲ್ಲವೊ
ದೇಶವೆಂದರೆ ಮನುಜರೊ

ಎಲೆಯ ಮರೆಯಲಿ ತಗ್ಗಿಬಗ್ಗಿ
ಕಾವ್ಯ ಕೋಗಿಲೆ ನುಡಿಯಬೇಕೊ
ನುಡಿನಾಲಿಸಿ ದೇಶದಲ್ಲಭಿ
ಮಾನ ಮೊಳಕೆಯೊಡೆಯಬೇಕೊ

– ಎಂದು ಸುಮಾರು ಒಂದು ನೂರು ವರುಷಗಳ ಹಿಂದೆ ಗುರಜಾಡ ಅಪ್ಪಾರಾಯರು ವ್ಯಕ್ತಪಡಿಸಿದ ಆಶಯ ತೆಲುಗು ಸಾಹಿತ್ಯದಲ್ಲಿ ಮುಂದುವರಿದಿದೆ. ಇದು ತೆಲುಗು ಸಾಹಿತ್ಯಕ್ಕೆ ಮಾತ್ರ ಸೀಮಿತವಲ್ಲ. ಇಡೀ ವಿಶ್ವಸಾಹಿತ್ಯದ ಧ್ವನಿಯಾಗಿಯೂ ಸಹ.

**ಸ. ರಘುನಾಥ**
ವೇಣು ವಿದ್ಯಾ ಸಂಸ್ಥೆ ಎದುರು, ಶ್ರೀನಿವಾಸಪುರ – ೫೬೩ ೧೩೫
ಕೋಲಾರ ಜಿಲ್ಲೆ.

ಎಚ್. ಕೆ. ರಾಮಚಂದ್ರಮೂರ್ತಿ

# ಐನ್‌ಸ್ಟೈನ್ ಮತ್ತು ಲೆನಿನ್ 'ಬ್ರಾಡ್‌ಮನ್ ಕ್ಲಾಸಿನವರು' ಎನ್ನುತ್ತಿದ್ದ ಗಣಿತಜ್ಞ ಜಿ. ಎಚ್. ಹಾರ್ಡಿ



**ಜಿ.** ಎಚ್. ಹಾರ್ಡಿ, ೨೦ನೆಯ ಶತಮಾನದ ಉದ್ದಾಮ ಗಣಿತಶಾಸ್ತ್ರಜ್ಞರ ವಿರಳ ಪಂಜ್ತಿಯಲ್ಲಿದ್ದ ಅಪರೂಪದ ವ್ಯಕ್ತಿ. ಅವನ ಸಮಸ್ತ ಸಮಕಾಲೀನರ ದೃಷ್ಟಿಯಲ್ಲಿ ಅವನೊಬ್ಬ ಅಪೂರ್ವ ಗಣಿತಜ್ಞ; "ಒಬ್ಬ ನೈಜ ಗಣಿತಜ್ಞ ಶುದ್ಧರಲ್ಲಿ ಅತಿಶುದ್ಧ" ಎಂದು ಅವನನ್ನು ಗೌರವಿಸುತ್ತಿದ್ದರು.

ಜಗದ್ವಿಖ್ಯಾತ, ಮಹಾಮೇಧಾವಿ, ಗಣಿತಶಾಸ್ತ್ರದಲ್ಲಿ ಅನುಪಮ ಪ್ರತಿಭಾನ್ವಿತನೆನಿಸಿಕೊಂಡ ನಮ್ಮ ಶ್ರೀನಿವಾಸ ರಾಮಾನುಜನ್‌ಅನ್ನು ಗುರುತಿಸಿ ಅವಜ್ಞತೆಯಿಂದ ಹೊರಕ್ಕೆ ತಂದು ಲೋಕಕ್ಕೆ ಪರಿಚಯಿಸಿದ ಕಾರಣದಿಂದ ಹಾರ್ಡಿ ಭಾರತೀಯರ ಅಪಾರ ಪ್ರೀತಿ ಗೌರವಗಳಿಗೆ ಭಾಜನನಾಗಿದ್ದಾನೆ.

ಹಾರ್ಡಿ ಒಬ್ಬ ಉಗ್ರ ನಾಸ್ತಿಕ, ಉದಾರ ಪಕ್ಷದ ತೀವ್ರಗಾಮಿ; ಚಿತ್ರವಿಚಿತ್ರದ 'ಖಯಾಲಿ' ಮನುಷ್ಯ – ಅಸಾಧಾರಣ ಕ್ರಿಕೆಟ್ 'ಹುಚ್ಚು'. ಸ್ವಯಂ ಆಟವಾಡುವುದಕ್ಕಿಂತ ಮಿಗಿಲಾಗಿ ಕ್ರಿಕೆಟ್ ಆಟದ ಹಲವಾರು ನೀತಿನಿಯಮಗಳಲ್ಲಿ, ಪ್ರಸಿದ್ಧ ಆಟಗಾರರ ಬಗ್ಗೆ, ಅವರು ಬಾರಿಸಿದ ರನ್‌ಗಳು, ಪಡೆದ ವಿಕೆಟ್‌ಗಳ ಮಾಹಿತಿ ಕುರಿತು ವಿಶೇಷ ಆಸಕ್ತಿ ಅವನಿಗೆ. ಅವನ ಮಾತು ಮಾತಿನಲ್ಲೂ ಕ್ರಿಕೆಟ್ ಪರಿಭಾಷೆ ಹಾಸುಹೊಕ್ಕಾಗಿರುತ್ತಿತ್ತು.

ನಾಚಿಕೆ ಸ್ವಭಾವದ – 'ಮುಖೇಡಿ' – ಅವನೊಬ್ಬ ನಾರ್ಸಿಸಸ್ ಪಂಥದ ವಿರೋಧಿ. ಅಂದರೆ ತನ್ನ ಬಗ್ಗೆ ಹೆಚ್ಚು ಮಾತನಾಡಲು ಏನೋ ಮುಜುಗರ; ಯಾರೂ ತನ್ನ ಛಾಯಾಚಿತ್ರ ತೆಗೆಯುವಂತಿಲ್ಲ; ಅದು ಅವನಿಗೆ ಸೇರದು. ಹೋಟಲುಗಳಲ್ಲಿ ತಂಗಿದ್ದಾಗ ರೂಮಿನೊಳಗಿನ ಕನ್ನಡಿಗಳನ್ನು ಟವೆಲುಗಳಿಂದ ಮುಚ್ಚಿ ಮರೆಮಾಡುತ್ತಿದ್ದನಂತೆ. ಯಾರೂ ತನ್ನನ್ನು ನೇರವಾಗಿ ಪರಿಚಯಿಸಿಕೊಳ್ಳಲು ಮುಂದಾಗಬಾರದು. ಇವೆಲ್ಲಾ ಅವನ ವ್ಯಕ್ತಿತ್ವದ ವಿರೋಧಾಭಾಸಗಳು.

ಹಾರ್ಡಿ ೧೮೭೭ರಲ್ಲಿ ಹುಟ್ಟಿದ. ಅವನ ತಂದೆ ತಾಯಿಗಳಿಬ್ಬರಿಗೂ ಸಂಖ್ಯಾಶಾಸ್ತ್ರದಲ್ಲಿ ಅಪಾರ ಒಲವು. ಅವನ ತಂದೆ ಕ್ರಾನ್‌ಲೇ ಸ್ಕೂಲಿನಲ್ಲಿ ಚಿತ್ರಕಲೆ ಅಧ್ಯಾಪಕ ಹಾಗೂ ಸ್ಕೂಲಿನ ಖಜಾಂಚಿ (ಬರ್ಸಾರ್), ತಾಯಿ ಲಿಂಕನ್ ಶಾಲೆಯಲ್ಲಿ ಶಿಕ್ಷಕಿ. ಹಾಗಾಗಿ ಚಿಕ್ಕಂದಿನಿಂದಲೂ ಹಾರ್ಡಿಗೆ ಗಣಿತಶಾಸ್ತ್ರದಲ್ಲಿ ತೀವ್ರ ಆಸಕ್ತಿ. ಅವನ ನಿಶಿತ ಬುದ್ಧಿಶಕ್ತಿ (ಐ.ಕ್ಯು.) ಎಲ್ಲರ ಪ್ರಶಂಸೆ ಗಳಿಸಿತ್ತು. ಎರಡು ವರ್ಷದ ಮಗು ೧೯ರಿಂದ ೧೦ ಲಕ್ಷದವರೆಗೆ ಸಂಖ್ಯೆಗಳನ್ನು ಬರೆಯುತ್ತಿದ್ದ. ಚರ್ಚ್‌ಗೆ ಕರೆದುಕೊಂಡು ಹೋದಾಗ ಸ್ತೋತ್ರ ಗೀತೆಗಳ ಸಂಖ್ಯೆಗಳನ್ನೆತ್ತಿಕೊಂಡು ಅಪವರ್ತನ (ಫ್ಯಾಕ್ಟೊರೈಸ್) ಮಾಡುತ್ತಿದ್ದನಂತೆ; ಸಂಖ್ಯೆಗಳೊಂದು ಅವನ ಈ ಚೆಲ್ಲಾಟದ ಅಭ್ಯಾಸ. ಇವೆಲ್ಲಾ ಹಲವು ವರ್ಷಗಳ ನಂತರ ರಾಮಾನುಜನ್ ಆಸ್ಪತ್ರೆಯಲ್ಲಿ ರೋಗಿಯಾಗಿದ್ದಾಗ ಅವನನ್ನು ನೋಡಲು ಹೋದ ಹಾರ್ಡಿ ಅವನ ಜತೆ ತನ್ನ ಟ್ಯಾಕ್ಸಿ ಸಂಖ್ಯೆಯ ಬಗ್ಗೆ ವಿನೋದ ಕ್ರೀಡೆಯಲ್ಲಿ ತೊಡಗಿದ ಹೃದಯಸ್ಪರ್ಶಿ ಘಟನೆಗೆ ಮುನ್ಸೂಚನೆಯಂತಿತ್ತು. ಹಲವರು ಅವನ ಕುರಿತು ವಿಚಾರವೆಸಗಿದ್ದಾರೆ. ಅದರಲ್ಲಿ ಮುಖ್ಯವಾಗಿ ಸಿ. ಪಿ. ಸ್ನೋ ಒಬ್ಬ. ಅವನು ಹಾರ್ಡಿಯನ್ನು ಪ್ರಪ್ರಥಮ ಬಾರಿ ಕೇಂಬ್ರಿಡ್ಜ್‌ನಲ್ಲಿ ಭೇಟಿಯಾದ ಸಂದರ್ಭ ತುಂಬ ಸ್ವಾರಸ್ಯವಾಗಿದೆ:

"ಕೇಂಬ್ರಿಡ್ಜ್‌ನಲ್ಲಿ ಅದೊಂದು ಪೂರ್ಣ ಪ್ರಶಾಂತ ರಾತ್ರಿ. ಕ್ರೈಸ್ಟ್ ಕಾಲೇಜಿನ ಭೋಜನ ಮಂದಿರದ 'ಹೈಟೇಬಲ್' ಮುಂದೆ ಕೂತು ಊಟ ಮಾಡುತ್ತಿದ್ದ ಏಕೈಕ ವ್ಯಕ್ತಿ – ಹಾರ್ಡಿ. ಸ್ವಲ್ಪ ಸಮಯದ ಹಿಂದೆ ಆಗತಾನೆ ಕೇಂಬ್ರಿಡ್ಜ್‌ಗೆ ಶ್ಯಾಡ್ಲೆರಿಯನ್ ಪ್ರೊಫೆಸರ್ ಆಗಿ ವಾಪಸಾಗಿದ್ದ. ಅಲ್ಲಿನ ತರುಣ ವಿದ್ಯಾರ್ಥಿಗಳಿಂದ ನಾನವನ ಬಗ್ಗೆ ಬಹಳ ಕೇಳಿದ್ದೆ – ಅವರಿಗೆಲ್ಲ ಅವನು ಮತ್ತೆ ಹಿಂದಕ್ಕೆ ಬಂದುದರಿಂದ ಖುಷಿಯಾಗಿತ್ತು. ಟೇಬಲ್‌ನ ಒಂದು ತುದಿಯ ಸ್ವಲ್ಪ ಕೆಳಗಿನ ಅಂತಸ್ತಿನಿಂದ ನಾನವನನ್ನು ಎವೆಯಿಕ್ಕದೆ ದಿಟ್ಟಿಸುತ್ತ ಕುಳಿತಿದ್ದೆ. ಸುಮಾರು ೫೦ ವರ್ಷದ ಅವನ ತಲೆಗೂದಲು ಸ್ವಲ್ಪ ನರೆತಿತ್ತು. ತಲೆ ಮೇಲಿನ ಚರ್ಮ ಕಂಚಿನ ಬಣ್ಣಕ್ಕೆ ತಿರುಗಿತ್ತು... ಸ್ಫುರದ್ರೂಪಿ... ಎದ್ದು ತೋರುವ ಕೆನ್ನೆ ಮೂಳೆಗಳು... ತೆಳು ಮೂಗು... ಗಂಭೀರ ಚೈತನ್ಯಪೂರ್ಣ ವದನ... ಸಮಯ ಸಿಕ್ಕಾಗ ತುಂಟು ಹುಡುಗಿಯಂತೆ ಫಕ್ಕನೆ ಹಾಸ್ಯವೆಬ್ಬಿಸಿ ಕಿಚಾಯಿಸಿ ಖುಷಿಪಡುವಂಥ ಸ್ವಭಾವ... ಪ್ರಕೃತಿದತ್ತ ಕಲ್ಪನಾಶೀಲರಿಗೆ ಅಸಹಜವಲ್ಲದ ಮುಖಭಾವ...

"ವೈನ್ ಹೀರುತ್ತ ಕೂತಿದ್ದ ನನ್ನ ಬಳಿ ಯಾರೋ ಬಂದು 'ಹಾರ್ಡಿ ನಿಮ್ಮ ಜತೆ ಕ್ರಿಕೆಟ್ ಬಗ್ಗೆ ಮಾತನಾಡಬೇಕಂತೆ, ಹೋಗಿ' ಎಂದರು. 'ಕೇವಲ ಒಂದು ವರ್ಷದ ಹಿಂದೆ ನಾನು ಕ್ರಿಕೆಟ್

$$\frac{1}{4n}\left(\cosh \pi\sqrt{n} - \frac{\sinh \pi\sqrt{n}}{\pi\sqrt{n}}\right)$$



$$\frac{1}{\pi} = \frac{2\sqrt{2}}{9801}\sum_{n=0}^{\infty}\frac{(4n)!}{(n!)^4}\frac{(1103+26390n)}{396^{4n}}$$

ಟೀಮ್‌ಗೆ ಚುನಾಯಿಸಲ್ಪಟ್ಟಿದ್ದೆ...' ನನಗೆ ಆಶ್ಚರ್ಯವಾಯಿತು. ನಾನವನ ಬಳಿಹೋಗಿ ಕುಳಿತೆ. ಹಲವಾರು ಸೂಕ್ಷ್ಮ ಪ್ರಶ್ನೆಗಳನ್ನು ಕೇಳಿ ನನ್ನ ಕ್ರಿಕೆಟ್ ಅನುಭವ, ಅರ್ಹತೆ ಬಗ್ಗೆ ಖಾತರಿಪಡಿಸಿಕೊಂಡು ತಲೆತಗ್ಗಿಸಿ ಮುಗುಳ್ನಗೆ ಬೀರಿದ. ಮುಂದೆ ಬರಲಿರುವ ಫೆನ್ನರ್ ಕ್ರಿಕೆಟ್ ಮೈದಾನದಲ್ಲಿ ಪಂದ್ಯದ ವೇಳೆ ತನ್ನ ಜತೆ ಚರ್ಚೆಗೆ ಒಬ್ಬ ಕ್ರೀಡಾಪ್ರೇಮಿ ಸಿಕ್ಕಿದನೆಂದು ಸಂತೋಷಪಟ್ಟ."

ಚಿಕ್ಕಂದಿನಿಂದಲೇ ಮೇಧಾವಿ ಎನಿಸಿಕೊಂಡಿದ್ದ ಅವನಿಗೆ ವಿದ್ಯಾರ್ಥಿ ಜೀವನದಲ್ಲಿ ಅಂಥ ಅಡ್ಡಿ ಆತಂಕಗಳೇನೂ ಇರಲಿಲ್ಲ. ಶಾಲಾಕಾಲೇಜು ಘಟ್ಟಗಳಲ್ಲಿ ಸಾಕಷ್ಟು ಹಣಕಾಸಿನ ಅನುಕೂಲ ಒದಗಿ ಅವನ ದಾರಿ ಸುಗಮವಾಯಿತು. ಹನ್ನೆರಡು ವಯಸ್ಸಿನ ಅವನಿಗೆ ಪ್ರಸಿದ್ಧ ವಿಂಚೆಸ್ಟರ್ ಪಬ್ಲಿಕ್ ಸ್ಕೂಲಿನಲ್ಲಿ ವಿದ್ಯಾರ್ಥಿ ವೇತನ ಸಿಕ್ಕಿ ಗಣಿತಶಾಸ್ತ್ರದ ಅಧ್ಯಯನಕ್ಕೆ ಮಾರ್ಗವಾಯಿತು. ಆದರೆ ವಿಂಚೆಸ್ಟರ್ ಸ್ಕೂಲಿನ ಜೀವನದ ರೀತಿ ನೀತಿಗಳು ಅವನಿಗೆ ಕಷ್ಟವೆನಿಸಿದ್ದವು. ಅಲ್ಲಿ ಆಟ-ವ್ಯಾಯಾಮಗಳಿಗೆ ಅವಕಾಶವಿರಲಿಲ್ಲ. ಹೇಗೋ ವಿಂಚೆಸ್ಟರ್ ಶಿಕ್ಷಣ ಮುಗಿಸಿದ. ಅವನು ಮುಂದೆ ಆಕ್ಸ್‌ಫರ್ಡ್ ನ್ಯೂ ಕಾಲೇಜು ಸೇರಬೇಕಾಗಿತ್ತು. ಅಲ್ಲಿ ಸಕಲ ಸೌಕರ್ಯಗಳೂ ಲಭಿಸುವ ಸಾಧ್ಯತೆಗಳಿದ್ದವು. ಆದರೆ ಅವನು ವಿಚಿತ್ರ ವೈಯಕ್ತಿಕ ಕಾರಣಗಳಿಂದಾಗಿ ಕೇಂಬ್ರಿಡ್ಜ್‌ನ ಟ್ರಿನಿಟಿ ಕಾಲೇಜು ಸೇರಿದ. ಅಲ್ಲಿ ಫೆಲೋಷಿಪ್ ಗಳಿಸುವುದೇ ಅವನ ಮುಖ್ಯ ಗುರಿಯಾಗಿತ್ತು. ಟ್ರಿಪೋಸ್ II ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದಾಗ ಅವನ ಉದ್ದೇಶ ಸಫಲವಾಯಿತು.

ಆದರೆ ಕೇಂಬ್ರಿಡ್ಜ್‌ನಲ್ಲಿ ಅವನಿಗೆ ಎರಡು ಸಮಸ್ಯೆಗಳು ಎದುರಾದವು. ಅವನೊಬ್ಬ ಕಟ್ಟಾ ನಾಸ್ತಿಕ. ಮತಧರ್ಮಗಳ ವಿಧ್ಯುಕ್ತ ಆಚರಣೆಗಳಲ್ಲಿ ಸ್ವಲ್ಪವೂ ನಂಬಿಕೆ ಇರಲಿಲ್ಲ. ಅಲ್ಲಿ ಪ್ರಾರ್ಥನಾ ಮಂದಿರ (ಚಾಪೆಲ್)ಕ್ಕೆ ಹೋಗಲೇಬೇಕೆಂಬ ಕಡ್ಡಾಯ ನಿಯಮವಿತ್ತು. ಡೀನ್‌ನ ಅಪ್ಪಣೆಯಂತೆ ಈ ವಿಷಯವನ್ನು ತನ್ನ ತಂದೆ ತಾಯಿಗಳಿಗೆ ತಿಳಿಸಿದಾಗ ಅವರಿಗೆ ಅಸಮಾಧಾನವಾಯಿತು. ಇವನು ಸಾಕಷ್ಟು ಮಾನಸಿಕ ವೇದನೆ ಅನುಭವಿಸಿದ. ಆದರೂ ತನ್ನ ನಾಸ್ತಿಕತೆ ಬಿಟ್ಟುಕೊಡಲಿಲ್ಲ. ದೇವರು ಅವನ ವೈಯಕ್ತಿಕ ಶತ್ರು. – ಇದಕ್ಕೆ ಸಂಬಂಧಿಸಿದಂತೆ ಒಂದು ತಮಾಷೆ ಘಟನೆ ನಡೆಯಿತು. ಹಾರ್ಡಿ, ಲಾರ್ಡ್ಸ್ ಮೈದಾನದಲ್ಲಿ ಒಂದು ಕ್ರಿಕೆಟ್ ಮ್ಯಾಚ್ ನೋಡಲು ಹೋಗಿದ್ದ. ಆ ದಿನ ಬೆಳಿಗ್ಗೆ ಬಿಸಿಲು ಪ್ರಖರವಾಗಿ ಪೆವಿಲಿಯನ್ ಮೇಲೆಲ್ಲ ಹರಡಿತ್ತು. ನರ್ಸರಿ ತುದಿಯನ್ನೆದುರಿಸಿ ಆಟವಾಡುತ್ತಿದ್ದ ಬ್ಯಾಟ್ಸ್‌ಮನ್ ಎಲ್ಲಿಂದಲೋ ಬರುತ್ತಿರುವ ಬೆಳಕಿನ ಪ್ರತಿಫಲನದಿಂದ ತನಗೆ ತೊಂದರೆ ಯಾಗುತ್ತಿದೆಯೆಂದು ದೂರಿದ. ಅಂಪೈರುಗಳು ಎಲ್ಲಾ ಕಡೆ ಹುಡುಕಿ ಬೆಳಕಿನ ಪ್ರತಿಫಲನದ ಮೂಲ ಕಂಡುಹಿಡಿದರು. ಪ್ರೇಕ್ಷಕರ ಗುಂಪಿನಲ್ಲಿ ಕುಳಿತಿದ್ದ ಸ್ಥೂಲಕಾಯದ ಒಬ್ಬ ಪಾದ್ರಿಯ ಎದೆಯ ಮೇಲೆ ಧರಿಸಿದ್ದ ಬೃಹದಾಕಾರದ ಉಜ್ವಲ ಶಿಲುಬೆಯಿಂದ ಬೀರಿದ ಬೆಳಕು ಆಟಗಾರನ ಕಣ್ಣಿಗೆ ರಾಚುತ್ತಿತ್ತು. ಅದನ್ನು ತೆಗೆಸಿಡುವುದು ಅನಿವಾರ್ಯವಾಯಿತು. ಪರಮಾನಂದದಿಂದ ಹಾರ್ಡಿ ಬಗ್ಗಿ, ಬಿದ್ದು ಬಿದ್ದು ನಕ್ಕ. ಸ್ನೇಹಿತರುಗಳಿಗೆಲ್ಲ ಈ ಬಗ್ಗೆ ಕಾರ್ಡುಗಳನ್ನು ಬರೆದು ಆನಂದಪಟ್ಟ, ವಿನೋದ ಕೋಲಾಹಲವೆಬ್ಬಿಸಿದ.

ಆದರೆ ಈ ದೈವವಿರೋಧಿ ನಾಸ್ತಿಕ ಆಗಾಗ 'ಯುದ್ಧ'ದಲ್ಲಿ ಸೋಲಬೇಕಾಗುತ್ತಿತ್ತು. ಕ್ರಿಕೆಟ್ ಆಟದಲ್ಲಿ ಮಗ್ನನಾಗಿರುವಾಗ ಪ್ರತಿಸಂಜೆ ಹತ್ತಿರದ ರೋಮನ್ ಕ್ಯಾಥಲಿಕ್ ಚರ್ಚ್‌ನ ಘಂಟಾನಿನಾದ ಅನುಭವಿಸಬೇಕಾಗುತ್ತಿತ್ತು.

ಅವನಿಗೆ ಕೇಂಬ್ರಿಡ್ಜ್‌ನಲ್ಲಿ ಉಂಟಾದ ಇನ್ನೊಂದು ತೊಡಕೆಂದರೆ ಆಗ ಅಲ್ಲಿ ಪ್ರಚಲಿತವಾಗಿದ್ದ ಮ್ಯಾಥ್ಸ್ ಟ್ರೈಪಾಸ್ ಪರೀಕ್ಷಾ ಪದ್ಧತಿ. ಪರೀಕ್ಷೆಗಳಲ್ಲಿ ಪ್ರಶ್ನೆಗಳು ಸ್ಪರ್ಧಾತ್ಮಕ ಹಾಗೂ ಕಠಿಣವಾಗಿರುತ್ತಿದ್ದವು, ನಿಜ. ಆದರೆ ಅವು ವಿದ್ಯಾರ್ಥಿಗಳ ಕಲ್ಪನಾಶಕ್ತಿಯನ್ನಾಗಲಿ, ಕ್ರಿಯಾತ್ಮಕ ಒಳ ಅರಿವನ್ನಾಗಲಿ ಪರೀಕ್ಷಿಸುವಂತಿರಲಿಲ್ಲ. ಅವನು ಈ ವ್ಯವಸ್ಥೆಯಲ್ಲಿ ಸಾಕಷ್ಟು ನರಳಬೇಕಾಯಿತು. ಮುಂದೆ ಸೀನಿಯರ್ ರ್‍ಯಾಂಗ್ಲರ್ ಆಗುವಂಥವರೂ ಸಹ ಕೆಲವು ಗಣಿತದ ಮೂಲಭೂತ ಕೋರ್ಸುಗಳನ್ನು ಎದುರಿಸಿ ಪಾರಾಗಬೇಕಾಗಿತ್ತು. ಆದರೆ ಇದರಲ್ಲಿ ಮಾರ್ಗದರ್ಶಿಯಾಗಿದ್ದ ಪ್ರೊಫೆಸರ್ ಲೇವ್ ಎಂಬುವರಿಂದ ತನಗೆ ಅಪಾರ ಮಾರ್ಗದರ್ಶನ ಒದಗಿತೆಂದು ಸಂತೋಷಪಟ್ಟ. ಗಣಿತಶಾಸ್ತ್ರದ ಆನಂದದಾಯಕ ಸೂಕ್ಷ್ಮಗಳತ್ತ ಕಣ್ಣು ತೆರೆಸಿದವನೆಂದು ಆತನನ್ನು ಬಹುವಾಗಿ ಶ್ಲಾಘಿಸಿದ. ಮುಂದೆ ಅವನು ಅಧಿಕಾರಕ್ಕೆ ಬಂದಾಗ ಸಹೋದ್ಯೋಗಿ ಲಿಟ್ಲ್‌ವುಡ್ ನೆರವಿನಿಂದ ಆ ಪದ್ಧತಿ ರದ್ದುಪಡಿಸಲು ಸಾಧ್ಯವಾಯಿತು.

ಅವನ ಅನನ್ಯ ಬುದ್ಧಿಶಕ್ತಿಯಿಂದಾಗಿ ೩೩ನೆಯ ವಯಸ್ಸಿನಲ್ಲೇ ರಾಯಲ್ ಸೊಸೈಟಿ ಫೆಲೋ (ಎಫ್.ಆರ್.ಎಸ್.) ಆದ.

ಅವನ ಇಳಿವಯಸ್ಸಿನ ಬದುಕಿನಲ್ಲಿ ಕಾರ್ಮೋಡಗಳು ಎದ್ದವು. ಅವನ ಶ್ರೇಷ್ಠ ಸಾಧನೆ – ಲಿಟ್ಲ್‌ವುಡ್ ಮತ್ತು ರಾಮಾನುಜನ್ ಜತೆ ಸೇರಿ ರಚಿಸಿದ ನೂರಕ್ಕೂ ಹೆಚ್ಚು ಪ್ರೌಢ ಸಂಶೋಧನಾ ಪ್ರಬಂಧಗಳು. ಗಣಿತಶಾಸ್ತ್ರಕ್ಕೆ ಹೊಸ ಹೊಸ ಆಯಾಮ ನೀಡುವಂಥ ಮಹತ್ವದ ಕೊಡುಗೆಗಳು ಅವು.

ಅವನದು ಅತ್ಯಂತ ಪರಿಶುದ್ಧ, ನಿಸ್ವಾರ್ಥ ಮನೋಭಾವ, ತನಗಿಂತಲೂ ತನ್ನ ಜತೆಯ ಲಿಟ್ಲ್‌ವುಡ್ ಅತ್ಯುನ್ನತ ವಿದ್ವಾಂಸನೆಂದು ಹಲವಾರು ಸಲ ಹೇಳಿದ್ದ. ರಾಮಾನುಜನ್ ಒಬ್ಬ ಅತಿಶ್ರೇಷ್ಠ ಪ್ರತಿಭಾವಂತ ಎಂಬುದು ಅವನ ನಿಶ್ಚಿತ ಅಭಿಮತವಾಗಿತ್ತು, ಅವನು ರಾಮಾನುಜನ್‌ನನ್ನು 'ಕಂಡುಹಿಡಿದದ್ದು' ೧೯೧೩ರಲ್ಲಿ. ಆ ಸನ್ನಿವೇಶವಂತೂ ಅತ್ಯಂತ ಗಾಢವಾಗಿ ನಮ್ಮ ಅಂತಃಕರಣವನ್ನು ಮುಟ್ಟುವಂಥದು. ಅದು ಅವನ ಜೀವನದಲ್ಲಿ ಒಂದು ರೊಮ್ಯಾಂಟಿಕ್ ಘಟನೆ. ಈಗ ಅದು ಲೋಕಪ್ರಸಿದ್ಧವಾಗಿದೆ.

ಅನಿರೀಕ್ಷಿತವಾಗಿ ಭಾರತದಿಂದ ಬಂದ ರಾಮಾನುಜನ್‌ನ ಒರಟು ಒರಟಾದ ಪತ್ರದಲ್ಲಿ ಗೀಚಲಾಗಿದ್ದ ಪ್ರಮೇಯಗಳು, ಗಣಿತದ ಸಮಸ್ಯೆಗಳು ಯಾರನ್ನೂ ಆಕರ್ಷಿಸುವಂತಿರಲಿಲ್ಲ. ಆದರೆ ಆ ಪತ್ರಗಳಲ್ಲಿ ಒಬ್ಬ ಅಸಾಧಾರಣ ಮೇಧಾವಿಯನ್ನು ಗುರುತಿಸಿ ಅವನನ್ನು ಗಣಿತಶಾಸ್ತ್ರದ ಪ್ರಪಂಚಕ್ಕೆ ಪರಿಚಯ ಮಾಡಿಸಿದುದು ಒಂದು ಅಪರೂಪದ, ಅಚ್ಚರಿಯ ವಿದ್ವತ್ ಸಾಧನೆ.

ಅವನಿಂದಾಗಿ ರಾಮಾನುಜನ್ ೧೯೧೪ರಲ್ಲಿ (ಮದ್ರಾಸಿನಲ್ಲಿ ಬಡ ಗುಮಾಸ್ತೆಯಾಗಿದ್ದ) ಕೇಂಬ್ರಿಡ್ಜ್‌ಗೆ ಬರಲು ಸಾಧ್ಯವಾಯಿತು. ಈ ಬಡಬ್ರಾಹ್ಮಣ ಇಂಗ್ಲೆಂಡಿನ ಜೀವನಶೈಲಿಗೆ ಹೊಂದಿಕೊಳ್ಳುವುದು ಕಷ್ಟವಾದರೂ ಅಂತಿಮವಾಗಿ ಸಾಧ್ಯವಾಯಿತು. ಅವನ ಭಾಷಾಶೈಲಿ, ರೀತಿನೀತಿಗಳನ್ನು ತಿದ್ದಿ ಅವನ ಪ್ರತಿಭೆ ಲೋಕಕ್ಕೆ ಬೆಳಗುವಂತೆ ಮಾಡಿದ ಕೀರ್ತಿ ಹಾರ್ಡಿಗೆ ಸಲ್ಲುತ್ತದೆ. ಅವನಿಗೆ ಅಗತ್ಯವಾದ ಎಲ್ಲಾ ಅನುಕೂಲಗಳು ಒದಗಿ ಅವನು ತನ್ನ ಕೇವಲ ೩೦ನೆಯ ವಯಸ್ಸಿನಲ್ಲಿ ಎಫ್.ಆರ್.ಎಸ್. ಪಡೆದ. ಅವನ ಜತೆ ಹಾರ್ಡಿ ರಚಿಸಿದ ಐದು ವಿದ್ವತ್ ಲೇಖನಗಳು ಗಣಿತ ಪ್ರಪಂಚದ ಮೈಲಿಗಲ್ಲುಗಳು ಎನ್ನುತ್ತಾರೆ ತಜ್ಞರು.

ರಾಮಾನುಜನ್‌ನ ಆರೋಗ್ಯ ಅವನ ಹಿಂದಿನ ಕಡುಕಷ್ಟದ ಜೀವನದಿಂದಾಗಿ ನಶಿಸಿಹೋಗಿ ಅವನು ಆಸ್ಪತ್ರೆಯಲ್ಲಿರಬೇಕಾಯಿತು. ಆ ಅವಧಿಯಲ್ಲಿ ಹಾರ್ಡಿ ಅವನ ಯೋಗಕ್ಷೇಮ ನೋಡಿಕೊಂಡ.

**ಟ್ಯಾಕ್ಸಿ ಘಟನೆ :** ಒಂದು ದಿನ ಹಾರ್ಡಿ ಎಂದಿನಂತೆ ಟ್ಯಾಕ್ಸಿಯಲ್ಲಿ ಆಸ್ಪತ್ರೆಗೆ ಬಂದ. ರಾಮಾನುಜನ್ ಜತೆ ಮಾತನಾಡುತ್ತ 'ನನ್ನ ಟ್ಯಾಕ್ಸಿ ಸಂಖ್ಯೆ ೧೭೨೯ – ಅದೊಂದು ನೀರಸ ಸಂಖ್ಯೆ ಎಂದೆನಿಸುತ್ತದೆ ನನಗೆ' ಅಂದ ಹಾರ್ಡಿ. ಥಟ್ಟನೆ ರಾಮಾನುಜನ್ 'ಇಲ್ಲ ಹಾರ್ಡಿ, ಅದೊಂದು ಸ್ವಾರಸ್ಯವಾದ ಸಂಖ್ಯೆ. (ಸಂಖ್ಯೆಗಳೊಡನೆ ಆಟವಾಡುವುದು ಅವರಿಬ್ಬರಿಗೂ ಪ್ರಿಯವಾದ 'ಖಯಾಲಿ'ಯಾಗಿತ್ತಷ್ಟೆ) 'ಎರಡು ಘನಸಂಖ್ಯೆಗಳ ಮೊತ್ತವನ್ನು ಎರಡು ಬಗೆಗಳಲ್ಲಿ ಹೇಳಬಹುದಾದಂತಹ ಅತಿ ಕನಿಷ್ಠ ಸಂಖ್ಯೆ ಅದು' ಎಂದ. (It is the smallest number expressible as the sum of two cubs in two different ways.) ಇಬ್ಬರು ಅದ್ವಿತೀಯ ಪ್ರತಿಭಾವಂತರ ಆ ಸಮಾಗಮ ಎಷ್ಟು ಅದ್ಭುತ ಆಕಸ್ಮಿಕವಾಯಿತೆಂಬುದನ್ನು ನೆನೆದಾಗ ರೋಮಾಂಚನವಾಗುತ್ತದೆ.

ಮೊದಲನೆಯ ಮಹಾಯುದ್ಧಾನಂತರ ೩೩ ವರ್ಷ ವಯಸ್ಸಿನ ರಾಮಾನುಜನ್ ಮದ್ರಾಸಿಗೆ ಹಿಂತಿರುಗಿದ. ಕ್ಷಯರೋಗ ಪೀಡಿತನಾಗಿದ್ದ ಅವನು ಅಲ್ಲಿ ಸಾವನ್ನಪ್ಪಿದ. ರಾಮಾನುಜನ್ ಸಾವಿನ ಬಗ್ಗೆ ಹಾರ್ಡಿ ಬರೆಯುತ್ತಾ "ಗೆಲೋಯ್ಸ್ ೨೩ ವರ್ಷವಾಗಿದ್ದಾಗ ಸತ್ತ; ಅಬೆಲ್‌ಗೆ ೨೭ ವರ್ಷವಾಗಿತ್ತು; ರಾಮಾನುಜನ್ ೩೩ ವರ್ಷಕ್ಕೆ ಕೊನೆಯುಸಿರೆಳೆದ; ರೈಮನ್‌ಗೆ ೪೦ ಆಗಿತ್ತು. ನನಗೆ ಅನಿಸುತ್ತದೆ; ೪೦ ವರ್ಷ ಮೀರಿದ ಗಣಿತಜ್ಞರು ಯಾರಿಂದಲೂ ಗಣಿತಶಾಸ್ತ್ರದಲ್ಲಿ ಮಹತ್ವದ ಸಾಧನೆ ಆಗಿಲ್ಲ..." ಎಂದಿದ್ದಾನೆ *(A mathematician's apology).* ೧೯೧೪–೧೮ರ ಅವಧಿಯ ಕಡು ಕ್ರೂರ ದಿನಗಳಲ್ಲಿ ಹಾರ್ಡಿ ತನ್ನ ಇಬ್ಬರು ಸಹೋದ್ಯಮಿಗಳೊಡನೆ ಗಂಭೀರ ಅಧ್ಯಯನ ಸಂಶೋಧನೆಗಳಲ್ಲಿ ನಿರತನಾಗಿದ್ದುದರಿಂದ ಅವನಿಗೆ ಆ ಅವಧಿಯ ಘೋರ, ನೋವು, ಸಂಕಟ-ಹೋರಾಟಗಳನ್ನು ಎದುರಿಸುವುದು ಸಾಧ್ಯವಾಯಿತು.

೧೯ನೆಯ ಶತಮಾನದಿಂದಲೂ ಯೂರೋಪಿನ ಸಾಂಸ್ಕೃತಿಕ ಕೇಂದ್ರವಾಗಿದ್ದ ಜರ್ಮನಿಯ ವಿರುದ್ಧ ನಡೆದ ಆ ಯುದ್ಧದಲ್ಲಿ ಇಂಗ್ಲೆಂಡಿನ ಬಗ್ಗೆ ಹಾರ್ಡಿಗೆ ಅಷ್ಟಾಗಿ ಸಹಾನುಭೂತಿ ಇರಲಿಲ್ಲ. ರಷ್ಯ, ಅಮೇರಿಕದಂಥ ರಾಷ್ಟ್ರಗಳಿಗೆ 'ಸಂಶೋಧನೆ' ಎಂದರೇನೆಂಬುದನ್ನು ತೋರಿಸಿದವರು ಜರ್ಮನ್ ವಿದ್ವಾಂಸರು ಎಂದು ಹಾರ್ಡಿ ಮತ್ತು ಅವನ ಸ್ನೇಹಿತರು ಹೇಳುತ್ತಿದ್ದುದುಂಟು.

೧೯೧೯ರಲ್ಲಿ ಹಾರ್ಡಿ ಅನಿರೀಕ್ಷಿತವಾಗಿ ಕೇಂಬ್ರಿಡ್ಜ್‌ಅನ್ನು ಬಿಟ್ಟು ಆಕ್ಸ್‌ಫರ್ಡ್‌ಗೆ ಹೋಗಲು ನಿರ್ಧರಿಸಿದ. ಆ ಹೊತ್ತಿಗೆ ಅವನು ಲಿಟ್ಲ್‌ವುಡ್ – ರಾಮಾನುಜನ್‌ರ ಜತೆ ವಿಶಿಷ್ಟ ಸಂಶೋಧನೆಗಳನ್ನು ನಡೆಸಿ ವಿಪುಲ ಸಂಖ್ಯೆಯ ಲೇಖನಗಳನ್ನು ಬರೆದಿದ್ದ. ಆಕ್ಸ್‌ಫರ್ಡ್‌ನಲ್ಲಿ ಅವನು ಸುಗಮವಾಗಿ ಜೀವಿಸುವುದು ಸಾಧ್ಯವಾಯಿತು. ಅವನ ಸುತ್ತಲೂ ಹಲವು ಯುವ ವಿದ್ವಾಂಸರು ಸೇರಿ ವಿಚಾರ ವಿನಿಮಯ ನಡೆಸುತ್ತಿದ್ದರು.

ಆದರೂ ಅವನು ೧೯೩೧ರಲ್ಲಿ (ಪ್ರೊಫೆಸರ್ ಹುದ್ದೆಗೆ ಆಹ್ವಾನ ಬಂದಾಗ) ಕೇಂಬ್ರಿಡ್ಜ್‌ಗೆ ಹೋಗಲು ನಿರ್ಧರಿಸಿದುದು ಕೆಲವರಿಗೆ ಆಶ್ಚರ್ಯವಾಗಿತ್ತು. ಹೆಚ್ಚು ವಯಸ್ಸಾದಂತೆಲ್ಲ ಅವನಿಗೆ ತನ್ನ ವಿಶ್ರಾಂತ ಜೀವನದ ಬಗ್ಗೆ ಕಾಳಜಿ ಹೆಚ್ಚಾಯಿತು. ಆಕ್ಸ್‌ಫರ್ಡ್‌ನಲ್ಲಿ ಪ್ರೊಫೆಸರ್ ಹುದ್ದೆಯಿಂದ ವಿಶ್ರಾಂತಿ ಪಡೆದ ಕೂಡಲೆ ಅವನು ಸ್ಥಳಪಲ್ಲಟನಾಗುವುದು ಆಕ್ಸ್‌ಫರ್ಡ್ ನಿಯಮದಲ್ಲಿ ಅನಿವಾರ್ಯವಾಗಿತ್ತು; ಆದರೆ ಕೇಂಬ್ರಿಡ್ಜ್‌ನಲ್ಲಿ ಆ ಆತಂಕವಿರಲಿಲ್ಲ. ಆದ್ದರಿಂದ ಅವನು ಸ್ಯಾಡ್ಲೆರಿಯನ್ ಪ್ರೊಫೆಸರಾಗಿ ಅಲ್ಲಿಗೆ ಬಂದಿದ್ದ. ಸಿ. ಪಿ. ಸ್ನೋ ಅವನನ್ನು ಪ್ರಥಮವಾಗಿ ಭೇಟಿಯಾದದ್ದು ಆ ಸುಮಾರಿನಲ್ಲಿ.

ಅಲ್ಲಿಂದ ಮುಂದೆ ಅವನಲ್ಲಿ ಹೆಚ್ಚೇನೂ ಬದಲಾವಣೆಗಳಾಗಲಿಲ್ಲ. ತನಗಿಷ್ಟ ಬಂದ ರೀತಿಯಲ್ಲಿ ವಿದ್ವತ್ ಜನರೊಡನೆ ಕಾಲ ಕಳೆದ. ಅವನ 'ದೇವರ ವಿರುದ್ಧದ ಯುದ್ಧ' ಎಂದಿನಂತೆ ಮುಂದುವರಿಯಿತು. ಆಗ ನಡೆದ ಒಂದು ವಿನೋದದ ಘಟನೆ ನಮಗೆ ಖುಷಿಕೊಡುವಂಥದು. ಬಿಸಿಲಿನ ಒಂದು ಮಧ್ಯಾಹ್ನ ಅವನು ಕ್ರಿಕೆಟ್ ನೋಡಲು ಹೊರಟಾಗ 'ಸೂರ್ಯನನ್ನು ವಂಚಿಸಲು' ಐದಾರು ಸ್ವೆಟರ್‌ಗಳನ್ನೂ ಛತ್ರಿಗಳನ್ನೂ ಜತೆಯಲ್ಲಿ ಕೊಂಡೊಯ್ದು 'ಇವನನ್ನು ವಂಚಿಸಲು ದೇವರು' ಅಂದು ಮಳೆ ಸುರಿಸಲಿಲ್ಲ. ಹಾರ್ಡಿ ಖುಷಿಯಾಗಿ ಕುಳಿತು ಆಟವನ್ನು ನೋಡುವುದರ ಜತೆಗೆ ತನ್ನ ಸ್ವಂತ ಅಧ್ಯಯನ, ಇತ್ಯಾದಿ ಕೆಲಸಗಳನ್ನು ಮಾಡಿಕೊಂಡ.

೧೯೩೯ರ ನಂತರದ ದಿನಗಳು ಅವನ ಪಾಲಿಗೆ ಅಸಹನೀಯವಾಗುತ್ತಿದ್ದವು. ಎರಡನೆಯ ಮಹಾಯುದ್ಧ ಪ್ರಾರಂಭವಾದಾಗ ಅವನಿಗೆ ಅವು ದುರ್ದಿನಗಳು. ಅವನ ಆರೋಗ್ಯ ಹದಗೆಡುತ್ತ ಬಂತು, ಏಕಾಕಿತನ ಕಾಡುತ್ತಿತ್ತು. ಎಂದಿನ ಚಟುವಟಿಕೆಗಳು ಮೊಟಕಾದವು, ಅವನ ನಿಕಟ ಸ್ನೇಹಿತರುಗಳು ಕಣ್ಮರೆಯಾದಾಗ 'ಬದುಕು ಸಾಕು' ಎನಿಸಿತು. ಒಮ್ಮೆ ಆತ್ಮಹತ್ಯೆಯ ಪ್ರಯತ್ನ ನಡೆಸಿ ಸೋತ, ಆಗಲೂ ಅವನು ತನ್ನ ಹಾಸ್ಯಪ್ರಜ್ಞೆಯನ್ನುಳಿಸಿಕೊಂಡು ಅದರ ಬಗ್ಗೆ ವಿನೋದವಾಗಿ ಮಾತನಾಡುತ್ತಿದ್ದ. ಅವನಿಗಾಗಿ ಜೀವನವನ್ನು ಮುಡಿಪಿಟ್ಟ ಅವನ ಸಹೋದರಿ ಅವನನ್ನು ಪ್ರೀತಿಯಿಂದ ನೋಡಿಕೊಂಡಳು. ಅವನು ಕೊನೆಯುಸಿರೆಳೆಯಲು ಕೆಲವು ದಿನಗಳ ಮುಂಚೆ ಅವನಿಗೆ ಕಾಪ್ಲೆ ಮೆಡಲ್ ನೀಡಿ ಗೌರವಿಸಲಾಯಿತು. ಯಥಾಪ್ರಕಾರ ಹಾರ್ಡಿ 'ಮೆಫಿಸ್ಟೊಫೀಲಿಯನ್' ನಗೆಬೀರಿ 'ಈಗ ತಿಳಿಯಿತು, ನನ್ನ ಕೊನೆಗಾಲ ಬಂದಿದೆ ಎಂಬುದು. ನನ್ನನ್ನು ಗೌರವಿಸಲು ಈಗ ಈ ಜನ ಇಷ್ಟು ಕಾತರರಾಗಿರುವುದನ್ನು ನೋಡಿದರೆ ಇದರ ಅರ್ಥ ಇಷ್ಟೇ ತಾನೇ?' ಎಂದು ನಗೆಯಾಡಿದ. 'ಒಂದು ವೇಳೆ ನಾನು ಇವತ್ತು ಸಾಯುತ್ತೇನೆಂದು ತಿಳಿದರೂ ಕ್ರಿಕೆಟ್ ಸ್ಕೋರುಗಳನ್ನು ಬಿಡದೆ ಕೇಳುತ್ತಿರುತ್ತೇನೆ' ಎನ್ನುವುದು ಅವನ ಕೊನೆಯ ಹಾಸ್ಯದ ಚಟಾಕಿ.

ಅವನು ಅಂತಿಮವಾಗಿ ಕಣ್ಣುಚ್ಚಿದಾಗ ಭಾರತೀಯ ಕ್ರಿಕೆಟ್ ತಂಡವೊಂದು ಆಸ್ಟ್ರೇಲಿಯದ ವಿರುದ್ಧ 'ಟೆಸ್ಟ್' ಪಂದ್ಯದಲ್ಲಿ ತೊಡಗಿತ್ತು.

**ಎಚ್. ಕೆ. ರಾಮಚಂದ್ರಮೂರ್ತಿ**
ಸಂಖ್ಯೆ ೧೦೨, 'ಶ್ರವಂತ ಪ್ಯಾಲೇಸ್', ೩ನೇ ಅಡ್ಡರಸ್ತೆ, ಸಿ. ಆರ್. ಲೇಔಟ್
ಜೆ. ಪಿ. ನಗರ ೧ನೇ ಹಂತ, ಬೆಂಗಳೂರು – ೫೬೦ ೦೭೮

ಕಾವ್ಯಲೋಕ

## ಒಂದು ಮನವಿ

ನಾನು ಸತ್ತಾಗ ಕಂಬನಿಸದಿರಿ
ಬಂಜರು ಬಿತ್ತಿ ಬೆಳೆಯಲಾರದ
ಮರುಭೂಮಿಯ ಹೆಜ್ಜೆಗುರುತಲಿ
ಕಂಬನಿ ನಲುಗುತ್ತದೆ.

ಸೋಲು ಸಂಭ್ರಮಿಸಿಕೊಂಡೆ
ಗೆಲುವ ಹಠದೊಳಗೆ
ಕಾಣಲಿಲ್ಲ 'ಕಾಲ'ಕುಣಿಕೆ
"ಹಂಸಕ್ಷೀರ ನ್ಯಾಯ"ದಲಿ
ನೀರಿಗೆ  ಹಾಲೆರೆದು ಕಾದು ಕುಳಿತ
ಬೇಟೆಗಾರನ ಭೀತಿಗೆ ಹಂಸ ಹಾರಲಿಲ್ಲ
ನ್ಯಾಯಕ್ಕಿಂತ ಪ್ರಾಣ ಮುಖ್ಯವೆಂದು
ನಾನೀಗ ಸತ್ತಿದ್ದೇನೆ ಕಂಬನಿಸದಿರಿ

ಕಂಬನಿಸಬೇಡಿ ಯಾವ ಸಾವನ್ನು
ಬಿತ್ತಲಾರದ ನೆತ್ತರಾಗಿ ಸಾಯುವುದೇ ಇಲ್ಲ
ಎಂದುಕೊಂಡು ಇನ್ನೆಷ್ಟು ವರುಷ ಬಾಳಲು ಸಾಧ್ಯ
ಗಾಂಧಿಯ ನಾಡಲಿ
ರಕ್ತಬೀದಿಯಲಿ 'ಕೆಂಪು' ಹಾಸಿನ ಸ್ವಾಗತ

ಸಾಲದ ಕೈಯಲಿ ಸಾವಾಗಿ
ನೇಣಿಗೆ ಉರುಳಾದ ವ್ಯವಸ್ಥೆ
ಗ್ರಾಮ; ವಾಸ್ತವ್ಯದ ರಾಜಕೀಯ
"ಬೆಕ್ಕಿಗೆ ಜ್ವರ"! ಪತ್ತೆಗೆ ದೀರ್ಘಾವಧಿ ಟೆಂಡರ್
ಅರ್ಜಿ ಸಲ್ಲಿಸಬಹುದು ಆಸಕ್ತರು
ಷರತ್ತುಗಳ ಅನ್ವಯ
(ಬೆಕ್ಕಿನ ಸಂತಾನ ವೃದ್ಧಿಕೇಂದ್ರಗಳ ನಿರ್ವಾಹಕರಿಗೆ ಆದ್ಯತೆ)
ಓದಿಗೆ ಅಕ್ಷರವಾಗಿ ಮೂಗಿಲಿಗಳ ಬಳಗದಲಿ
ಸತ್ತಿದ್ದೇನೆ; ನನ್ನ ಸಾವಿಗೂ ಕಾರಣ ಕೇಳಿ
ಟೆಂಡರ್ ಕರೆಯಬಹುದು...

**ಸ್ವಾಮಿ ನ. ಕೋಡಿಹಳ್ಳಿ**
'ಮಾತೃಕೃಪ', ೧ನೇ ಮಹಡಿ, ಅಕ್ಸಾ ಮಸೀದಿ ಮುಂಭಾಗ,
ವಿನೋಬಾನಗರ, ತುಮಕೂರು ಜಿಲ್ಲೆ





## ತೇವ ಕಾಯುವ ಬೀಜ

**(ಬಸೂ ಕವಿತೆಗಳು)**

*ಬಸೂ*

**ಪುಟ : ೨೭೪**

**ಬೆಲೆ : ರೂ. ೧೬೦**

**ಕವಿ ಪ್ರಕಾಶನ,**
ಜಲಜ ಜನರಲ್ ಎಂಡ್ ಮೆಟರ್ನಿಟಿ ಕ್ಲಿನಿಕ್, ಕವಲಕ್ಕಿ, ಹೊನ್ನಾವರ ತಾಲೂಕು, ಉತ್ತರಕನ್ನಡ ಜಿಲ್ಲೆ

*ಕವಿತೆ ಸುಖದ ಸುಪ್ಪತ್ತಿಗೆಯಲ್ಲಿದ್ದಾಗ ಹುಟ್ಟುವುದಿಲ್ಲ; ಹುಟ್ಟಿದರೂ ಅದರ ಆಯಸ್ಸು ಕಡಿಮೆ. ಮನ ಮಿಡಿಯುವ ಶೋಕಗೀತೆಗಳು ಬೇಕಾದಷ್ಟು ಇರುವಂತೆ ಸುಖಗೀತೆಗಳು ಸಂಖ್ಯೆಯಲ್ಲಿ ಬಲು ಕಡಿಮೆ. ಹುಸಿ ಮೋಡ ನೋಡಲು ಚೆಂದ, ಅದು ಆರ್ದ್ರವಾಗಿ ಕೆಳಗಿಳಿದು ಬರುವ ಕಪ್ಪು ಮೋಡದಷ್ಟು ಜೀವ ಮೊಳೆಯುವ ದ್ರವ್ಯ ಹೊಂದಿಲ್ಲ. ಈ ಮಾತುಗಳು ಏಕೆಂದರೆ ಬಸೂ ಅವರ ಈ ಕವನಗಳನ್ನು ಓದಿದರೆ ಇಂಥ ವಿಚಾರ ಮನದೊಳಗೆ ಸುಳಿಯುತ್ತದೆ. ಪರಿಪೂರ್ಣ ಬದುಕಿಗೆ ಸಾಕಾಗಿ ತುಳುಕುವಷ್ಟು ಸಾಹಿತ್ಯದ್ರವ್ಯ ವಿದ್ದುದು ಪ್ರೇಮಗೀತೆಗಳಾಗಿ ಹೊಮ್ಮ ಬೇಕಾಗಿದ್ದುದು ಹಾಗಾಗದೆ ಇಲ್ಲಿನ ಕವಿತೆಗಳೆಂಬ ನಿಟ್ಟುಸಿರುಗಳಾಗಿ ಇಳಿದು ಬಂದಿದೆ. ಯಾವುದೇ ಕವಿತೆಗೆ ಶೀರ್ಷಿಕೆ ಇಲ್ಲದೆ ಬರೋಬ್ಬರಿ ೨೦೨ ಗೀತೆಗಳು ಬದುಕಿನ ಕಥೆ ಹೇಳುತ್ತಿವೆ. ಪುಸ್ತಕದ ಬೈಂಡಿಂಗ್‌ನಲ್ಲೂ ಬೆಳಕು–ಕತ್ತಲೆ, ಹಗಲು–ಇರುಳು ಸಂಕೇತಿಸಲ್ಪಟ್ಟಿದೆ. ಮೊದಲ ಹಾಳೆ ಶುಭ್ರ ಬಿಳಿಯದು ಹುಣ್ಣಿಮೆಯಂತೆ. ಎರಡನೆಯದು ಅಮಾವಾಸ್ಯೆಯ ಕಾರಿರುಳು. ಸಂತೋಷ–ಸಂಭ್ರಮ ವೆಂದರೆ ಮೂರನೆಯ ಹಾಳೆ ಮತ್ತೆ ಅಕ್ಷರಗಳೊಂದಿಗೆ ಬಿಳಿಯದು – ಈ ಸಂಯೋಜನೆಯನ್ನೇ ಒಂದು ಮೌನ ಕವನ ಎನ್ನೋಣವೆ? ಸದ್ಯಕ್ಕೆ ಈ ಕಪ್ಪು–ಬಿಳುಪಿನ ಸಂಕಲನವನ್ನೋದೋಣ. ಮುಂದೆ ಅವರ 'ಕನಸಿ'ನ ಬದುಕು ಬಣ್ಣಗಳ ಸಂಕಲನವಾಗಿ ಹೊರಬರಲೆಂದು ಆಶಿಸೋಣ.*

## ಶೃಂಖಲೆಯ ಝೇಂಕಾರ

*ಬೀನಾ ದಾಸ್; ಕನ್ನಡಕ್ಕೆ : ಡಾ॥ ಎನ್. ಗಾಯತ್ರಿ*



**ಪುಟ : ೧೨೮** **ಬೆಲೆ : ರೂ. ೭೫**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಭಾರತದ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ದಿಟ್ಟತನ ಮೆರೆದು ಬ್ರಿಟಿಷರ ಕೆಂಗಣ್ಣಿಗೆ ಗುರಿಯಾದವರಲ್ಲಿ ಬಂಗಾಳದ ಮಹಿಳೆ ಬೀನಾ ದಾಸ್ ಹೆಸರು ಎದ್ದು ಕಾಣುತ್ತದೆ. ಈಕೆ ಕಲ್ಕತ್ತಾದ ಕ್ರಾಂತಿಕಾರಿ ಸಶಸ್ತ್ರ ಹೋರಾಟದ ಗುಂಪಿನೊಂದಿಗೆ ಗುರುತಿಸಿಕೊಂಡವರು. ಅಂದಿನ ಬಂಗಾಳದ ಗವರ್ನರ್ ಸ್ಟಾನ್ಲೆ ಜಾಕ್ಸನ್ ಅವರತ್ತ ಈಕೆ ಹಾರಿಸಿದ ಗುಂಡು ವಿಫಲವಾಗಿ ಪೊಲೀಸರ ಕೈಗೆ ಸಿಕ್ಕಿ ಸೆರೆಮನೆವಾಸ ಅನುಭವಿಸಬೇಕಾಯ್ತು. ಬ್ರಿಟಿಷ್ ಪತ್ರಿಕೆಗಳು ಸಹ ಇವರನ್ನು ಭಾರತದ ಜೋನ್ ಆಫ್ ಆರ್ಕ್ ಎಂದು ಬಣ್ಣಿಸಿದ್ದವು. ಅಷ್ಟೇ ಅಲ್ಲ, ಸಮಕಾಲೀನರು ಅವರನ್ನು ಅಗ್ನಿಕನ್ಯೆಯೆಂದೇ ಕರೆದಿದ್ದರು. ಈ ಕೃತಿಯಲ್ಲಿ ಬೀನಾ ದಾಸ್ ತಾನು ಅನುಭವಿಸಿದ ಸೆರೆಮನೆಯ ಬದುಕಿನ ವಿವರಗಳು ಧಾರಾಳವಾಗಿ ಬರೆಯಲ್ಪಟ್ಟಿವೆ. ಸ್ವಾತಂತ್ರ್ಯ ಹೋರಾಟಗಾರರನ್ನು ದೇಶದ್ರೋಹಿಗಳೆಂದೇ ಆಂಗ್ಲ ಅಧಿಕಾರಿಗಳು ತಿಳಿದಿದ್ದರು. ಸೆರೆಮನೆವಾಸ, ಅಲ್ಲಿನ ಅಧಿಕಾರಿಗಳ ದರ್ಪ, ಯಾವುದೇ ಹೊಂದಾಣಿಕೆಗೆ – ಬದಲಾವಣೆಗೆ ಕಿವಿಗೊಡದ ಅಸಂಬದ್ಧ ಜೈಲಿನ ಕಾನೂನುಗಳು, ನಿಯಮಗಳು ಮುಂತಾದವೆಲ್ಲ ಮಾನವೀಯತೆಗೂ ಜೈಲುಶಿಕ್ಷೆಗೂ ಇರುವ ಭಾರಿ ಅಂತರವನ್ನು ಹೇಳುತ್ತವೆ. ಶೃಂಖಲೆಯ ಸದ್ದು ಝೇಂಕಾರವಾಗಿರದೆ ಕ್ರೂರ ಕರ್ಕಶ ಝಣಕಾರವಾಗಿದೆ ಆಕೆಯ ಬದುಕಿನಲ್ಲಿ!*



## ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮುಸ್ಲಿಂ ಮಹಿಳೆಯರ ಕೊಡುಗೆ

*ಡಾ॥ ಆಬಿದಾ ಸಮೀಉದ್ದೀನ್; ಕನ್ನಡಕ್ಕೆ : ಡಾ॥ ಷಾಕಿರಾ ಖಾನಂ*

**ಪುಟ : ೨೩೨** **ಬೆಲೆ : ರೂ. ೧೪೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

*ಬ್ರಿಟಿಷ್ ಸಾಮ್ರಾಜ್ಯಶಾಹಿ ಆಡಳಿತವನ್ನು ಕಿತ್ತು ಸ್ವತಂತ್ರ ಭಾರತ ನಿರ್ಮಾಣ ಮಾಡುವಲ್ಲಿ ಹಲವರು ಕೈಜೋಡಿಸಿದ್ದಾರೆ. ಜಾತಿ ಮತ ಭೇದವಿಲ್ಲದೆ ಸ್ತ್ರೀಪುರುಷರೆಂಬ ತಾರತಮ್ಯ ಇಲ್ಲದೆ ಎಲ್ಲರೂ ಒಂದಾಗಿ ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡಿದ್ದಾರೆ, ಪ್ರಾಣಾರ್ಪಣೆ ಮಾಡಿದ್ದಾರೆ. ಮುಸ್ಲಿಂ ಮಹಿಳೆಯರೇನೂ ಈ ಚಳವಳಿಯಿಂದ ದೂರ ನಿಂತಿಲ್ಲ. ಈ ಸಂದರ್ಭದಲ್ಲಿ ಯಾರಿಗೂ ಕಡಿಮೆಯಿಲ್ಲದಂತೆ ಭಾಗಿಗಳಾಗಿದ್ದಾರೆ. ತಮ್ಮ ಮನೆಯ ಸದಸ್ಯರು ಜೈಲು ಸೇರಬೇಕಾಗಿ ಬಂದಾಗ ಧೈರ್ಯಗೆಡದೆ, ತಾಳ್ಮೆಗೆಡದೆ ತಮ್ಮ ಪಾಲಿಗೆ ಬಂದ ಕೆಲಸವನ್ನು ಸಮರ್ಥವಾಗಿ ನಿಭಾಯಿಸಿದ್ದಾರೆ. ಅದರಲ್ಲೂ ದೇಶಭಕ್ತಿಗೆ ಹೆಸರಾದ 'ಅಲಿ ಸಹೋದರ'ರೆಂದು ಖ್ಯಾತರಾದ ಇಬ್ಬರು ಹೋರಾಟಗಾರರ ತಾಯಿ ಬೀ ಅಮ್ಮ ಅವರ ಪಾತ್ರ ಎಲ್ಲಕ್ಕಿಂತ ಹಿರಿದು. ಭಾರತದಾದ್ಯಂತ ಸಂಚರಿಸಿ ಭಾಷಣ ಮಾಡಿ ಜನರಲ್ಲಿ ಉತ್ಸಾಹ ತುಂಬುತ್ತಿದ್ದ ಈಕೆ ಅನಿ ಬೆಸೆಂಟರ ಬಂಧನವಾದಾಗ ಬರೆದ ಪತ್ರಗಳಿಂದ ಇವರ ದೇಶಪ್ರೇಮದ ಅರಿವಾಗುತ್ತದೆ. ತಾವೂ ಭಾಗಿಗಳಾಗಿ, ತಮ್ಮ ಮಕ್ಕಳನ್ನೂ ಹೋರಾಟಕ್ಕೆ ಅಣಿಗೊಳಿಸಿ, ತಮ್ಮ ಗಂಡಂದಿರನ್ನೂ ಹೋರಾಡಲು ಪ್ರೋತ್ಸಾಹಿಸುವ ಇನ್ನೂ ಅನೇಕ ಮಹಿಳೆಯರ ಪರಿಚಯ ಈ ಕೃತಿಯಲ್ಲಿ ನಮಗಾಗುತ್ತದೆ. ಹೋರಾಟಗಳಿಗೆ ಹಲವು ಬಗೆಗಳಲ್ಲಿ ಸಹಾಯ ಮಾಡಿದವರಿದ್ದಾರೆ, ರಾಷ್ಟ್ರೀಯ ನಾಯಕರ ನಿಕಟವರ್ತಿಗಳಾಗಿದ್ದು ಸಂದೇಶ ರವಾನೆ ಮಾಡಿದವರಿದ್ದಾರೆ. ಆಯುಧವನ್ನು ಝಳಪಿಸುತ್ತ ಹೋರಾಡಿದ ಕೆಚ್ಚೆದೆಯ ಕ್ರಾಂತಿಕಾರಿಗಳೂ ಇದ್ದಾರೆ.*

## ಡಾ॥ ರಾಜಶೇಖರ ಮಠಪತಿ (ರಾಗಂ)ಯವರ ಇಂತಿ..... ನಿನ್ನ ಬಾಪು

*ಸಂಗ್ರಹ : ಪದ್ಮಶ್ರೀ*



**ಪುಟ : xviii + ೧೫೦ = ೧೬೮** **ಬೆಲೆ : ರೂ. ೧೦೦**

**ಕಣ್ವ ಪ್ರಕಾಶನ,** 'ಕಾಲ ಕನಸು', ನಂ. ೮೪, ೧ನೇ ಮುಖ್ಯರಸ್ತೆ, ನಿಸರ್ಗ ಬಡಾವಣೆ, ಚಂದ್ರಾ ಲೇಔಟ್, ಬೆಂಗಳೂರು – ೫೬೦ ೦೭೨

*ಇಂತೀ... ನಿನ್ನ ಬಾಪು – ಇದು ಸಾಮಾನ್ಯವಾಗಿ ಪತ್ರಗಳ ಮುಕ್ತಾಯಕ್ಕೆ ಇರುವ ಒಂದು ಸೊಲ್ಲು. ಇಂದಿನ ಮೊಬೈಲ್ ಸಂಸ್ಕೃತಿಯಲ್ಲಿ ಪತ್ರ ಬರೆಯುವುದು, ಉತ್ತರ ಬರುವುದು ಹೆಚ್ಚು ಕಡಿಮೆ ನಿಂತು ಹೋಗಿದೆಯೆಂದೇ ತಿಳಿಯಲಡ್ಡಿ ಇಲ್ಲ. ಸುಮಾರು ಅರ್ಧ ಶತಮಾನದ ಹಿಂದೆ ಇವೆಲ್ಲ ಅನಿವಾರ್ಯವೇ ಆಗಿತ್ತು. ಪುಟಗಟ್ಟಲೆ ಪತ್ರ ಬರೆಯುವ ಹವ್ಯಾಸವೂ ಇತ್ತು. ಪತ್ರಲೇಖನವೊಂದು ಕಲೆ. ಸ್ವಹಸ್ತಾಕ್ಷರ ಮತ್ತು ಸಹಿಯೊಂದಿಗೆ ಅಂಚೆಯಲ್ಲಿ ಬರುವ ಪತ್ರಗಳ ಹಾದಿಕಾಯುತ್ತಾ ಎಷ್ಟೋ ವೇಳೆ ಚಡಪಡಿಸುತ್ತಿದ್ದುದೂ ಉಂಟು. ಪ್ರಪಂಚದಾದ್ಯಂತ ವಿಶೇಷ ಗೌರವ ಪತ್ರಗಳಿಗೆ ಇತ್ತು. ಗಣ್ಯವ್ಯಕ್ತಿಗಳು ಬರೆದ ಪತ್ರಗಳು ಸಂಗ್ರಹಗೊಂಡು ಪುಸ್ತಕರೂಪದಲ್ಲಿ ಪ್ರಕಟವಾದದ್ದೂ ಇದೆ. ಇಲ್ಲಿ ಸಂಗ್ರಹಗೊಂಡ ವಿಚಾರಗಳು ಮಹಾತ್ಮಾ ಗಾಂಧೀಜಿಯವರು ತಮ್ಮ ಸಮಕಾಲೀನರಿಗೆ ಅಂದು ಬರೆದ ಪತ್ರಗಳ ಸಾರಾಂಶ. ಅವು ಕೇವಲ 'ವಿಷಯ' ತಿಳಿಸುವ ಪತ್ರಗಳಾಗಿರದೆ ಕಿವಿಮಾತುಗಳ ರೂಪದಲ್ಲಿ ನೀಡಿದ ಅನುಭವದ ಮಾತುಗಳು ಮಾತ್ರವಲ್ಲದೆ ಉಪದೇಶದ ನುಡಿಗಳೂ ಆಗಿವೆ. ಶ್ರೇಷ್ಠ ಮೌಲ್ಯಗಳನ್ನೂ ಅವು ಒಳಗೊಂಡಿವೆ. ಎಂಥ ಕ್ರೂರ ಮನಸ್ಸನ್ನೂ ತಿಳಿಗೊಳಿಸುವ, ತಪ್ಪು ಎಸಗಿದವನ ಮನಸ್ಸು ಪರಿವರ್ತನೆಗೊಳ್ಳುವಂಥ ಶಕ್ತಿ ಆ ಮಾತುಗಳಲ್ಲಿರುತ್ತಿತ್ತು. ಬಾಪೂ ಪತ್ರಗಳೆಂದರೆ ಅವು ಅತ್ಯುತ್ತಮ ಜೀವನ ಪಾಠಗಳಾಗಿದ್ದುವು. ಆ ಸಾರಾಂಶಗಳನ್ನು ಸಂಗ್ರಹಿಸಿ ಇಲ್ಲಿ ನೀಡಲಾಗಿದೆ.*

**– ಇಂದಿರಾಕುಮಾರಿ,** *ಯಶವಂತಪುರ, ಬೆಂಗಳೂರು - ೨೨*

# ಸಿರಿಯಾ ಮೇಲೆ ಅಮೆರಿಕದ ತೂಗು ಕತ್ತಿ

ಸಿರಿಯಾದ ಮೇಲೆ ದಾಳಿ ಇರಾಕಿನ ಮೇಲೆ ಎರಗಿದಂತಲ್ಲ. ಅಮೆರಿಕ ಅಂಥ ದುಸ್ಸಾಹಸಕ್ಕೆ ಕೈ ಹಾಕಿದರೆ ಇಡೀ ಪಶ್ಚಿಮ ಏಶಿಯ ಹೊತ್ತಿ ಉರಿಯುವ ಸಾಧ್ಯತೆ ಇದೆ. ಹತ್ತು ವರ್ಷಗಳ ಹಿಂದಿದ್ದ ಪರಿಸ್ಥಿತಿ ಇಂದಿಲ್ಲ. ಜಾಗತಿಕ ಸಮುದಾಯ ಇಂದು ಎಚ್ಚೆತ್ತಿದೆ. ರಷ್ಯಾ, ಚೀಣಾ ಕ್ಷುಲ್ಲಕ ಕಾರಣಕ್ಕಾಗಿ ಅಮೆರಿಕ ಸಿರಿಯಾದ ಮೇಲೆ ದಾಳಿ ನಡೆಸುವುದಕ್ಕೆ ತೀವ್ರವಾದ ವಿರೋಧ ವ್ಯಕ್ತಪಡಿಸಿವೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಅನುಮತಿ ದೊರೆಯದಿರುವುದು ಖಚಿತವಾಗಿರುವುದರಿಂದ ಏಕಪಕ್ಷೀಯವಾಗಿ ಕ್ರಮ ಕೈಗೊಳ್ಳಲು ಅಮೆರಿಕ, ಬ್ರಿಟನ್ ಮತ್ತು ಫ್ರಾನ್ಸ್ ಸಜ್ಜಾಗಿವೆ. ನೌಕಾದಳಗಳನ್ನು ಈ ಪ್ರದೇಶಕ್ಕೆ ರವಾನಿಸಿ ಯಾವ ಕ್ಷಣದಲ್ಲೇ ಆದರೂ ದಾಳಿಗೆ ಸನ್ನದ್ಧವಾಗಿರುವಂತೆ ತಾಕೀತು ಮಾಡಿವೆ. ರಷ್ಯಾ ಕೂಡ ತನ್ನ ಯುದ್ಧ ನೌಕೆಯನ್ನು ರವಾನಿಸಿದೆ. ರಷ್ಯಾ ಮತ್ತು ಚೀಣಾ ಸಿರಿಯಾದ ಅಸ್ಸಾದ್ ಸರಕಾರಕ್ಕೆ ತಮ್ಮ ಬೆಂಬಲ ವ್ಯಕ್ತಗೊಳಿಸಿವೆ.



**ಸೀಯಾರ್ಕೆ**

ಸಿರಿಯಾದ ಮೇಲೆ ಪಾಶ್ಚಾತ್ಯ ರಾಷ್ಟ್ರಗಳ ದಾಳಿ ಸದ್ಯಕ್ಕೆ ಮುಂದೆ ಹೋಗಿದೆ. ರಷ್ಯಾದ ಮಧ್ಯಸ್ಥಿಕೆ, ಭಾರತವನ್ನು ಒಳಗೊಂಡಂತೆ ಪ್ರಪಂಚದ ಬಹುತೇಕ ರಾಷ್ಟ್ರಗಳ ವಿರೋಧ ಇದಕ್ಕೆ ಕಾರಣ. ಸಿರಿಯಾದ ಬಷರ್ ಅಲ್ ಅಸ್ಸಾದ್ ಸರಕಾರ ವಿರೋಧಿಗಳ ಬಂಡಾಯವನ್ನು ದಮನಗೊಳಿಸಲು ರಾಸಾಯನಿಕ ಅಸ್ತ್ರಗಳನ್ನು ಪ್ರಯೋಗಿಸಿದೆ ಎನ್ನುವುದೇ ಆಪಾದನೆ. ಕಳೆದ ಒಂದು ವರ್ಷಕ್ಕೂ ಹೆಚ್ಚು ಕಾಲದಿಂದ ಸಿರಿಯಾದಲ್ಲಿ ಸರಕಾರದ ವಿರುದ್ಧವಾಗಿ ಹೋರಾಟ ನಡೆಯುತ್ತಿದ್ದು, ಅದು ಅಂತರ್ಯುದ್ಧದ ಪರಿಸ್ಥಿತಿ ಮುಟ್ಟಿದೆ. ಬಷರ್ ಅಸ್ಸಾದ್ ಸರಕಾರದ ವಿರುದ್ಧವಾಗಿ ಸಶಸ್ತ್ರ ಸಮರದಲ್ಲಿ ನಿರತವಾಗಿರುವ ವಿರೋಧಿ ಬಣಗಳಿಗೆ ಅಮೆರಿಕ, ಬ್ರಿಟನ್, ಫ್ರಾನ್ಸ್ ಬೇಕಾದಷ್ಟು ಶಸ್ತ್ರಾಸ್ತ್ರಗಳನ್ನೂ ಹಣಕಾಸನ್ನೂ ಇತರ ಬಗೆಯ ಬೆಂಬಲವನ್ನೂ ನೀಡುತ್ತ ಬಂದಿರುವುದು ರಹಸ್ಯವೇನಲ್ಲ. ಅಂತರ್ಯುದ್ಧದಲ್ಲಿ ಹಸ್ತಕ್ಷೇಪ ಮಾಡಲು ಈ ದೇಶಗಳು ಈ ಮೊದಲೂ ಹಾತೊರೆಯುತ್ತಿದ್ದುವು. ಸಿರಿಯಾದ ಸರಕಾರಕ್ಕೆ ಸಾಕಷ್ಟು ಎಚ್ಚರಿಕೆಗಳನ್ನೂ ನೀಡುತ್ತ ಬಂದಿದ್ದವು. ಜಾಗತಿಕ ಸಮುದಾಯದ ಒತ್ತಡದಿಂದಾಗಿ ಅವಕ್ಕೆ ಮಧ್ಯೆ ಪ್ರವೇಶಿಸಲಾಗಲಿಲ್ಲ. ರಾಸಾಯನಿಕ ಅಸ್ತ್ರಗಳ ಬಳಕೆಯ ಆರೋಪ ಸಾಬೀತಾಗಿಲ್ಲ. ಸಿರಿಯಾದ ಸರಕಾರ ಪಾಶ್ಚಾತ್ಯ ರಾಷ್ಟ್ರಗಳ ಈ ಆಪಾದನೆಯನ್ನು ತಳ್ಳಿಹಾಕಿದೆ. ಸರಕಾರದ ವಿರುದ್ಧವಾಗಿ ಸಮರ ನಡೆಸುತ್ತಿರುವ ಭಯೋತ್ಪಾದಕರು ಇಂಥ ಹೀನಕೃತ್ಯ ನಡೆಸಿರಬಹುದು ಎಂದು ಅದು ಹೇಳಿದೆ. ಸಿರಿಯ ಸರಕಾರದ ಈ ಆಪಾದನೆಯನ್ನು ತಳ್ಳಿಹಾಕುವಂತಿಲ್ಲ. ಏಕೆಂದರೆ ಸಿರಿಯ ಸರಕಾರದ ವಿರುದ್ಧವಾಗಿ ಹೋರಾಟ ನಡೆಸುತ್ತಿರುವವರಲ್ಲಿ ಇಸ್ಲಾಮಿಕ್ ಮೂಲಭೂತವಾದಿಗಳು, ಅಲ್‌ಖೈದಾ ಭಯೋತ್ಪಾದಕರು ಹಾಗೂ ಇತರರೂ ಇದ್ದಾರೆ. ಸುದೀರ್ಘವಾದ ಸೆಣಸಾಟದಲ್ಲಿ ನಿರತರಾಗಿರುವ ಈ ಗುಂಪುಗಳವರು ಇಂಥ ದುಷ್ಕೃತ್ಯವನ್ನು ನಡೆಸಿದ್ದರೆ ಆಶ್ಚರ್ಯ ಪಡಬೇಕಾಗಿಲ್ಲ. ವಿಶ್ವಸಂಸ್ಥೆಯ ತನಿಖಾ ವರದಿ ಬಂದಮೇಲೆ ನಿಜಾಂಶ ಹೊರಬಂದೀತೇನೊ, ನೋಡಬೇಕು.

ಇರಾಕ್ ಯುದ್ಧವಾದ ಮೇಲೆ ಪಶ್ಚಿಮ ಏಶಿಯಾದಲ್ಲಿ ಅಮೆರಿಕದ ಮಹತ್ವಾಕಾಂಕ್ಷೆಗಳಿಗೆ ಅಡ್ಡಿಯಾಗಿರುವ ದೇಶಗಳು ಸಿರಿಯ ಮತ್ತು ಇರಾನ್. ಈ ಎರಡು ದೇಶಗಳನ್ನು ಮಣಿಸಿದರೆ ಇಡೀ ಈ ಭೂಭಾಗ ಅಮೆರಿಕದ ನಿಯಂತ್ರಣಕ್ಕೆ ಬರುತ್ತದೆ. ಇರಾಕ್‌ನ ಸದ್ದಾಮ್ ಹುಸೇನ್ ಸರಕಾರ ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ದಾಸ್ತಾನನ್ನು ಹೊಂದಿದೆ ಎನ್ನುವ ಆಪಾದನೆ ಮಾಡಿ ೧೯೯೮ರಲ್ಲಿ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಅನುಮತಿ ಇಲ್ಲದೆ 'ಆಪರೇಷನ್ ಡೆಸರ್ಟ್ ಫಾಕ್ಸ್' ಎಂಬ ಕಾರ್ಯಾಚರಣೆಯಲ್ಲಿ ಅಮೆರಿಕ ಮತ್ತು ಬ್ರಿಟನ್‌ಗಳು ಬಾಂಬಿನ ಮಳೆಗರೆದುವು. ಸಾಮೂಹಿಕ ವಿನಾಶಕಾರಿ ಅಸ್ತ್ರಗಳ ತಯಾರಿಕೆ ಮತ್ತು ದಾಸ್ತಾನಿನ ಮಳಿಗೆಗಳು ಎನ್ನಲಾದುವುಗಳ ಮೇಲೆ ಈ ದಾಳಿ ನಡೆಯಿತು ನಾಲ್ಕು ದಿನಗಳ ಕಾಲ. ಈ ಬಾಂಬು ದಾಳಿ ಒಂದು ರೀತಿಯಲ್ಲಿ ಇರಾಕ್‌ನ ಆಕ್ರಮಣಕ್ಕೆ ಪೂರ್ವಸಿದ್ಧತೆಯಾಗಿತ್ತು. ಇರಾಕನ್ನು ಆಕ್ರಮಿಸಿಕೊಂಡು ಸದ್ದಾಮ್ ಹುಸೇನನನ್ನು ಪದಚ್ಯುತಗೊಳಿಸಿ ಹತ್ಯೆ ಗೈದ ಮೇಲೂ ಕೂಡ



ಅಮೆರಿಕಕ್ಕೆ ಮಾರಕಾಸ್ತ್ರಗಳ ದಾಸ್ತಾನು ಏನೂ ಕಂಡುಬರಲಿಲ್ಲ. ಅಮೆರಿಕದ ದುರಾಕ್ರಮಣದಿಂದ ಈಗ ಇರಾಕ್ ಈಗ ಛಿದ್ರಗೊಳ್ಳುವ ಸ್ಥಿತಿಯನ್ನು ತಲುಪಿದ್ದು, ಅಂತಃಕಲಹದಲ್ಲಿ ಮುಳುಗಿದೆ. ಹೆಚ್ಚುಕಡಿಮೆ ಅಲ್ಲಿ ಪ್ರತಿನಿತ್ಯ ಆತ್ಮಾಹುತಿ ಬಾಂಬು ದಾಳಿ ನಡೆಯುತ್ತಿದ್ದು ಅಮಾಯಕ ಜನ ಸಾವನ್ನಪ್ಪುತ್ತಿದ್ದಾರೆ. ಇಂಥದೇ ಪರಿಸ್ಥಿತಿ ಸಿರಿಯಾದಲ್ಲೂ ಉಂಟುಮಾಡುವುದು ಅಮೆರಿಕದ ಉದ್ದೇಶವೆ ?

ಸಿರಿಯಾದ ಮೇಲೆ ದಾಳಿ ಇರಾಕಿನ ಮೇಲೆ ಎರಗಿದಂತಲ್ಲ. ಅಮೆರಿಕ ಅಂಥ ದುಸ್ಸಾಹಸಕ್ಕೆ ಕೈ ಹಾಕಿದರೆ ಇಡೀ ಪಶ್ಚಿಮ ಏಶಿಯ ಹೊತ್ತಿ ಉರಿಯುವ ಸಾಧ್ಯತೆ ಇದೆ. ಹತ್ತು ವರ್ಷಗಳ ಹಿಂದಿದ್ದ ಪರಿಸ್ಥಿತಿ ಇಂದಿಲ್ಲ. ಜಾಗತಿಕ ಸಮುದಾಯ ಇಂದು ಎಚ್ಚೆತ್ತಿದೆ. ರಷ್ಯಾ, ಚೀಣಾ ಕ್ಷುಲ್ಲಕ ಕಾರಣಕ್ಕಾಗಿ ಅಮೆರಿಕ ಸಿರಿಯಾದ ಮೇಲೆ ದಾಳಿ ನಡೆಸುವುದಕ್ಕೆ ತೀವ್ರವಾದ ವಿರೋಧ ವ್ಯಕ್ತಪಡಿಸಿವೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಅನುಮತಿ ದೊರೆಯದಿರುವುದು ಖಚಿತವಾಗಿರುವುದರಿಂದ ಏಕಪಕ್ಷೀಯವಾಗಿ ಕ್ರಮ ಕೈಗೊಳ್ಳಲು ಅಮೆರಿಕ, ಬ್ರಿಟನ್ ಮತ್ತು ಫ್ರಾನ್ಸ್ ಸಜ್ಜಾಗಿವೆ. ನೌಕಾದಳಗಳನ್ನು ಈ ಪ್ರದೇಶಕ್ಕೆ ರವಾನಿಸಿ ಯಾವ ಕ್ಷಣದಲ್ಲೇ ಆದರೂ ದಾಳಿಗೆ ಸನ್ನದ್ಧವಾಗಿರುವಂತೆ ತಾಕೀತು ಮಾಡಿವೆ. ರಷ್ಯಾ ಕೂಡ ತನ್ನ ಯುದ್ಧ ನೌಕೆಯನ್ನು ರವಾನಿಸಿದೆ. ರಷ್ಯಾ ಮತ್ತು ಚೀಣಾಗಳು ಸಿರಿಯಾದ ಅಸ್ಸಾದ್ ಸರಕಾರಕ್ಕೆ ತಮ್ಮ ಬೆಂಬಲ ವ್ಯಕ್ತಗೊಳಿಸಿವೆ. ಈ ಎಲ್ಲ ಬೆಳವಣಿಗೆಗಳನ್ನು ಗಮನಿಸಿದಾಗ ಮೂರನೇ ಮಹಾಯುದ್ಧದ ಸಾಧ್ಯತೆಯ ಬಗ್ಗೆ ಪ್ರಪಂಚದ ಜನರಲ್ಲಿ ಆತಂಕ ಮೂಡಿದ್ದರೆ ಅಚ್ಚರಿಪಡಬೇಕಾಗಿಲ್ಲ. ಇಡೀ ಮಧ್ಯಪ್ರಾಚ್ಯದಲ್ಲಿ, ಅರಬ್ ಜಗತ್ತಿನಲ್ಲಿ, ಸಾಮಾನ್ಯವಾಗಿ ಇಸ್ಲಾಮಿಕ್ ರಾಷ್ಟ್ರಗಳಲ್ಲಿ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳ ವಿರುದ್ಧವಾಗಿ ಅತೃಪ್ತಿಯ ಹೊಗೆಯಾಡುತ್ತಿದೆ. ಇಸ್ಲಾಮ್ ಧರ್ಮೀಯರಲ್ಲಿ ಒಂದು ಬಗೆಯ ಭ್ರಮ ನಿರಸನ ಮತ್ತು ಉತ್ಪೀಡನಾ ಭ್ರಾಂತಿ ಉಂಟಾಗುವುದನ್ನು ಕಾಣುತ್ತಿದ್ದೇವೆ. ಮೂಲಭೂತವಾದಿಗಳು ಪ್ರಬಲಗೊಂಡು ಮೇಲುಗೈ



ಪುಟಿನ್

ಪಡೆಯುತ್ತಿರುವುದಕ್ಕೆ, ಭಯೋತ್ಪಾದಕ ತಂಡಗಳು ದುಷ್ಕೃತ್ಯಗಳನ್ನು ಎಸಗುತ್ತಿರುವುದಕ್ಕೆ ಇದೂ ಒಂದು ಕಾರಣ ಎನ್ನಬಹುದು. ಅಲ್‌ಖೈದಾ, ತಾಲಿಬಾನ್‌ನಂಥ ಸಂಘಟನೆಗಳ ಕಾರ್ಯಾಚರಣೆಗಳು ಇದಕ್ಕೆ ಸಾಕ್ಷಿ. ಸಿರಿಯಾ ಮೇಲೆ ದಾಳಿ ನಡೆಸುವ ದುಸ್ಸಾಹಸವೇನಾದರೂ ನಡೆದರೆ ಇಂಥ ಉಗ್ರವಾದಿ ಸಂಘಟನೆಗಳಿಗೆ ಮತ್ತಷ್ಟು ಕುಮ್ಮಕ್ಕು ನೀಡಿದಂತಾಗುತ್ತದೆ. ಸಿರಿಯಾದ ಮೇಲೆ ದಾಳಿ ನಡೆದರೆ ಮುಂದಿನ ಸರದಿ ಇರಾನ್. ಅಮೆರಿಕ ಇರಾನ್ ಪರಮಾಣು ಅಸ್ತ್ರಗಳ ತಯಾರಿಕೆಯಲ್ಲಿ ತೊಡಗಿದೆ ಎಂದು ಆಪಾದನೆ ಮಾಡಿ ಕೆಲ ವರ್ಷಗಳಿಂದ ಅಲ್ಲಿನ ಸರಕಾರವನ್ನು ಪದಚ್ಯುತ ಗೊಳಿಸಲು, ಆ ರಾಷ್ಟ್ರದ ಮೇಲೆ ದಾಳಿ ನಡೆಸಲು ಸಂಚು ನಡೆಸುತ್ತಿದೆ.

ಅನ್ಯದೇಶಗಳಲ್ಲಿನ ಆಂತರಿಕ ಸಂಘರ್ಷದಲ್ಲಿ ಹಸ್ತಕ್ಷೇಪ ಮಾಡುವುದು, ಸೈನಿಕ ಕಾರ್ಯಾಚರಣೆ ನಡೆಸುವುದು ಅಮೆರಿಕದ ಚಾಳಿಯಾಗಿಬಿಟ್ಟಿದೆ. ಶೀತಯುದ್ಧದ ಕಾಲದಲ್ಲಿ ಅಮೆರಿಕ ನಡೆಸಿದ ಮಿಲಿಟರಿ ಹಸ್ತಕ್ಷೇಪವನ್ನು ಇಲ್ಲಿ ಪಟ್ಟಿಮಾಡುವುದು ಅನಗತ್ಯ. ಕೊರಿಯ ಯುದ್ಧ, ವಿಯೆಟ್ನಾಮ್ ಯುದ್ಧ ಮುಂತಾದ ದೊಡ್ಡ ಪಟ್ಟಿಯೇ ಉಂಟು. ಈಚಿನ ವರ್ಷಗಳಲ್ಲಿ ಅಂದರೆ, ಕಳೆದ ಇಪ್ಪತ್ತು ವರ್ಷಗಳಲ್ಲಿ ಅಮೆರಿಕದ ಹಸ್ತಕ್ಷೇಪದಿಂದ, ಮಿಲಿಟರಿ ಕಾರ್ಯಾ ಚರಣೆಯಿಂದ ಅಭದ್ರತೆ ಮತ್ತು ಅಸ್ಥಿರತೆ ಹೆಚ್ಚಾಗಿದೆಯೇ ಹೊರತು ಕಮ್ಮಿಯೇನಾಗಿಲ್ಲ. ಸೋವಿಯೆತ್ ಒಕ್ಕೂಟದ ವಿಘಟನೆಯ ನಂತರ ಏಕಕೇಂದ್ರೀಯ ಜಾಗತಿಕ ಶಕ್ತಿಯಾಗಿ ರೂಪುಗೊಂಡ ಮೇಲೆ ಅಮೆರಿಕದ ಉದ್ಧಟತನ ವಿಪರೀತಕ್ಕೆ ಹೋಗಿದೆ. ಪ್ರಜಾಪ್ರಭುತ್ವಕ್ಕೆ ಮಾದರಿಯಾಗುವ ಬದಲು ಅಮೆರಿಕ ಮಿಲಿಟರಿ ಕಾರ್ಯಾಚರಣೆಯ ಬೆದರಿಕೆ ಹಾಕುವ 'ದೊಡ್ಡಣ್ಣ'ನಾಗಿಬಿಟ್ಟಿದೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಅನುಮತಿಯಿಲ್ಲದೆ, ಅಂತರರಾಷ್ಟ್ರೀಯ ಸಮುದಾಯದ ಅಭಿಪ್ರಾಯವನ್ನೂ ಕಡೆಗಣಿಸಿ, ತನ್ನ ಶಾಸಕಾಂಗದ ಅಂಗೀಕಾರವನ್ನೂ ಪಡೆದುಕೊಳ್ಳದೆ ಅನ್ಯದೇಶಗಳ ಮೇಲೆ ಮಿಲಿಟರಿ ಕಾರ್ಯಾಚರಣೆ ನಡೆಸುವುದು ಅಮೆರಿಕಕ್ಕೆ ರೂಢಿಯಾಗಿಬಿಟ್ಟಿದೆ ಈಚೆಗೆ. ೧೯೯೯ರಲ್ಲಿ ಯುಗೋಸ್ಲಾವಿಯಾದ ಮೇಲೆ ನಡೆಸಿದ ದಾಳಿ, ಲಿಬಿಯಾದ ಮೇಲೆ ನಡೆಸಿದ ಬಾಂಬು ದಾಳಿ, ಆಫ್ಘಾನಿಸ್ತಾನದ ದುರಾಕ್ರಮಣ, ಇರಾಕ್ ಆಕ್ರಮಣ ಇವೆಲ್ಲ ಉದಾಹರಣೆಗಳು. ಈ ಬಗೆಯ ದಾಳಿಗಳಲ್ಲಿ ಸಾವಿಗೀಡಾದವರು ಅಮಾಯಕ ಜನರೇ ಹೆಚ್ಚು. ಅಮೆರಿಕ ಹಸ್ತಕ್ಷೇಪ ಮಾಡಿರುವ ಕಡೆಗಳಲ್ಲಿ ಅಸ್ಥಿರತೆ, ಅಭದ್ರತೆ ಅಧಿಕವಾಗಿದೆಯೇ ಹೊರತು ಕಡಿಮೆಯಾಗಿಲ್ಲ. ಜನಜೀವನ ಹಿಂದಿಗಿಂತ ಮತ್ತಷ್ಟು ದುರ್ಭರಗೊಂಡಿದೆ. ಆಫ್ಘಾನಿಸ್ತಾನ, ಇರಾಕ್‌ಗಳು ಅದಕ್ಕೆ ನಿದರ್ಶನ. ಒಂದು ದಶಕ ಕಳೆದರೂ ಆ ದೇಶಗಳು ಇನ್ನೂ ಚೇತರಿಸಿಕೊಳ್ಳಲಾಗಿಲ್ಲ.

ಹಾಲಿ ಚಾಲ್ತಿಯಲ್ಲಿರುವ ಅಂತರರಾಷ್ಟ್ರೀಯ ನಿಯಮ ಬಲಪ್ರಯೋಗಕ್ಕೆ ಕಡಿವಾಣ ಹಾಕಿದೆ.



ಬರಾಕ್ ಒಬಾಮಾ

ಬಲಪ್ರಯೋಗ ಸ್ವರಕ್ಷಣೆಗೆ ಅಗತ್ಯವಿದ್ದಾಗ ಹಾಗೂ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಅನುಮತಿಯ ಮೇರೆಗೆ ಮಾತ್ರ ಸೀಮಿತ. ಉಳಿದದ್ದೆಲ್ಲ ದುರಾಕ್ರಮಣ ಎಂತಲೇ ಪರಿಗಣಿತವಾಗುತ್ತದೆ ವಿಶ್ವಸಂಸ್ಥೆಯ ಪ್ರಣಾಳಿಕೆಯ ಪ್ರಕಾರ. ಸಿರಿಯಾದ ವಿಚಾರದಲ್ಲಿ ಈ ಎರಡು ಷರತ್ತುಗಳು ಅನ್ವಯವಾಗುವುದಿಲ್ಲ. ಏಕಪಕ್ಷೀಯವಾಗಿ ಅಮೆರಿಕ ಕೈಗೊಂಡಿರುವ ನಿರ್ಧಾರ ಇದು. ಅಧ್ಯಕ್ಷ ಬರಾಕ್ ಒಬಾಮಾ ಅಮೆರಿಕದ ಶಾಸಕಾಂಗದ ಅನುಮತಿಯ ಮೇಲೆ ಕ್ರಮ ಕೈಗೊಳ್ಳಲು ನಿರ್ಧರಿಸಿದ್ದಾರೆ. ಇರಾಕ್ ಮೇಲೆ ದಾಳಿ ನಡೆಸಿದಾಗ ಜಾರ್ಜ್ ಬುಷ್ ಈ ಔಪಚಾರಿಕತೆಗೂ ಹೋಗಲಿಲ್ಲ. ಸದ್ಯಕ್ಕೆ ಅಮೆರಿಕದ ಶಾಸಕಾಂಗ ತನ್ನ ಅನುಮತಿಯನ್ನು ಮುಂದೂಡಿದೆ. ಬರಾಕ್ ಒಬಾಮಾ ಅದನ್ನು ಪಡೆದುಕೊಳ್ಳುವುದು ಕಷ್ಟವೇನಿಲ್ಲ. ಇಷ್ಟಕ್ಕೂ ಸಿರಿಯಾದಲ್ಲಿ ನಡೆಯುತ್ತಿರುವುದೇನು ? ಅದು ಪ್ರಜಾಪ್ರಭುತ್ವಕ್ಕಾಗಿ ಸರ್ವಾಧಿಕಾರದ ವಿರುದ್ಧ ನಡೆಯುತ್ತಿರುವ ಆಂದೋಳನವೇನಲ್ಲ. ಸರ್ಕಾರ ಮತ್ತು ಅದರ ವಿರೋಧಿಗಳ ಮಧ್ಯೆ ನಡೆಯುತ್ತಿರುವ ಸಂಘರ್ಷ. ಪಶ್ಚಿಮ ಏಶಿಯದಲ್ಲಿ, ಉತ್ತರ ಆಫ್ರಿಕಾದ ದೇಶಗಳಲ್ಲಿ ಈಚೆಗೆ ಇಂಥ ಸಂಘರ್ಷಗಳು ಜರುಗಿರುವುದನ್ನು, ಜರುಗುತ್ತಿರುವುದನ್ನು ಕಾಣುತ್ತಿದ್ದೇವೆ. ಇದರಲ್ಲಿ ಹೊರಗಿನವರ ಹಸ್ತಕ್ಷೇಪ ಸಲ್ಲದು.

ಮೊದಲೇ ಹೇಳಿರುವಂತೆ ಸದ್ಯಕ್ಕೆ ಸಿರಿಯಾದ ಮೇಲೆ ದಾಳಿ ಇಲ್ಲ. ರಷ್ಯಾದ ಮಧ್ಯಸ್ಥಿಕೆ ಎಷ್ಟುಮಟ್ಟಿಗೆ ಫಲಪ್ರದವಾದೀತು ಎಂದು ಹೇಳಲಾಗುವುದಿಲ್ಲ. ಈ ಮಧ್ಯೆ ವಿಶ್ವಸಂಸ್ಥೆಯ ತನಿಖಾ ತಂಡದ ವರದಿಯೂ ಪ್ರಕಟವಾಗಲಿದೆ. ಅದೇನೆ ಇದ್ದರೂ ಅವು ಅಮೆರಿಕದಿಂದ ಬಲಪ್ರಯೋಗಕ್ಕೆ ಸಮರ್ಥನೆ ಯಾಗುವುದಿಲ್ಲ. ಜಾಗತಿಕ ಸಮುದಾಯ ಮತ್ತು ಪ್ರಪಂಚದ ಜನತೆ ಒಪ್ಪುವುದಿಲ್ಲ. ವಿವಾದವನ್ನು ಸಂಧಾನದ ಮೂಲಕ ಬಗೆಹರಿಸಬೇಕೇ ಹೊರತು ಬಲಪ್ರಯೋಗದಿಂದಲ್ಲ.

ಸೀಯಾರ್ಕೆ
'ಚೌಬೀನ', ನಂ. ೮೪೯, ೭ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫



# ತೊಗಲುಬೊಂಬೆಗೆ ಮರುಜೀವ : ಬೆಳಗಲ್ ವೀರಣ್ಣ

ವೀರಣ್ಣನವರ ಕಲಾಪ್ರಯೋಗಗಳ ಯಶಸ್ಸಿನ ಅಥವಾ ತೊಗಲುಬೊಂಬೆಯ ರೂಪಾಂತರಗಳ ಹಿಂದೆ ಮೂರು ಸಂಗತಿಗಳಿವೆ. ೧. ವೀರಣ್ಣನವರ ವ್ಯಕ್ತಿಪ್ರತಿಭೆ. ೨. ಪರಂಪರೆಯ ಭದ್ರ ಬುನಾದಿ. ೩. ಬಹುಮೂಲದಿಂದ ಬಂದ ಕಸುವಿನ ಧಾರೆಗಳು ಏಕೀಭವಿಸಿದ್ದು. ಪರಂಪರೆಯ ಕಸುವೆಷ್ಟೇ ಇದ್ದರೂ ಸೃಜನಶೀಲವಾದ ವ್ಯಕ್ತಿಪ್ರತಿಭೆಯೊಂದರ ಮಧ್ಯಪ್ರವೇಶವಿಲ್ಲದೆ ಕಲಾಲೋಕದಲ್ಲಿ ದೊಡ್ಡ ಪಲ್ಲಟಗಳು ಸಂಭವಿಸುವುದಿಲ್ಲ; ಹಾಗೆಯೇ ಎಂತಹ ವ್ಯಕ್ತಿಪ್ರತಿಭೆಯಿದ್ದರೂ ಪರಂಪರೆಯಲ್ಲಿ ಆಳವಾಗಿ ಬೇರುಗಳಿಲ್ಲದೆ ಮಾಡುವ ಪ್ರಯೋಗಗಳು ದೊಡ್ಡ ಗೆಲುವನ್ನು ಗಳಿಸುವುದಿಲ್ಲ. ಸಂಪ್ರದಾಯದ ಕಾಂಡವು ಆಧುನಿಕತೆ ಸಹವಾಸದಿಂದಲೂ ಚಾರಿತ್ರಿಕ ಒತ್ತಡದಿಂದಲೂ ಹೊಸ ಚಿಗುರನ್ನು ಕೊನರಿಸತೊಡಗುತ್ತದೆ. ತೊಗಲುಬೊಂಬೆ ವಿಷಯದಲ್ಲಿ ವೀರಣ್ಣನವರ ವ್ಯಕ್ತಿಪ್ರತಿಭೆ, ಪ್ರಯೋಗಶೀಲತೆ ಮತ್ತು ಪರಂಪರೆಯ ಕಸುವುಗಳು ಹೊಸ ಹದದಲ್ಲಿ ಸಮನ್ವಯಗೊಂಡವು.

೧

ಬಹಳ ಹಿಂದೆ, ನಾಡೋಜರಾದ ಬೆಳಗಲ್ ವೀರಣ್ಣನವರ ತೊಗಲುಬೊಂಬೆ ಆಟದ ಪ್ರದರ್ಶನವನ್ನು ನೋಡಿದ್ದೆ. ಆದರೆ ಅವರನ್ನು ನೋಡಲು ಸಾಧ್ಯವಾಗಿರಲಿಲ್ಲ. ಸಾಮಾನ್ಯವಾಗಿ ಬೊಂಬೆಯಾಟದ ಕಲಾವಿದರು ಅದೃಶ್ಯರು. ಯಕ್ಷಗಾನ ಬಯಲಾಟ ಕಂಪನಿ ನಾಟಕಗಳಲ್ಲಿ ನಟರು ತೆರೆಯ ಮುಂದಿದ್ದರೆ, ಇಲ್ಲಿ ಬೊಂಬೆಗಳೇ ಮುಂದಿದ್ದು, ಅವನ್ನು ಆಡಿಸುವ ಕಲಾವಿದರು ಹಾಡುತ್ತ ಮಾತಾಡುತ್ತ ತೆರೆಮರೆಯಲ್ಲಿ ಅಡಗಿರುತ್ತಾರೆ. ಹೀಗೆ ಸದಾ ತೆರೆಮರೆಯಲ್ಲೇ ಇರುವ ವೀರಣ್ಣನವರ ಜತೆ ಈಚೆಗೆ ಅರ್ಧದಿನ ಕಳೆಯುವ ಅವಕಾಶ ಒದಗಿತು. ಅದೊಂದು ಅಪೂರ್ವ ಅನುಭವ.

ಉದ್ದನೆಯ ಬಿಳಿಯ ಜುಬ್ಬ ಮತ್ತು ಕಚ್ಚೆಪಂಚೆ ಧರಿಸಿದ್ದ ಆರಡಿ ಆಳು; ಎಂಬತ್ತಕ್ಕೆ ಅಡರುತ್ತಿರುವ ಮುಪ್ಪಿನಿಂದ ತುಸು ದಣಿದಂತೆ ಕಾಣುವ ಕಾಯ; ಗುಂಗುರು ಕೂದಲನ್ನು ಹಿಂದಕ್ಕೆ ಬಾಚಿದ ತಲೆ; ಅಗಲವಾದ ಹಣೆಯಲ್ಲಿ ಮಂಕಾಗಿರುವ ವಿಭೂತಿ; ಕೊಂಚ ಉಬ್ಬಿದ ಹಲ್ಲುಗಳ ನಗುಮುಖ; ಮಾತಾಡಿದರೆ ಮುಚ್ಚಿದ ಕೋಣೆಯಲ್ಲಿ ಶಂಖ ಊದಿದಂತೆ ಹೊರಡುವ ಗಂಭೀರ ಸ್ವರ; ಕುಳಿತಲ್ಲೇ ರಂಗಭೂಮಿ ನಿರ್ಮಿಸಿಬಿಡುವ ಕುಶಲತೆ; ಇರುವ ಸೌಲಭ್ಯಗಳಲ್ಲೇ ನೆಮ್ಮದಿಸುವ ಸರಳತೆ – ಮೊದಲ ಭೇಟಿಯಲ್ಲಿಯೇ ಒಡನಾಟಕ್ಕೆ ಸಿಲುಕಿದವರನ್ನು ಸೆಳೆದುಕೊಳ್ಳುವ ಚಹರೆ ವೀರಣ್ಣನವರದು.

ಮರಾಠಿ ಮನೆಮಾತಿನ 'ಬೊಂಬೆರಾಮ', 'ಕಿಳ್ಳೇಕ್ಯಾತ' ಎಂದು ಕರೆಯಲಾಗುವ ಸಮುದಾಯಕ್ಕೆ ಸೇರಿದ ಶ್ರೀ ವೀರಣ್ಣನವರು, ಕುಲಕಸುಬಾಗಿ ಬಂದಿದ್ದ ತೊಗಲುಬೊಂಬೆ ಆಟವನ್ನು ತ್ಯಜಿಸಿ, ಕಂಪನಿ ರಂಗಭೂಮಿಗೆ ತಮ್ಮ ಪ್ರಾಯದ ದಿನಗಳಲ್ಲೇ ವಲಸೆ ಹೋಗಿದ್ದವರು. ಆದರೆ ಅವರು ಆಕಸ್ಮಿಕವಾಗಿ ಮತ್ತು ನಾಟಕೀಯವಾಗಿ ವೃತ್ತಿರಂಗಭೂಮಿಯಿಂದ ತೊಗಲುಬೊಂಬೆಗೆ ಮರಳಿ ಬರಬೇಕಾಯಿತು. ಇದು ಅವರ ಬಾಳಿನಲ್ಲಿ ಘಟಿಸಿದ ನಿರ್ಣಾಯಕ ತಿರುವಾಗಿತ್ತು. ಈ ತಿರುವಿಗೆ ಕಾರಣರಾದವರು, ಆಗಿನ ಕನ್ನಡ ಸಂಸ್ಕೃತಿ ಇಲಾಖೆಯ ನಿರ್ದೇಶಕ ವಿಜಯ ಸಾಸನೂರರು. ದಿವಂಗತ ಸಾಸನೂರರ ಪ್ರೇರಣೆಯಿಂದ ವೀರಣ್ಣನವರು ಬೆಂಗಳೂರಿನ ರವೀಂದ್ರ ಕಲಾಕ್ಷೇತ್ರದಲ್ಲಿ 'ಪಂಚವಟಿ' ಪ್ರಸಂಗದ ಪ್ರಯೋಗ (೧೯೮೦) ಮಾಡಿದರು. ಇದು

**ಡಾ॥ ರಹಮತ್ ತರೀಕೆರೆ**



ತೊಗಲುಬೊಂಬೆ ಕಲೆಯಲ್ಲಿ ಹೊಸಹಾದಿಯನ್ನೇ ತೆರೆಯಿತು; ಅವರನ್ನೂ ತೊಗಲುಬೊಂಬೆಯನ್ನೂ ಶಾಪದಿಂದ ಬಿಡುಗಡೆ ಮಾಡಿತು. (ರಾಮಾಯಣ ಕಾಲದ ಗುಹನ ವಂಶಜರಾದ ಬೊಂಬೆರಾಮರು ರಾಮನ ಶಾಪದಿಂದ ಈ ಆಟವನ್ನು ಆಡಬೇಕಾಯಿತು ಎಂಬ ಮಿತ್ ಕೂಡ ಇದೆ.) ಮುಂದೆ ಅವರ ತೊಗಲುಬೊಂಬೆಗಳು ದೇಶವಿದೇಶಗಳ ಸುತ್ತಾಟವನ್ನು ಆರಂಭಿಸಿದವು. ಈ ಎಲ್ಲದರ ಯಶೋಕಳೆ ವೀರಣ್ಣನವರ ಮೊಗದಲ್ಲಿ ಢಾಳಾಗಿ ಬೆಳಗುತ್ತಲಿತ್ತು.

ಆದರೆ ಈ ಯಶಸ್ಸು ವೀರಣ್ಣನವರಿಗೆ ಸುಲಭದಲ್ಲಿ ದಕ್ಕಲಿಲ್ಲ. ಇದಕ್ಕಾಗಿ ಅವರು ದೊಡ್ಡ ಹೋರಾಟವನ್ನೇ ಮಾಡಬೇಕಾಯಿತು. ವೀರಣ್ಣನವರು ತಮ್ಮ ಪ್ರಾಯದಲ್ಲಿ ತೊಗಲುಬೊಂಬೆಗಳಿಂದ ತಪ್ಪಿಸಿಕೊಂಡು ವೃತ್ತಿರಂಗಭೂಮಿಗೆ ವಲಸೆಹೋಗಿದ್ದು, ಮರಳಿ ತೊಗಲುಬೊಂಬೆಗೆ ಆಗಮಿಸಿದ್ದು, ಸರ್ಕಾರಿ ಸಂಸ್ಥೆಯೊಂದರ ಪ್ರೇರಣೆಯಿಂದ ಗೊಂಬೆಯಾಟಕ್ಕೆ ಹೊಸ ರೂಪಾಂತರ ಕೊಟ್ಟಿದ್ದು ಮತ್ತು ದೇಶಾಂತರ ತಿರುಗಿದ್ದು – ಈ ನಾಲ್ಕು ವಿದ್ಯಮಾನಗಳು, ಸಾಂಪ್ರದಾಯಿಕ ಸಮಾಜ ಮತ್ತು ಕೆಳಜಾತಿಯ ಕಲಾವಿದರ, ಸಂಪ್ರದಾಯ ಮತ್ತು ಆಧುನಿಕತೆಗಳ, ಪರಂಪರೆ ಮತ್ತು ಹೊಸ ಪ್ರಯೋಗಗಳ ನಡುವಣ ಸಂಘರ್ಷ ಮತ್ತು ಹೊಂದಾಣಿಕೆಗಳ ಹಲವು ಗುಟ್ಟುಗಳನ್ನು ಒಳಗೊಂಡಂತಿವೆ.

ಮೊದಲಿಗೇ ಹುಟ್ಟುವ ಮೂಲಭೂತ ಪ್ರಶ್ನೆಗಳೆಂದರೆ, ಜನರಾಗಲಿ ಕಲಾವಿದರಾಗಲಿ ಕುಲಕಸುಬು ಇಲ್ಲವೇ ಕುಲಕಲೆಗಳಿಗೆ ಯಾಕೆ ಬೆಂಗೊಡುತ್ತಾರೆ? ಅವರನ್ನು ತಾಯಂತೆ ಕೈಹಿಡಿದ ಕಲೆ ಅಥವಾ ಕಸುಬು ಒಂದು ಹಂತದಲ್ಲಿ ಯಾಕೆ ಉಸಿರುಗಟ್ಟಿಸಿ ಕೊಲ್ಲುವ ರಕ್ಕಸಿಯಾಗುತ್ತದೆ? ಅವರು ಒಂದೊಮ್ಮೆ ತಮ್ಮ ಕುಲಕಸುಬಿಗೆ ಇಲ್ಲವೆ ಕುಲಕಲೆಗೆ ಮರಳಿ ಅದಕ್ಕೊಂದು ಹೊಸ ರೂಪಧಾರಣೆ ಮಾಡುವುದಾದರೆ, ಆಧುನಿಕತೆ ಹೇಗೆ ನೆರವಾಗುತ್ತದೆ? ಕಲೆಯನ್ನು ಅದರ ಚಾರಿತ್ರಿಕ ಮತ್ತು ಕಲಾತ್ಮಕ ಬಿಕ್ಕಟ್ಟುಗಳಿಂದ ಪಾರುಗಾಣಿಸುವ ತ್ರಾಣ ಆಧುನಿಕತೆಯೊಂದಕ್ಕೇ ಇದೆಯೊ ಅಥವಾ ಅದರಲ್ಲಿ ಮಧ್ಯಪ್ರವೇಶಿಸುವ ವ್ಯಕ್ತಿಪ್ರತಿಭೆಗಿದೆಯೊ? ಸಮುದಾಯದ ಕಲೆಯೊಂದು ನಾಗರಿಕ ಸಮಾಜದಲ್ಲಿ ಹೊಸಸ್ವೀಕಾರ ಪಡೆಯಲು ಕಾರಣ, ಪ್ರೇಕ್ಷಕರ ಮನೋಭಾವದಲ್ಲಿ ಉಂಟಾದ ಪಲ್ಲಟಗಳೊ ಅಥವಾ ಕಲೆಯಲ್ಲಿ ಸಂಭವಿಸಿದ ಹೊಸ ರೂಪಾಂತರವೊ? ಕಲೆಯೊಂದರ ನವರೂಪಾಂತರದಲ್ಲಿ ಪ್ರಭುತ್ವ ಮತ್ತು ಅದರ ಅಂಗಸಂಸ್ಥೆಗಳು ವಹಿಸುವ ಪಾತ್ರವೇನು? ವಿದೇಶಿಗರು ನಮ್ಮ ಸಾಂಪ್ರದಾಯಿಕ ಕಲೆಯನ್ನು ಮೆಚ್ಚಿದರೆಂದು ನಾವೂ ಮೆಚ್ಚುತ್ತಿದ್ದೇವೆಯೇ? ನಮ್ಮ ಪರಿಸರದಲ್ಲಿರುವ ಈ ಕಲೆಗಳ ಬಗ್ಗೆ ನಮ್ಮ ಕಣ್ಣನ್ನು ತೆರೆಸುವ ಸಂಗತಿ ಯಾವುದು? ಈ ಕೆಲವು ಪ್ರಶ್ನೆಗಳ ಮೂಲಕ ವೀರಣ್ಣನವರ ಕಲಾಯಾನದ ಚರಿತ್ರೆಯನ್ನು ಪರಿಶೀಲಿಸಬಹುದು.

೨

ಯಾವುದೇ ಕೆಳಸ್ತರದ ಸಮುದಾಯಗಳು ತಮ್ಮನ್ನು ಪೋಷಿಸಿದ ವೃತ್ತಿ ಅಥವಾ ಕಲೆಗೆ ಬೆಂಗೊಟ್ಟು ಹೋಗಲು ಎರಡು ಮುಖ್ಯ ಕಾರಣಗಳಿರುತ್ತವೆ.

ಮೊದಲನೆಯದಾಗಿ – ಕಲೆಯನ್ನು ತನ್ನ ಭಾಗವಾಗಿಸಿಕೊಂಡಿದ್ದ ಸಾಂಪ್ರದಾಯಿಕ ಸಮಾಜವು ಸ್ವತಃ ಶಿಥಿಲಗೊಂಡು ಆ ಕಲೆಯನ್ನು ತಬ್ಬಲಿಗೊಳಿಸುವುದು. ತೊಗಲುಬೊಂಬೆ ವಿಷಯದಲ್ಲಿ ಹೇಳುವುದಾದರೆ, ಅದು ಮೂಲತಃ ಬಿಸಿಲು ಪ್ರದೇಶದ ಕಲೆ. (ತೊಗಲು ತೇವಾಂಶದಿಂದ ಹಾಳಾಗುವುದರಿಂದಲೇ ಈ ಆಟ ಮಲೆನಾಡು ಕರಾವಳಿಗಳಲ್ಲಿಲ್ಲ. ಜನಪದ ಕಲೆಗಳಿಗೂ ಭೌಗೋಳಿಕ ಪರಿಸರಕ್ಕೂ ಕರುಳಬಳ್ಳಿಯ ಹಾಗೆ ನಂಟಿದೆ.) ತೊಗಲುಬೊಂಬೆ ಆಡಿಸಿದರೆ ಮಳೆ ಬರುತ್ತದೆ ಅಥವಾ ಸಮೃದ್ಧ ಫಸಲು ಬರುತ್ತದೆ ಎಂಬ ನಂಬಿಕೆಗೂ, ಕಡಿಮೆ ಮಳೆಬೀಳುವ ಕಡಪ, ಅನಂತಪುರ, ಬಳ್ಳಾರಿ, ಚಿತ್ರದುರ್ಗ, ನಾಗಮಂಗಲದಂತಹ ಪ್ರದೇಶಗಳಲ್ಲಿ ಈ ಕಲೆಯಿರುವುದಕ್ಕೂ ಸಂಬಂಧವಿದ್ದಂತಿದೆ. ಇಂತಹ ನಂಬಿಕೆ ಮತ್ತು ಸಂಬಂಧಗಳಿದ್ದ ಗ್ರಾಮೀಣ ರೈತಾಪಿ ವರ್ಗದ ಬದುಕು, ಬಹುಶಃ ೧೯೫೦ರ ಬಳಿಕ ಬದಲಾಗತೊಡಗಿತು. ಅದರಲ್ಲೂ ಬಳ್ಳಾರಿ ಸೀಮೆಯ ಪ್ರದೇಶವು ತುಂಗಭದ್ರಾ ನೀರಾವರಿಗೆ ಒಳಪಟ್ಟ ಬಳಿಕ ರೈತರು ಹೊಸ ಬೆಳೆಪದ್ಧತಿಗಳಿಗೆ ಹೋದರು. ಬೇಸಾಯ ಪದ್ಧತಿಯಲ್ಲಿ ಉಂಟಾದ ಈ ಪಲ್ಲಟ ಮತ್ತು ಕೃಷಿಯ ಬಿಕ್ಕಟ್ಟುಗಳು ಇಂತಹ ಕಲೆಗಳ ಮೇಲೂ ಪ್ರಭಾವ ಬೀರಿದಂತೆ ಕಾಣುತ್ತದೆ. ಹೀಗಾಗಿ ತೊಗಲುಬೊಂಬೆ ಕಲಾವಿದರು ಹೊಸ ಆಶ್ರಯತಾಣವನ್ನು ಹುಡುಕಿಕೊಳ್ಳುವ ಇಲ್ಲವೇ ಕಸುಬನ್ನೇ ಕೈಬಿಡುವ ಒತ್ತಡಕ್ಕೆ ಒಳಗಾಗಿರಬಹುದು. ಕಲಾವಿದರು–ಕಲೆ–ಸಮಾಜಗಳ ನಡುವಣ ಪೋಷಕ–ಪೋಷಿತ ಸಂಬಂಧ ಶಿಥಿಲಗೊಂಡ ಇಂತಹ ಚಾರಿತ್ರಿಕ ಕಾಲಘಟ್ಟದಲ್ಲಿ, ವೀರಣ್ಣನವರು ತೊಗಲುಬೊಂಬೆ ಆಟವನ್ನು ತ್ಯಜಿಸಿ, ಜಾತಿ ಚಹರೆಗಳಿಲ್ಲದ ವೃತ್ತಿರಂಗಭೂಮಿಯ ಲೋಕಕ್ಕೆ ಪ್ರವೇಶಿಸಿದ್ದು ಸಹಜವಾಗಿದೆ.

ಎರಡನೆಯದಾಗಿ – ಕಲಾವಿದ ಸಮುದಾಯವು ತನ್ನ ಸ್ವಾಭಿಮಾನಕ್ಕೆ ಧಕ್ಕೆ ತರುವ ಕಲೆಗಳನ್ನು ನಿಷ್ಠುರವಾಗಿ ತ್ಯಜಿಸುವುದು. ಸಾಮಾಜಿಕ ಮತ್ತು ಆರ್ಥಿಕವಾಗಿ ತಳಸ್ತರದಿಂದ ಬಂದ ಕಲಾವಿದರ ಪಾಲಿಗೆ, ಕಲೆಗಳ ಮೂಲಕ ಸಾಮಾಜಿಕವಾದ ಮನ್ನಣೆ ಮತ್ತು ಮುಜುಗರಗಳು ಒಟ್ಟಿಗೆ ಬರುತ್ತವೆ. ಕಲಾವಿದರು, ಊರಗೌಡನ ಅನುಮತಿ ಪಡೆದು ಆಟವಾಡಿಸಿ ದವಸ ಪಡೆಯುವ, ಮದುವೆ ಮನೆ ಅಥವಾ ಜಾತ್ರೆಗಳಲ್ಲಿ ಆಡಿಸಿ ಜನರನ್ನು ರಂಜಿಸುವ ಕಾಯಕದಲ್ಲಿ ತಿರುಗಾಟ ಮಾಡುತ್ತ ಬದುಕುವ ವರ್ತುಲದಿಂದ ಹೊರಬರುವುದು ಎಂದರೆ, ಅಭದ್ರತೆಗೆ ಕಾಲಿಡುವುದು ಮತ್ತು ಬಿಡುಗಡೆಯ ಹೋರಾಟಕ್ಕೆ ಒಡ್ಡಿಕೊಳ್ಳುವುದು. ಕುಲಕಲೆಗಳಿಗೆ ಪರಂಪರೆಯಿಂದ ಬಂದ ಜ್ಞಾನ ಮತ್ತು ಕುಶಲತೆಗಳು ಒಳಕಸುವನ್ನೇನೊ ಕೊಡುತ್ತವೆ. ಆದರೆ ಈ ಒಳಕಸುವು ಆಯಾ ಸಮುದಾಯದ ವ್ಯಕ್ತಿಪ್ರತಿಭೆಗಳನ್ನು ಸಾಮಾಜಿಕ ಕೀಳರಿಮೆಯಲ್ಲಿ ಉಳಿಸಿಬಿಡುತ್ತದೆ. ಅರ್ಧಶತಮಾನದ ಹಿಂದೆ, ಆರ್ಥಿಕವಾಗಿ ಸಾಮಾಜಿಕವಾಗಿ ಮೇಲ್‌ಸ್ತರದಿಂದ ಬಂದವರಿಗೆ ರಂಗಭೂಮಿಯಂತಹ 'ಕೆಳ'ಸ್ತರ ಪ್ರವೇಶಿಸುವುದು ಕಲಾಸಾಹಸ ಎನಿಸಿರಬಹುದು. (ವೀರಣ್ಣನವರ ಗುರುಗಳಾದ ಸಿಡಗಿನಮಳೆ ಚಂದ್ರಯ್ಯ ಹಾಗೂ ಜೋಳದರಾಶಿಯವರ ಜೀವನವೇ ಇದಕ್ಕೆ ಸಾಕ್ಷಿ.) ಆದರೆ ಕಲಾವಂತ ಸಮುದಾಯದಲ್ಲಿ ಹುಟ್ಟಿ ಹೊಸಬದುಕಿಗೆ ಹಾತೊರೆಯುವ ತುರಿಸುಳ್ಳವರಿಗೆ ಅವರ ಕುಲಕಲೆಗಳು ಕೈಕೋಳವಾಗಿ ತೋರುವುವು.




ಸಾಂಪ್ರದಾಯಿಕ ಸಮಾಜದಿಂದ ಕಲೆಯ ಮೂಲಕ ಸಿಗುತ್ತಿದ್ದ ಭದ್ರತೆಯೂ ಬಂಧನವೆನಿಸತೊಡಗುತ್ತದೆ. ಆಧುನಿಕ ಬದುಕಿಗೆ ತೆರೆದುಕೊಂಡ ಹೊಸ ತಲೆಮಾರು, ತಮ್ಮ ಚಲನೆಗೆ ಕುಲಕಲೆಗಳೇ ತೊಡಕಾಗಿವೆಯೆಂದು ಪರಿಭಾವಿಸಿ, ಅವುಗಳಿಂದ ದೂರವಾಗಲು ಯತ್ನಿಸುತ್ತದೆ. ಕಲೆಗೆ ಕರ್ಣಕವಚದಂತೆ ಅಂಟಿರುವ ಸಾಮಾಜಿಕ ಹೊರೆಯನ್ನು ಕಳಚಿ ಎಸೆಯಲು ವ್ಯಕ್ತಿವಿಶಿಷ್ಟತೆಯುಳ್ಳ ಜೀವ ತವಕಿಸುತ್ತದೆ. ಹೆಚ್ಚಿನ ಆದಾಯ ಕೊಡದಿದ್ದರೂ ಸ್ವಾಭಿಮಾನಕ್ಕೆ ಧಕ್ಕೆ ತಾರದ ಉದ್ಯೋಗಗಳತ್ತ ಚಲಿಸುತ್ತದೆ. 'ಸನಾದಿ ಅಪ್ಪಣ್ಣ' ಚಿತ್ರದಲ್ಲಿ ಅಪ್ಪಣ್ಣನ ಮಗನ ಸನಾದಿ ದ್ವೇಷವನ್ನು ಅರ್ಥಮಾಡಿಕೊಳ್ಳಬೇಕಾದ್ದು ಹೀಗೆಯೇ. ಬಹುಶಃ ವೀರಣ್ಣನವರಿಗೆ ತೊಗಲುಬೊಂಬೆಯಿಂದ ದೂರವಾಗಲು ಮೇಲ್ಕಾಣಿಸಿದ ಕಾರಣದ ಜತೆಗೆ, ಅವರ ಕಾಲದಲ್ಲಿ ಬಳ್ಳಾರಿ ರಾಘವ, ಜೋಳದ ರಾಶಿ ದೊಡ್ಡನಗೌಡ, ಸಿಡಗಿನಮಳೆ ಚಂದ್ರಯ್ಯ ಮುಂತಾದ ತಾರಾಮೌಲ್ಯದ ರಂಗನಟರಿಂದಲೂ

ಕವಿಗಳಿಂದಲೂ ಕೂಡಿದ್ದ ವೃತ್ತಿರಂಗಭೂಮಿ ಆಕರ್ಷಣೆಯೂ ಕೆಲಸ ಮಾಡಿರಬಹುದು.

೨೦ನೇ ಶತಮಾನದ ಮೊದಲರ್ಧದಲ್ಲಿ ವೃತ್ತಿ ರಂಗಭೂಮಿಗೂ 'ಅದು ಸಭ್ಯರು ಪ್ರವೇಶಿಸುವ ಕಲೆಯಲ್ಲ' ಎಂಬ ಅಘೋಷಿತ ಸಾಮಾಜಿಕ ಮನೋಭಾವವಿತ್ತು. ಆದರೂ ಅದು ಎಲ್ಲ ಸಮುದಾಯಗಳು ತೊಡಗಿಕೊಳ್ಳುವ ಕಲೆಯಾಗಿ ಬದಲಾಯಿತು. ವೃತ್ತಿರಂಗಭೂಮಿಯು ಸಿನಿಮಾ ಉದ್ಯಮವಾಗಿ ರೂಪಾಂತರಗೊಳ್ಳತೊಡಗಿದ ಬಳಿಕ ಅದರ ಸಾಮಾಜಿಕ ಶಾಪವಿಮೋಚನೆಯ ಕಾರ್ಯವೂ ಆಯಿತು. ಆದರೆ ವೃತ್ತಿರಂಗಭೂಮಿಗೆ ಸಿಕ್ಕ ಈ ಚಲನೆ, ಅನೇಕ ಕುಲಕಲೆಗಳಿಗೆ ಅಥವಾ ಸಮುದಾಯ ರಂಗಭೂಮಿಗಳಿಗೆ ಸಿಗಲಿಲ್ಲ. ತೊಗಲುಬೊಂಬೆಯು ರಾಮಾಯಣ ಮಹಾಭಾರತದ ಪ್ರಸಂಗಗಳ ಕಾರಣದಿಂದ ಧಾರ್ಮಿಕವಾಗಿದ್ದರೂ, ಅದು ಪ್ರಾಣಿಚರ್ಮದ ಜತೆ ಸಂಬಂಧವಿದ್ದ ಕಾರಣದಿಂದಲೊ ಏನೊ, ಅಸ್ಪೃಶ್ಯತೆಯಿಂದ ಮುಕ್ತವಾಗಲಿಲ್ಲ. ಸಾಮಾಜಿಕವಾಗಿ ದ್ವೀಪವಾಗಿಯೇ ಮುಂದುವರಿಯುವ ಈ ಇಕ್ಕಟ್ಟನ್ನು ಗೊಂದಲಿಗರು, ಕಿನ್ನರಿಜೋಗಿಗಳು, ವೇಷಗಾರರು, ಬುರ್ರಕಥೆಯವರು, ಜಾತಿಗಾರರು ಈಗಲೂ ಎದುರಿಸುತ್ತಿದ್ದಾರೆ. ಅಲ್ಲಿ ಹೊಸತಲೆಮಾರು ಕುಲಕಲೆಯನ್ನು ನಿಷ್ಠುರವಾಗಿ ಬಿಟ್ಟುಕೊಡುತ್ತಿದೆ.

ಆದರೆ ಈ ಕುಲಕಲೆಗಳಿಗೆ ಅದೇ ಸಮುದಾಯದ ಪ್ರತಿಭಾವಂತರು, ಹೊಸ ವೈಚಾರಿಕತೆ, ಆಧುನಿಕ ಪ್ರಜ್ಞೆ ಮತ್ತು ಪ್ರಯೋಗಶೀಲ ತುಡಿತದೊಂದಿಗೆ ಮರುಪ್ರವೇಶ ಮಾಡಿದರೆ, ಅವಕ್ಕೆ ಮರುಹುಟ್ಟು ಸಂಭವಿಸಬಲ್ಲದು; ಆಗ ಅದು ಕಲಾವಿದರು ಸ್ವತಃ ಸೃಜನಶೀಲಗೊಳ್ಳುವ ಮತ್ತು ತಮ್ಮ ಕುಲಕಲೆಯನ್ನು ಸಾಮಾಜಿಕ ಒಂಟಿತನದಿಂದ ಬಿಡುಗಡೆಗೊಳಿಸುವ ಯತ್ನವಾಗಬಲ್ಲದು. ತೊಗಲುಬೊಂಬೆಗೆ ವೀರಣ್ಣನವರು ಮಾಡಿದ ಪ್ರಯೋಗಗಳಲ್ಲಿ ಇಂತಹ ಮರುಹುಟ್ಟು ಸಂಭವಿಸಿತು. ಇದಕ್ಕಾಗಿ ಅವರು ಮಾಡಿದ ಕಾಯಕಲ್ಪದಲ್ಲಿ ಕೆಲವು ಕ್ರಾಂತಿಕಾರಿ ಅಂಶಗಳಿದ್ದವು. ಅವೆಂದರೆ :

೧. ಅವರು ಹಳ್ಳಿಯ ಗುಡಿಕಟ್ಟೆಗಳಲ್ಲಿ, ಗೌಡರ ಮನೆಯಂಗಳದಲ್ಲಿ ಹಳ್ಳಿಯ ಜನರ ಮುಂದೆ ಆಡುತ್ತಿದ್ದ ಆಟವನ್ನು ಮಹಾನಗರದ ರಂಗಮಂದಿರವೊಂದಕ್ಕೆ ತೆಗೆದುಕೊಂಡು ಹೋಗಿದ್ದು ಹಾಗೂ ಅದನ್ನು ನಗರದ ಆಧುನಿಕ ಪ್ರೇಕ್ಷಕರಿಗೆ ತೋರಿಸಿದ್ದು. ವೀರಣ್ಣನವರು ನಗರ ಪ್ರೇಕ್ಷಕರಿಗಾಗಿ ಮಾಡಿದ ಈ ಪ್ರಯೋಗವು ರವೀಂದ್ರನಾಥ ಟಾಗೂರರ ಹೆಸರಲ್ಲಿರುವ 'ರವೀಂದ್ರ ಕಲಾಕ್ಷೇತ್ರ'ದಲ್ಲಿ ಜರುಗಿದ್ದು ಅರ್ಥಪೂರ್ಣವಾಗಿದೆ. ಕಾರಣ, ಟಾಗೂರರು ಸ್ವತಃ ಬಂಗಾಳದ ಜನಪದ ಸಂಗೀತದಿಂದ ತಮ್ಮ ಆಧುನಿಕ ಕಾವ್ಯಕ್ಕೆ ರಾಗವನ್ನು, ಬಂಗಾಳದ ಬಾವುಲರಿಂದ ತಮ್ಮ ಚಿಂತನೆಗೆ ದರ್ಶನವನ್ನು ಪಡೆದು ಪ್ರಯೋಗ ಮಾಡಿದವರು. ಈಗಲೂ ಶಾಂತಿನಿಕೇತನದಲ್ಲಿ ಬಂಗಾಳದ ಜನಪದ ಕಲೆಗಳು ಆಧುನಿಕ ಪ್ರೇಕ್ಷಕರ ಮುಂದೆ ಪ್ರದರ್ಶನವಾಗುವ ಒಂದು ಉತ್ಸವ ನಡೆಯುತ್ತದೆ.

೨. ಪರಂಪರಾಗತ ಕಲೆಯೊಂದರ ಮರುಹುಟ್ಟಿಗೆ ಕಲಾವಿದನಿಗೆ ಸರ್ಕಾರದ ಸಾಂಸ್ಕೃತಿಕ ಸಂಘಟನೆಗಳು ನೆರವಾಗುವುದು. ಸಾಸನೂರರಂತೆ ವೀರಣ್ಣನವರು ಮಾಡಿದ ಪ್ರಯೋಗಗಳಲ್ಲಿ ಸಾಂಸ್ಥಿಕ ನೆರವು ಬೆಂಬಲ ಕೊಟ್ಟವರು ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಅಧ್ಯಕ್ಷರಾಗಿದ್ದ ಕಮಲಾದೇವಿ ಚಟ್ಟೋಪಾಧ್ಯಾಯ ಅವರು ಹಾಗೂ ಕರ್ನಾಟಕದ ಜಾನಪದ ಅಕಾಡೆಮಿಯ ಎಚ್. ಎಲ್. ನಾಗೇಗೌಡರು. ಇದು ಗ್ರಾಮೀಣ ಸಮಾಜದ ಅವಲಂಬನೆಯಿಂದ ಕಲೆಯನ್ನು ಬಿಡಿಸಿ ಸರ್ಕಾರ ಮತ್ತು ಅದರ ಸಾಂಸ್ಕೃತಿಕ ಅಂಗಸಂಸ್ಥೆಗಳ ಪೋಷಣೆಯನ್ನು ಒದಗಿಸಿದ್ದನ್ನು ಸೂಚಿಸುತ್ತದೆ. ಇದು ಕಲೆಯನ್ನು ಸೀಮಿತ ನೆಲೆಯಿಂದ ವಿಶಾಲ ನೆಲೆಗೆ ಜಾಗಾಂತರ ಮಾಡುವ ಪ್ರಕ್ರಿಯೆಯೂ ಆಗಿತ್ತು.

೩. ಇಡೀ ರಾತ್ರಿ ಜರುಗುತ್ತಿದ್ದ ಗೊಂಬೆಯಾಟವನ್ನು ಎರಡು ಗಂಟೆಗೆ ಇಳಿಸಿದ್ದು. ಇದು ನಗರದ ಮಧ್ಯಮವರ್ಗವು ತನ್ನನ್ನು ಕಲಾ ಚಟುವಟಿಕೆಗಳಲ್ಲಿ

ಹಣ ತಿನ್ನಲು ಬರುವುದಿಲ್ಲ
ಆದರೂ ಅದೇ ಬೇಕೆನ್ನುತ್ತಾರೆ
ಹಸಿವು ರಕ್ತ ಬೆವರು
ಕಂಬನಿಗಳನು
ಅಪಮೌಲ್ಯಗೊಳಿಸುತ್ತಾರೆ
ಖಂಡಿತ, ಈ ಮನುಷ್ಯರಿಗೆಲ್ಲ
ಹುಚ್ಚು ಹಿಡಿದಿದೆ
ಹಾಗೆಯೇ ನಾನು ಶೂನ್ಯದೊಡನೆ
ಮಾತನಾಡುತ್ತೇನೆ !

**ಗಣೇಶ ಹೊಸ್ಮನೆ**
ಜಾಣ್ಮನೆ – ೫೮೧ ೩೧೫
ಶಿರಸಿ (ಉ. ಕ.)

ತೊಡಗಿಸಿಕೊಳ್ಳುವ ಮತ್ತು ಕಛೇರಿಯ ದಣಿವನ್ನು ಕಳೆದುಕೊಳ್ಳುವ ಸಮಯ ಎಂಬುದು ಗಮನಾರ್ಹ.

೪. ಗಾತ್ರದಲ್ಲಿ ಚಿಕ್ಕದಾಗಿದ್ದ ಗೊಂಬೆಗಳು ಆಳೆತ್ತರಕ್ಕೆ ಬದಲಾಗಿದ್ದು. ಗೊಂಬೆಗಳ ನೆರಳಿಗೆ ಕಟ್ಟಲಾಗುತ್ತಿದ್ದ ಚಿಕ್ಕತೆರೆ ಹದಿನಾರು / ಎಂಟು ಅಗಲಕ್ಕೆ ವಿಸ್ತರಣೆಗೊಂಡಿದ್ದು; ಇಬ್ಬರು ಮೂವರು ಇರುತ್ತಿದ್ದ ತಂಡ ಎಂಟಕ್ಕೆ ಹಿಗ್ಗಿದ್ದು.

೫. ರಾಮಾಯಣ – ಮಹಾಭಾರತಕ್ಕೆ ಸೀಮಿತ ವಾಗಿದ್ದ ಪ್ರಸಂಗಗಳು ವಸಾಹತುಶಾಹಿ ವಿರೋಧಿ ಹೋರಾಟಕ್ಕೆ, ಸಮಾಜಸುಧಾರಕ ಬಸವಣ್ಣನವರ ಬದುಕಿಗೆ ವಿಸ್ತರಿಸಿಕೊಂಡಿದ್ದು. ಈ ಪ್ರಕ್ರಿಯೆ ಇನ್ನೂ ಮುಂದೆ ಹೋಗಿ ಡೆಂಗಿಸೊಳ್ಳೆ, ಏಡ್ಸ್ ನಿವಾರಣೆಯಂತಹ ಪ್ರಸಂಗಗಳನ್ನು ಅಳವಡಿಸಿ ಕೊಳ್ಳಲು ಕಾರಣವಾಯಿತು.

ರಂಗಪ್ರದರ್ಶನದ ಸ್ಥಳ, ಕಾಲ, ಪೋಷಕತ್ವ, ಪ್ರಸಂಗಗಳ ವಸ್ತು ಮತ್ತು ಗೊಂಬೆಗಳ ಗಾತ್ರಗಳಲ್ಲಿ ಸಂಭವಿಸಿದ ಈ ಪಲ್ಲಟಗಳು ಕ್ರಾಂತಿಕಾರಕ ವಾಗಿದ್ದವು. ಇವು ತೊಗಲುಬೊಂಬೆಯಾಟಕ್ಕೆ ಹೊಸ ಜೀವದಾನ ಮಾಡಿದವಲ್ಲದೆ, ಅವುಗಳ ಚಲನೆಗೆ ಹೊಸ ರೋಡ್‌ಮ್ಯಾಪನ್ನೂ ಒದಗಿಸಿದವು. ಇದರಿಂದ ತೊಗಲುಬೊಂಬೆಗಳು ಜಗತ್ತಿನ ಬೇರೆಬೇರೆ ದೇಶಗಳಿಗೆ ತಿರುಗಾಟ ಮಾಡಲು ಸಾಧ್ಯವಾಯಿತು. ವೀರಣ್ಣನವರು ಜನಪದ ರಂಗಭೂಮಿಗಳಲ್ಲಿ ಮಾಡಿದ್ದ ವಲಸೆಯನ್ನು ಈಗ ಅವರ ತೊಗಲುಬೊಂಬೆಗಳು ಬೇರೊಂದು ಬಗೆಯಲ್ಲಿ ಮುಂದುವರಿಸಿದವು. ಕಂಪನಿ ರಂಗಭೂಮಿಯಲ್ಲಿ ತೆರೆಯ ಮುಂದೆ ಅಭಿನಯಿಸುವ ನಟರಾಗಿದ್ದ ವೀರಣ್ಣನವರು ಈಗ ಗೊಂಬೆಗಳನ್ನು ಮುಂದೆ ಬಿಟ್ಟು ತಾವು ತೆರೆಯ ಹಿಂದೆ ಸರಿದಿದ್ದರೇನೋ ಖರೆ. ಆದರೆ ಈ ಹಿಂಜರಿತವು ಅವರನ್ನೂ ಅವರ ಕಲೆಯನ್ನೂ ನಾಗರಿಕ ಪ್ರೇಕ್ಷಕರ ಮುಂದೆ ತಂದು ನಿಲ್ಲಿಸಿತು. ವಿಶ್ವದ ತಿರುಗಾಟಕ್ಕೆ ಅಣಿಗೊಳಿಸಿತು. ರಾಯಲಸೀಮೆಯಲ್ಲಿ ಹುಟ್ಟಿದ ತೊಗಲುಬೊಂಬೆ ರಂಗಭೂಮಿಗೆ ಕ್ರಿಸ್ತಪೂರ್ವ ೩ನೇ ಶತಮಾನದಷ್ಟು ಪ್ರಾಚೀನತೆಯಿದೆಯೆಂದೂ, ಅದು ಶಾತವಾಹನ, ಪಲ್ಲವ, ಚಾಲುಕ್ಯ, ಕಾಕತೀಯ, ವಿಜಯನಗರ, ತಂಜಾವೂರು ರಾಜ್ಯಗಳಿಗೆ ಬರುತ್ತಿದ್ದ ವಿದೇಶಿ ವರ್ತಕರ ಜತೆ, ಸಮುದ್ರಯಾನದ ಮೂಲಕ ಹೊರಟು, ಆಗ್ನೇಯ ಏಷ್ಯಾ ದೇಶಗಳಿಗೂ, ಅಲ್ಲಿಂದ ಟರ್ಕಿ ಪರ್ಶಿಯಾಗಳಿಗೂ, ಅಲ್ಲಿಂದ ಯೂರೋಪಿನ ದೇಶಗಳಿಗೂ ವಲಸೆ ಮಾಡಿತೆಂದೂ ಒಂದು ಅಭಿಪ್ರಾಯವಿದೆ. ಇದು ನಿಜವಿದ್ದರೆ, ಅದರ ಮಹಾವಲಸೆಯ ಎರಡನೆಯ ಘಟ್ಟವು ವೀರಣ್ಣನವರ ಮೂಲಕ ಸಂಪನ್ನಗೊಂಡಿತು ಎನ್ನಬಹುದು.

೩

ವೀರಣ್ಣನವರ ಕಲಾಪ್ರಯೋಗಗಳ ಯಶಸ್ಸಿನ ಅಥವಾ ತೊಗಲುಬೊಂಬೆಯ



ರೂಪಾಂತರಗಳ ಹಿಂದೆ ಮೂರು ಸಂಗತಿಗಳಿವೆ. ೧. ವೀರಣ್ಣನವರ ವ್ಯಕ್ತಿಪ್ರತಿಭೆ. ೨. ಪರಂಪರೆಯ ಭದ್ರ ಬುನಾದಿ. ೩. ಬಹುಮೂಲದಿಂದ ಬಂದ ಕಸುವಿನ ಧಾರೆಗಳು ಏಕೀಭವಿಸಿದ್ದು. ಪರಂಪರೆಯ ಕಸುವೆಷ್ಟೇ ಇದ್ದರೂ ಸೃಜನಶೀಲವಾದ ವ್ಯಕ್ತಿಪ್ರತಿಭೆಯೊಂದರ ಮಧ್ಯಪ್ರವೇಶವಿಲ್ಲದೆ ಕಲಾಲೋಕದಲ್ಲಿ ದೊಡ್ಡ ಪಲ್ಲಟಗಳು ಸಂಭವಿಸುವುದಿಲ್ಲ; ಹಾಗೆಯೇ ಎಂತಹ ವ್ಯಕ್ತಿಪ್ರತಿಭೆಯಿದ್ದರೂ ಪರಂಪರೆಯಲ್ಲಿ ಆಳವಾಗಿ ಬೇರುಗಳಿಲ್ಲದೆ ಮಾಡುವ ಪ್ರಯೋಗಗಳು ದೊಡ್ಡ ಗೆಲುವನ್ನು ಗಳಿಸುವುದಿಲ್ಲ. ಸಂಪ್ರದಾಯದ ಕಾಂಡವು ಆಧುನಿಕತೆ ಸಹವಾಸದಿಂದಲೂ ಚಾರಿತ್ರಿಕ ಒತ್ತಡದಿಂದಲೂ ಹೊಸ ಚಿಗುರನ್ನು ಕೊನರಿಸತೊಡಗುತ್ತದೆ. ತೊಗಲುಬೊಂಬೆ ವಿಷಯದಲ್ಲಿ ವೀರಣ್ಣನವರ ವ್ಯಕ್ತಿಪ್ರತಿಭೆ, ಪ್ರಯೋಗಶೀಲತೆ ಮತ್ತು ಪರಂಪರೆಯ ಕಸುವುಗಳು ಹೊಸ ಹದದಲ್ಲಿ ಸಮನ್ವಯಗೊಂಡವು. ಅವರಲ್ಲಿ ಬಹುಮೂಲದ ಧಾರೆಗಳಾದ ಭಜನೆ, ಗಮಕ, ಶಾಸ್ತ್ರೀಯ ಸಂಗೀತ, ಕನ್ನಡ ಸಾಹಿತ್ಯದ ಓದು, ವೃತ್ತಿರಂಗಭೂಮಿ ಹಾಗೂ ಜನಪದ ರಂಗಭೂಮಿಗಳು



ಕಾವ್ಯಲೋಕ

# ಈ ರಾತ್ರಿ ನಾನು ಬರೆಯಬಹುದು

ಈ ರಾತ್ರಿ ಬರೆಯಬಹುದು ವಿಷಾದಕರ ಸಾಲುಗಳನು
ಬರೆಯುತ್ತೇನೆ, ಉದಾಹರಣೆಗೆ, 'ಈ ರಾತ್ರಿ ಭಗ್ನಗೊಂಡಿದೆ,
ದೂರದಲಿ ಹಳದಿ ನಕ್ಷತ್ರಗಳು ಕಂಪಿಸುತ್ತಿವೆ'
ಆಕಾಶದಲ್ಲಿ ರಾತ್ರಿಗಾಳಿ ಸುತ್ತುತ್ತಿದೆ ಹಾಡು ಹೇಳುತಾ

ಈ ರಾತ್ರಿ ಬರೆಯಬಹುದು ವಿಷಾದಕರ ಸಾಲುಗಳನು
ಅವಳನ್ನು ಪ್ರೀತಿಸಿದ್ದೆ ನಾನು, ಒಮ್ಮೊಮ್ಮೆ ಅವಳೂ
ನನ್ನ ಪ್ರೀತಿಸುತ್ತಿದ್ದಳು

ಇಂಥದೇ ಒಂದು ರಾತ್ರಿಯಲ್ಲಿ ಅವಳನ್ನು ನನ್ನ
ತೋಳುಗಳಲ್ಲಿ ಹಿಡಿದಿದ್ದೆ ಬಿಗಿಯಾಗಿ
ಕೊನೆಯಿರದ ಆಕಾಶದ ಕೆಳಗೆ ನಾನು ಅವಳನ್ನು
ಮತ್ತೆ ಮತ್ತೆ ಮುದ್ದಿಸಿದೆ

ಅವಳು ನನ್ನ ಪ್ರೀತಿಸಿದ್ದಳು. ಒಮ್ಮೊಮ್ಮೆ ನಾನೂ
ಅವಳನ್ನು ಪ್ರೀತಿಸುತ್ತಿದ್ದೆ
ಅವಳ ಉತ್ಕೃಷ್ಟ ನಿರ್ಮಲ ಕಣ್ಣುಗಳನ್ನು ಯಾರು
ತಾನೆ ಪ್ರೀತಿಸದಿರಲು ಸಾಧ್ಯ.

ಈ ರಾತ್ರಿ ಬರೆಯಬಹುದು ವಿಷಾದಕರ ಸಾಲುಗಳನು
ಅರಿಯಲು ಅವಳು ನನ್ನ ಹತ್ತಿರ ಇಲ್ಲವೆಂದು,
ತಿಳಿಯಲು ಅವಳನ್ನು
ನಾನು ಕಳೆದುಕೊಂಡಿದ್ದೆನೆಂದು

ಅಗಾಧ ರಾತ್ರಿಯನ್ನು ಆಲಿಸಲು, ಅವಳಿಲ್ಲದ ರಾತ್ರಿ ಇನ್ನೂ ಅಗಾಧವಾಗುವುದು
ಗೋಮಾಳದ ಮೇಲೆ ಇಬ್ಬನಿ ಬೀಳುವಂತೆ ಆತ್ಮದ ಮೇಲೆ ಕಾವ್ಯ ಬೀಳುವುದು

ನನ್ನ ಪ್ರೀತಿಗೆ ಅವಳನ್ನು ಹಿಡಿದಿಡಲು ಸಾಧ್ಯವಾಗಲಿಲ್ಲ ಎನ್ನುವುದು ಮುಖ್ಯವೇ ಅಲ್ಲ
ಈ ರಾತ್ರಿ ಭಗ್ನಗೊಂಡಿದೆ, ಅವಳು ನನ್ನೊಂದಿಗೆ ಇಲ್ಲ.

ಇಷ್ಟೆ, ದೂರದಲ್ಲಿ ಯಾರೋ ಹಾಡುತ್ತಿದ್ದಾರೆ, ದೂರದಲಿ,
ಅವಳನ್ನು ಕಳೆದುಕೊಂಡದ್ದಕ್ಕೆ ನನ್ನಾತ್ಮಕ್ಕಿಲ್ಲ ಸಂತೋಷ.

ನನ್ನ ಕಣ್ಣು ಹುಡುಕುತಿವೆ ಅವಳಿಗಾಗಿ ಅವಳ ಬಳಿ ಸುಳಿಯಲೆಂದು
ನನ್ನ ಹೃದಯ ಅವಳ ಕಡೆ ನೋಡುತ್ತಿದೆ, ಆದರೆ ಅವಳು ನನ್ನ ಬಳಿ ಇಲ್ಲವೆ ?

ಇಂಥದೇ ಒಂದು ರಾತ್ರಿ ಇಂಥದೇ ಗಿಡಗಳಿಗೆ ಸುಣ್ಣ ಬಡೆಯುತ್ತಿತ್ತು
ನಾವೂ ಆ ಕಾಲದವರೇ, ಆದರೆ ಉಳಿದಿಲ್ಲವಲ್ಲ ಮೊದಲಿನಂತೆ ನಾವು

ನಾನು ಅವಳನ್ನು ಇನ್ನು ಪ್ರೀತಿಸುವುದಿಲ್ಲ, ಇದು ಸತ್ಯ,
ಆದರೆ ನಾನು ಅವಳನ್ನು ಹೇಗೆ ಪ್ರೀತಿಸುತ್ತಿದ್ದೆ.
ಅವಳ ಕಿವಿ ಸ್ಪರ್ಶಿಸಲೆಂದು ಗಾಳಿಯನ್ನು ಹುಡುಕಲು
ನನ್ನ ಧ್ವನಿ ಪ್ರಯತ್ನಿಸುತ್ತಿತ್ತು

ಬೇರೆಯವನ ಸೊತ್ತವಳು. ಬೇರೆಯವನಿಗೆ ಸೇರುವವಳು,
ನನ್ನ ಮುಂಚೆಯ ಮುದ್ದುಗಳಂತೆ
ಅವಳ ಧ್ವನಿ. ಅವಳ ಉಜ್ವಲ ದೇಹ, ಅವಳ ಅನಂತ ಕಣ್ಣುಗಳು

ಇದು ದಿಟ, ನಾನು ಅವಳನ್ನು ಇನ್ನು ಪ್ರೀತಿಸುವುದಿಲ್ಲ, ಆದರೆ ನಾನು
ಅವಳನ್ನು ಪ್ರೀತಿಸಲೂಬಹುದು
ಪ್ರೀತಿ ಎಷ್ಟು ಕ್ಷಣಿಕ, ಮರೆವು ಎಷ್ಟು ದೀರ್ಘ

ಏಕೆಂದರೆ ಇಂಥದೇ ಒಂದು ರಾತ್ರಿಯಲ್ಲಿ ಹಿಡಿದಿದ್ದೆ
ಅವಳನ್ನು ನನ್ನ ತೋಳಿನಲ್ಲಿ ಗಟ್ಟಿಯಾಗಿ
ಅವಳನ್ನು ಕಳೆದುಕೊಂಡದ್ದಕ್ಕೆ ನನ್ನಾತ್ಮಕ್ಕಿಲ್ಲ ಸಂತೋಷ

ಅವಳು ನನ್ನ ನೋಯಿಸುವುದು ಇದೇ ಕೊನೆಯ ಬಾರಿ
ಅವಳಿಗಾಗಿ ಬರೆಯುವ ಕವನದ ಸಾಲುಗಳಿಗೆ ಇದೇ ಕೊನೆ.

**ಮೂಲ : ಪಾಬ್ಲೊ ನೆರೂಡ, ಡಾ॥ ಬಸವರಾಜ ಡೋಣೂರ**
೨ನೇ ಮಹಡಿ, ಕಾರ್ಯಸೌಧ, ಗುಲಬರ್ಗಾ ವಿಶ್ವವಿದ್ಯಾಲಯ ಆವರಣ
ಗುಲಬರ್ಗಾ – ೫೮೫ ೧೦೬

ಸಹ ಸಂಗಮಿಸಿದವು; ಅವರ ಹಾಡಿಕೆಯಲ್ಲಿ ಜನಪದ ಮಟ್ಟುಗಳ ಜತೆಗೆ ಶಾಸ್ತ್ರೀಯ ಮಟ್ಟುಗಳು ಹದವಾಗಿ ಸಂಗಮಿಸುವುದನ್ನು ಸಹ ಗಮನಿಸಬೇಕು. ಇದಕ್ಕೆಲ್ಲ ಕಾರಣ, ವೃತ್ತಿರಂಗಭೂಮಿಯನ್ನೂ ಜನಪದ ಬಯಲಾಟಗಳನ್ನೂ ಹಾದು ಅವರು ತೊಗಲುಬೊಂಬೆಗೆ ಮರಳಿ ಬಂದಿದ್ದು. ವೀರಣ್ಣನವರಂತೆ ಈ ಮೂರು ರಂಗಭೂಮಿಗಳೊಳಗೆ ಹೊಕ್ಕಾಡಿ ಬಂದ ಇನ್ನೊಂದು ಪ್ರತಿಭೆ ಬಹುಶಃ ಕರ್ನಾಟಕದಲ್ಲಿ ಮತ್ತೊಂದು ಇಲ್ಲ. ಬಹುಮೂಲದಿಂದ ಶಕ್ತಿಸಂಚಯ ಮಾಡಿಕೊಳ್ಳುವ ಈ ಗುಣವು ಅವರ ಭಾಷಾಸಿದ್ಧಿಯಲ್ಲೂ ಕಾಣುತ್ತದೆ. ಅವರದು ಸಂಸ್ಕೃತ ಮತ್ತು ಬಳ್ಳಾರಿಯ ಆಡುನುಡಿಯ ಹದವಾದ ಮಿಶ್ರಣದಿಂದ ಕೂಡಿದ ಭಾಷೆ. ಅವರಿಗೆ ಈ ಶಿಷ್ಟ ಕನ್ನಡವು ಅವರು ಬಹುಕಾಲ ಕೆಲಸ ಮಾಡಿದ ವೃತ್ತಿರಂಗಭೂಮಿಯ ನಾಟಕಗಳಿಂದಲೊ, ನಡುಗನ್ನಡ ಶೈಲಿಯನ್ನು ಬಳಸುವ ಜನಪದ ಬಯಲಾಟಗಳಿಂದಲೊ, ಪ್ರಾಯದಲ್ಲಿ ಓದಿದ್ದ ಅನಕೃ ಕಾದಂಬರಿಗಳಿಂದಲೊ, ಸಿಡಗಿನಮೆಳೆ ಚಂದ್ರಯ್ಯ ಅಥವಾ ಜೋಳದರಾಶಿ ದೊಡ್ಡನಗೌಡರಂತಹ ನಟ–ಲೇಖಕರ ಸಹವಾಸದಲ್ಲಿದ್ದುದರಿಂದಲೊ ಬಂದಿರಬಹುದು. ಕಂದಗಲ್ ಹಣಮಂತರಾಯರ 'ರಕ್ತರಾತ್ರಿ'ಯಂತಹ ನಾಟಕಗಳಲ್ಲಿ ಪಾತ್ರವಹಿಸಿದ ಯಾರಿಗೂ ಶಿಷ್ಟವಾದ ಕನ್ನಡ ಕರಗತವಾಗಿಬಿಡುತ್ತದೆ. ಬಹುಶಃ ರಂಗಭೂಮಿಯ ಈ ಬಹುಮುಖತೆಯೇ ಅದನ್ನು ಬೇರೆಲ್ಲಾ ಕಲೆಗಳಿಗಿಂತ ಜಾತ್ಯತೀತವಾಗಿಸಿತು ಎಂದು ಕಾಣುತ್ತದೆ. ಕರ್ನಾಟಕದ ವೃತ್ತಿರಂಗಭೂಮಿಯ ನಟನಟಿಯರ ಯಾದಿ ನೋಡಿದರೂ ಜಾತ್ಯತೀತತೆಯ ಈ ಅಂಶ ಮನದಟ್ಟಾಗುತ್ತದೆ.

ವೀರಣ್ಣನವರು ಮಾತುಕತೆಯ ನಡುವೆ ಹೇಳಿದರು: "ಸಾರೂ, ಬಡತನ ಬಹಳ ಕೆಟ್ಟದ್ದು. ಅದರಿಂದ ಅನೇಕ ಸಲ ಆತ್ಮಹತ್ಯೆ ಮಾಡಿಕೊಳ್ಳಬೇಕು ಎಂದು ಅನಿಸಿರೋದುಂಟು. ಆದರೆ ಕಲಾಜಗತ್ತಿನಲ್ಲಿ ಸಿಕ್ಕ ಬೆಲೆಬಾಳುವ ಅನುಭವ ನನ್ನನ್ನು ಉಳಿಸಿತು. ಶಾರದಾತಾಯಿ ನನಗೆ ಕಲಾವಿದ್ಯೆ ಕೊಟ್ಟಿದಾಳೆ. ನನಗೆ ವ್ಯವಹಾರ ಗೊತ್ತಿಲ್ಲ. ಕಲೆ ಗೊತ್ತಿದೆ. ಕಲೆ ನನ್ನ ಕೈಹಿಡಿದಿದೆ." ವೀರಣ್ಣನವರ ಜತೆಯಿದ್ದಾಗ ಅವರ ವ್ಯಕ್ತಿತ್ವದಲ್ಲಿರುವ ಮಾಗುವಿಕೆ, ತಾಳ್ಮೆ ಪ್ರಸನ್ನತೆಯ ಗುಣಗಳು ಅನುಭವಕ್ಕೆ ಬರುತ್ತವೆ. ದೇಶ ವಿದೇಶಗಳನ್ನು ತಿರುಗಿ, ಕೀರ್ತಿಯನ್ನೂ ಜನಪ್ರೀತಿಯನ್ನೂ ಗಳಿಸಿದ್ದರೂ ಅವರಲ್ಲಿ ಗ್ರಾಮೀಣವಾದ ಸರಳತೆ ಮತ್ತು ಮುಗ್ಧತೆ ಕಳೆದುಹೋಗಿಲ್ಲ. ವ್ಯವಹಾರ ಜ್ಞಾನವಿಲ್ಲದ ಕಾರಣದಿಂದಲೊ ತನ್ನ ಮಿತಿಯ ಅರಿವಿನಿಂದ ಒದಗಿರುವ ನಮ್ರತೆಯ ದೆಸೆಯಿಂದಲೊ ಅವರು ಮತ್ತಷ್ಟು ಎತ್ತರದವರಾಗಿ ಕಾಣುವರು. ಅವರಿಗೆ ತಮಗೂ ತಮ್ಮ ಕಲೆಗೂ ಜನ ಮತ್ತು ಸರ್ಕಾರ ಕೊಟ್ಟಿರುವ ನೈತಿಕ ಬೆಂಬಲದ ಬಗ್ಗೆ ಅಪಾರ ಕೃತಜ್ಞತೆಯಿದೆ. ಬಾಲ್ಯದಲ್ಲಿ ಪಟ್ಟಿರುವ ಕಷ್ಟ ಅನುಭವಿಸಿದ ಅಪಮಾನಗಳು ಅವರ ಮನಸ್ಸನ್ನು ಕಹಿ ಮಾಡಿದಂತಿಲ್ಲ. ಜಾತಿ ಮತ್ತು ಬಡತನದಿಂದ ಮುಖಾಮುಖಿ ಮಾಡಿದ ಅಪಮಾನವನ್ನು ಕಲಾತ್ಮಕ ಪ್ರಜ್ಞೆಯ ಮೂಲಕ ಗೆಲ್ಲುವುದರಿಂದ ಬರುವ ಆತ್ಮವಿಶ್ವಾಸವಿದು ಎಂದು ತೋರುತ್ತದೆ. ವೀರಣ್ಣನವರ ಬದುಕು ಕಲೆಯಿಂದ ಅಪಮಾನವನ್ನು ಗೆದ್ದ ಕಲಾವಿದನ ಕಥೆ ಮಾತ್ರವಲ್ಲ, ಅಳಿವಿನಂಚಿಗೆ ಸರಿಯುತ್ತಿದ್ದ ಕಲೆಯನ್ನು ತನ್ನ ಪ್ರತಿಭೆ, ಶ್ರದ್ಧೆ ಶ್ರಮದಿಂದ ಬದುಕಿಸಿದ ಗಾಥೆ ಕೂಡ. ಆದರೆ ಆಧುನಿಕ ಸಮಾಜದ ಅಪೇಕ್ಷೆ ಮತ್ತು ಸರ್ಕಾರದ ನೆರವುಗಳು, ಕಲೆಯನ್ನು ಸರಕೀಕರಣ ಮಾಡಬಲ್ಲವು. ಇದಕ್ಕೆ ಸಾಕ್ಷಿ ವೀರಣ್ಣನವರ ತಂಡವು ಡೆಂಗಿಸೊಳ್ಳೆಗಳನ್ನು ಮತ್ತು ಏಡ್ಸನ್ನು ಕುರಿತ ಪ್ರಸಂಗಗಳ ಪ್ರದರ್ಶನ ಮಾಡುತ್ತಿರುವುದು. ಈಗ ಪೌರಾಣಿಕ ಧಾರ್ಮಿಕ ಪ್ರಸಂಗಗಳು ದೊರಕಿಸಿಕೊಡಲಾಗದ ಆದಾಯಗಳನ್ನು ಸಾರ್ವಜನಿಕ ಆರೋಗ್ಯಕ್ಕೆ ಸಂಬಂಧಿಸಿದ ಈ ಪ್ರಸಂಗಗಳು ದೊರಕಿಸಿಕೊಡುತ್ತಿವೆ. ಕಲೆ ಮತ್ತು ಆಧುನಿಕತೆಯ ಸಂಬಂಧದ ಒಂದು ವೈರುಧ್ಯವಿದು.

೪

ಮಾತುಕತೆಯ ಕೊನೆಗೆ ವೀರಣ್ಣನವರಿಗೆ ಕೆಲವು ರಂಗಗೀತೆಗಳನ್ನು ಹಾಡಬೇಕೆಂದು ವಿನಂತಿಸಿದೆ. ಅವರು ಕುಮಾರವ್ಯಾಸ ಭಾರತದಿಂದ ಕೆಲವು ಷಟ್ಪದಿಗಳನ್ನು ಅಭಿನಯಪೂರ್ವಕವಾಗಿ ಉಚ್ಚಸ್ವರದಲ್ಲಿ ಹಾಡಿದರು. ನಮ್ಮ ಮನೆ ನಾದದಿಂದ ತುಂಬಿಹೋಯಿತು. ವೀರಣ್ಣನವರು ಆರಿಸಿಕೊಂಡ ಹೊಸ ಪ್ರಸಂಗಗಳ ನಾಯಕರಾದ ಬಸವಣ್ಣ ಮತ್ತು ಗಾಂಧಿ, ಸಮಾಜ ಮತ್ತು ದೇಶವನ್ನು ತಮ್ಮದೇ ಆದ ರೀತಿಯಲ್ಲಿ ಬಿಡುಗಡೆ ಮಾಡಲು ಯತ್ನಿಸಿದವರು ಎಂಬುದು ಮಾರ್ಮಿಕವಾಗಿದೆ. ವೀರಣ್ಣನವರಿಗೆ ಗಾಂಧಿಯನ್ನು ಕುರಿತ ಆಟದ ಹಾಡನ್ನು ಹಾಡಲು ವಿನಂತಿಸಿದೆ. ಅವರು – ತಮ್ಮ ಹೆಸರಲ್ಲೂ ಇರುವ – 'ವೀರ' ರಸದ ದನಿಯಲ್ಲಿ ಒಂದು ಪದ್ಯವನ್ನು ಹಾಡಿದರು :

*ಮಂಗಳಮಯ ಉತ್ತುಂಗ ಹಿಮಾಲಯ ನೋಡಿ ಹೇಳಿದಂಥ ಕಥೆಯಾ*
*ಭಾರತಮಾತೆಯು ಶತಶತಮಾನದಲ್ಲಿ ನರಳಿದ ವ್ಯಥೆಯಾ*
*ತಾಯಿ ಬಂಧನವ ಬಿಡಿಸಲು ಸಿಡಿಯಿತು ಕೋಟಿಕಂಠದಲ್ಲಿ ಜಯಕಾರಾ*
*ಕೇಳು ತಮ್ಮ ಕೇಳು ತಂಗಿ ನಮ್ಮ ಸ್ವಾತಂತ್ರ್ಯ ಸಮರದಾ ಶ್ರೀಕಾರಾ*

ಕಂಪನಿ ರಂಗಭೂಮಿ ಹಾಗೂ ಜನಪದ ರಂಗಭೂಮಿಗಳಲ್ಲಿ ಪಳಗಿರುವ ವೀರಣ್ಣನವರ ಕಂಠದಲ್ಲಿ ಈ ರಂಗಗೀತೆ ಕಹಳೆಯಂತೆ ಮೊಳಗಿತು. ಈ ಗೀತೆಯಲ್ಲಿರುವ ಬಂಧನ – ವ್ಯಥೆ ಸಿಡಿಯುವುದು – ಸ್ವಾತಂತ್ರ್ಯ ಎಂಬ ಪದಗಳು ಪ್ರಸಂಗದ ಸನ್ನಿವೇಶಕ್ಕಾಗಿ ಹುಟ್ಟಿದ್ದರೂ, ವೈಯಕ್ತಿಕವಾಗಿ ವೀರಣ್ಣನವರ ಹಾಗೂ ಅವರ ಕುಲಕಲೆಯ ಜೀವನಚರಿತ್ರೆಗೂ ಸಂಬಂಧಿಸಿವೆ ಅನಿಸಿತು. ಈ ರಂಗಗೀತೆ ಲಾವಣಿ ಮಟ್ಟಿನಲ್ಲಿರುವುದು ಮಾರ್ಮಿಕವಾಗಿದೆ. ಯಾಕೆಂದರೆ ಲಾವಣಿಗಳಿಗೂ ವಸಾಹತುಶಾಹಿಗೆ ಜನಪದರಿಂದ ಬಂದ ಪ್ರತಿರೋಧಕ್ಕೆ ತಳುಕಿದೆ. ಬಹಳಷ್ಟು ಲಾವಣಿಕಾರರು ರಾಷ್ಟ್ರೀಯ ಹೋರಾಟಗಾರರೂ ಆಗಿದ್ದವರು.

ವೀರಣ್ಣನವರು ಮಾತಾಡಲಿ ಹಾಡಲಿ ಅಲ್ಲಿ ನಾಟಕೀಯತೆ ತುಂಬಿರುತ್ತದೆ. "ಮಾತನಾಡಿದರೆ ಹಾಡಿದಂತಿರಬೇಕು. ಹಾಡಿದರೆ ಮಾತನಾಡಿದಂತಿರಬೇಕು. ಇದೇ ರಂಗಭೂಮಿಯ ಗುಟ್ಟು" ಎಂದು ಅವರು ಹಲವು ಸಲ ಹೇಳಿದರು. ಹಾಡುವಾಗ ಇಲ್ಲವೇ ಅಭಿನಯದ ತುಣುಕನ್ನು ತೋರಿಸುವಾಗ ಅವರ ಮುಖ ಅಪೂರ್ವ ಕಳೆಯಿಂದ ಪ್ರಜ್ವಲಿಸುತ್ತಿತ್ತು. ಮುಖದ ಈ ನಾಟಕೀಯ ಬದಲಾವಣೆಯನ್ನು ಲಾಡ್‌ಸಾಬ್ ಅಮೀನಗಡ, ಫ್ಲೋರಿನಾ, ಸುಭದ್ರಮ್ಮ ಮನ್ಸೂರ್ ಮುಂತಾದ ರಂಗಭೂಮಿ ಜನರ ಜತೆ ಮಾತುಕತೆ ಮಾಡುವಾಗಲೂ ನಾನು ಕಂಡಿರುವೆ. ರಂಗಭೂಮಿಯ ನೆನಪುಗಳು ದೈಹಿಕ ವಯಸ್ಸನ್ನು ಕಳೆದು ಕಲಾತ್ಮಕ ಯೌವನವನ್ನು ತುಂಬಿಕೊಡುತ್ತವೆ. ವೃದ್ಧ ಯಯಾತಿ ತನ್ನ ಮಗನ ಯೌವನವನ್ನು ಕಡವಾಗಿ ಪಡೆದುಕೊಂಡು ಹೊಸಬಾಳು ಬದುಕಿದ ಪುರಾಣದ ಕತೆಯಿದೆಯಷ್ಟೆ. ಆದರೆ ವೀರಣ್ಣನವರು ತಮ್ಮ ಅನುಭವ ಪ್ರತಿಭೆ ಪ್ರಯೋಗಶೀಲತೆಗಳ ತೇಜಸ್ಸನ್ನು ಅಕಾಲ ಮುಪ್ಪಿಗೆ ಸಂದಿದ್ದ ತೊಗಲುಬೊಂಬೆಗಳಿಗೆ ಧಾರೆಯೆರೆದು ಅವಕ್ಕೆ ಹೊಸಜೀವ ತುಂಬಿದವರು.

ತೊಗಲುಬೊಂಬೆಯ ಕಲಾಲೋಕಕ್ಕೆ ವೀರಣ್ಣನವರು ಮಾಡಿದ ಈ ನಿರ್ಗಮನ ಮತ್ತು ಪುನರಾಗಮನ, ತೊಗಲುಬೊಂಬೆಗೆ ಕೊಟ್ಟ ರೂಪಾಂತರ ಮತ್ತು ಬಿಡುಗಡೆಗಳು, ಶಿವರಾಮ ಕಾರಂತರು ಯಕ್ಷಗಾನಕ್ಕೆ ಕೊಟ್ಟ ಕಾಯಕಲ್ಪವನ್ನು ನೆನಪಿಸುತ್ತವೆ. ಈ ಬಗೆಯ ಬಿಡುಗಡೆ ಮತ್ತು ರೂಪಾಂತರಗಳು ಬಳ್ಳಾರಿ ಜಿಲ್ಲೆಯಲ್ಲಿ ಸಮೃದ್ಧವಾಗಿದ್ದೂ ಕೊನೆ ಉಸಿರೆಳೆಯುತ್ತಿರುವಂತೆ ತೋರುವ ಬಯಲಾಟಗಳಿಗೆ ಸಿಗಲಿಲ್ಲವೆನ್ನುವುದು ದುರ್ದೈವದ ಸಂಗತಿ. ಈ ಬಯಲಾಟಗಳು ಈಗಲೂ ಒಬ್ಬ ಕಾರಂತರ ಇಲ್ಲವೇ ವೀರಣ್ಣನವರಂತಹ ವ್ಯಕ್ತಿಪ್ರತಿಭೆಯ ಸಾಂಸ್ಥಿಕ ಮಧ್ಯಪ್ರವೇಶಕ್ಕೆ ಕಾಯುತ್ತಿವೆ. ವೀರಣ್ಣನವರಿಗೂ ಅವರ 'ಶ್ರೀರಾಮಾಂಜನೇಯ ತೊಗಲಬೊಂಬೆ ಮೇಳ'ಕ್ಕೂ ಸಿಕ್ಕ ಯಶಸ್ಸು ಮತ್ತು ಮಾನ್ಯತೆ, ಕರ್ನಾಟಕದ ಅನೇಕ ತೊಗಲುಗೊಂಬೆ ಕಲಾವಿದರಿಗೂ ಅವರ ತಂಡಗಳಿಗೂ ಸಿಕ್ಕಿದಂತಿಲ್ಲ. ಜನಪದ ಕಲೆಗಳನ್ನು ಎರಡನೇ ದರ್ಜೆಯಲ್ಲಿ ನಡೆಸಿಕೊಳ್ಳುತ್ತಿರುವ ಸಮಾಜದ ಮನೋಭಾವದ ಬಗ್ಗೆ ವೀರಣ್ಣನವರಲ್ಲಿ ವಿಷಾದ ಮಡುಗಟ್ಟಿತ್ತು. ಜನಪದ ಕಲೆಗಳು ಮತ್ತು ಕಲಾವಿದ ಸಮುದಾಯಗಳು ತಮ್ಮ ಶಾಪಗ್ರಸ್ತ ಸ್ಥಿತಿಯಿಂದ ಹೊರಬರಲು ಜನಪದ ರಂಗಭೂಮಿಯಲ್ಲೇ ಆಧುನಿಕವಾದ ಪಲ್ಲಟಗಳು ಸಂಭವಿಸಬೇಕೊ ಅಥವಾ ಇಂತಹ ಜನಪದ ರಂಗಭೂಮಿಯನ್ನು ನೋಡುವ ಸಮಾಜದ ದೃಷ್ಟಿಕೋನ ಬದಲಾಗಬೇಕೊ ಎಂಬುದು ಮಾತ್ರ ಒಂದು ಯಕ್ಷಪ್ರಶ್ನೆಯಾಗಿಯೇ ಉಳಿದಿದೆ.

ಡಾ॥ ರಹಮತ್ ತರೀಕೆರೆ
'ಸೂಫಿ', ಎಂ. ಪಿ. ಪ್ರಕಾಶ ನಗರ, ಹೊಸಪೇಟೆ – ೫೮೩ ೨೦೧
ಬಳ್ಳಾರಿ ಜಿಲ್ಲೆ

ನಾನು
ಓದಿದ
ಪುಸ್ತಕ

# ಸನದಿ ಕಾವ್ಯಕ್ಕೊಂದು ಕೈದೀಪ 'ಶಾಂತಿಗೊಂದು ಸವಾಲು'




ಕೃತಿಯ ಹೆಸರು : **ಶಾಂತಿಗೊಂದು ಸವಾಲು**
ಲೇಖಕರು : **ಬಿ. ಎ. ಸನದಿ**
ಪುಟ : ೧೬೮ ಬೆಲೆ : ರೂ. ೧೦೦
ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ನಂ. ೧೧, ಕ್ರೆಸೆಂಟ್ ರಸ್ತೆ
ಬೆಂಗಳೂರು – ೫೬೦ ೦೦೧

**ಕ**ಳೆದ ಐದು ದಶಕಗಳ ಅವಧಿಯಲ್ಲಿ ಹದಿನೆಂಟು ಸಂಕಲನಗಳ ಮೂಲಕ ಹರಿದು ಬಂದಿರುವ ಕವಿ ಸನದಿಯವರ ಕಾವ್ಯದ ಹೊನಲನ್ನು ಕನ್ನಡದ ಇನ್ನೋರ್ವ ಮಹತ್ವದ ಕವಿ ಪ್ರೊ|| ಎಸ್. ಜಿ. ಸಿದ್ಧರಾಮಯ್ಯ ಅವಲೋಕಿಸಿ 'ಶಾಂತಿಗೊಂದು ಸವಾಲು' ಎಂಬ ಶೀರ್ಷಿಕೆಯ ಅಡಿಯಲ್ಲಿ ಸಂಕಲಿಸಿ ಕನ್ನಡ ಕಾವ್ಯಪ್ರಿಯರಿಗೆ ನೀಡಿದ್ದಾರೆ. ಅನೇಕ ನಾಮಾಂಕಿತ ಕವಿಗಳ ಕೊಡುಗೆ ಕನ್ನಡ ಕಾವ್ಯವನ್ನು ಶ್ರೀಮಂತವಾಗಿಸಿದೆ. ಬದುಕಿಗೆ ನಿಷ್ಠರಾಗಿ, ಒಂದು ನಿರ್ದಿಷ್ಟ ಮೌಲ್ಯಕ್ಕೆ ಬದ್ಧರಾಗಿ, ಪ್ರತಿದಿನ ನಡೆಯುತ್ತಿರುವ ಅಪಸವ್ಯಗಳ ನಡುವೆಯೂ ತಾವು ನಂಬಿದ ಮೌಲ್ಯವನ್ನು ತಮ್ಮ ಕಾವ್ಯದಲ್ಲಿ ನಿರಂತರವಾಗಿ ಪ್ರತಿಪಾದಿಸುತ್ತ ಬಂದಿರುವ ಕವಿ ಸನದಿ ಕನ್ನಡ ಕಾವ್ಯದ ಸಂದರ್ಭದಲ್ಲಿ ಕವಿಗಳ ಗಡಣದ ನಡುವೆ ಓರ್ವ ಅನನ್ಯ ಕವಿಯಾಗಿ ಗೋಚರಿಸುತ್ತಾರೆ. ಇಂಥ ಒಂದು ಸಂಕಲನವನ್ನು ಪ್ರಕಟಿಸಲು ಮುಂದಾದ ನವಕರ್ನಾಟಕ ಪ್ರಕಾಶನದ ನಡೆ ಅಭಿನಂದನಾರ್ಹ.

ಕವಿ ಸನದಿಯವರ ಅನನ್ಯತೆ ಇರುವುದು ಅವರ ಕಾವ್ಯದಲ್ಲಿ ಪುನರಪಿ ಪ್ರತಿಧ್ವನಿಸುವ – ವಿಮುಖವಾದ ಮನಸ್ಸುಗಳನ್ನು ಒಂದಾಗಿಸಿ ಸಾಮರಸ್ಯದ, ನೆಮ್ಮದಿಯ ಹೊಸ ಜಗತ್ತನ್ನು ಕಟ್ಟುವ–ಕನಸಿನ ಕಾಣ್ಕೆಯಲ್ಲಿ. ಇದು ವರ್ತಮಾನದ ತ್ರಸ್ತ ಜಗತ್ತಿಗೆ ಅತ್ಯಂತ ಜರೂರಿನ, ತುರ್ತಿನ ಅಗತ್ಯವಾಗಿದೆಯೆಂಬುದನ್ನು ಪ್ರತಿಯೊಬ್ಬರೂ ಮನಗಾಣಬೇಕಿದೆ. ಕಾವ್ಯದ ನೆರೆ ನಂಬಿ ಒಂದೋ ಎರಡೋ ಕವನ ಸಂಕಲನಗಳನ್ನು ಪ್ರಕಟಿಸಿ ನೇಪಥ್ಯಕ್ಕೆ ಸರಿದುಹೋಗುವ ಅನೇಕ ಯುವ ಕವಿಗಳನ್ನು ಗಮನಿಸುವಾಗ ಕಾವ್ಯದೊಡನೆ ಸುದೀರ್ಘ ಕಾಲದ ನಂಟನ್ನು ಕಾಪಿಟ್ಟುಕೊಂಡು ಕಾವ್ಯದ ರಸಗಟ್ಟಿಯನ್ನು ನಿರ್ಮಿಸಿರುವ ಸನದಿಯಂಥ ಹಿರಿಯ ಕವಿಗಳ ಕುರಿತು ಗೌರವ ಮೂಡುತ್ತದೆ.

ಕೃತಿಯ ಪ್ರಸ್ತಾವನೆಯಲ್ಲಿ ಪ್ರೊ|| ಸಿದ್ಧರಾಮಯ್ಯನವರು ಸನದಿಯವರ ಕುರಿತು ಬರೆದ ನುಡಿ ಈ ಕವಿಯ ಮನೋಧರ್ಮವನ್ನು ಪ್ರತಿಫಲಿಸುವ ಸಾಕ್ಷಿಚಿತ್ರದಂತಿದೆ. ಅವರು ಬರೆದಿರುವುದು ಹೀಗೆ :

"...ಸನದಿಯವರು ಕನ್ನಡದ ಪಿಸುಮಾತಿನ ಕವಿ. ಅಬ್ಬರದಲ್ಲಿ ಮೆರೆದವರಲ್ಲ. ತನ್ನ ದನಿಯೇ ಮಿಗಿಲೆಂದು ಹಾರಾಡಿದವರಲ್ಲ. ಬರೆಯಬೇಕಾದ ಒಳಗಿನೊತ್ತಡದಲ್ಲಿ ಬರೆಯಲೇ ಬೇಕಾದದ್ದನ್ನು ಬರೆಯುತ್ತ ಬಂದವರು. ...ತಾವು ನಂಬಿದ ಮಾನವತಾವಾದದಲ್ಲಿ ಇಂದಿಗೂ ನಂಬಿಕೆಯನ್ನು ಕಳೆದುಕೊಳ್ಳದೆ ಬದ್ಧತೆಯಲ್ಲಿ ಬದುಕು ಕಟ್ಟಿಕೊಂಡವರು. ಆ ಯಾನ ಸುದೀರ್ಘವಾದಷ್ಟೇ ವೈವಿಧ್ಯಪೂರ್ಣವೂ ಆಗಿದೆ."

ಪ್ರಸ್ತಾವನೆಯ ಇನ್ನೊಂದೆಡೆ ಅವರು ಹೀಗೆ ದಾಖಲಿಸುತ್ತಾರೆ :

"...ಸನದಿಯವರ ಒಟ್ಟೂ ಮನಃಸ್ಥಿತಿಯೇ ಮಣ್ಣಿನ ಪರವಾದುದು. ಮಣ್ಣಿನ ಮೇಲಿನ ಬದುಕನ್ನು ಗೌರವಿಸುವುದು. ಮಣ್ಣಿನ ಮೇಲಿನ ಎಲ್ಲ ಜೀವಜಾಲಗಳನ್ನು ಒಳಪ್ರಜ್ಞೆಯಲ್ಲಿ ಪರಿಭಾವಿಸುವುದು."

ಸನದಿಯವರ ಕಾವ್ಯಮಾರ್ಗದ ಕುರಿತು ರಾಷ್ಟ್ರಕವಿ ಡಾ|| ಜಿ. ಎಸ್. ಶಿವರುದ್ರಪ್ಪ ವ್ಯಕ್ತಪಡಿಸಿದ ಅಭಿಪ್ರಾಯವನ್ನು ಇಲ್ಲಿ ಪುನಃ ಉದ್ಧರಿಸುವುದು ಔಚಿತ್ಯಪೂರ್ಣ :

"...ಸನದಿಯವರು ತಮ್ಮ ಸಮಕಾಲೀನ ಬಿಕ್ಕಟ್ಟುಗಳನ್ನು ಕುರಿತು ಕಾವ್ಯಕೇಂದ್ರಿತವಾಗಿ ತಮ್ಮ ಪ್ರತಿಕ್ರಿಯೆಗಳನ್ನು ದಾಖಲು ಮಾಡುವ ಕ್ರಮ ವಿಶಿಷ್ಟವಾಗಿದೆ. ಅವರ ಪ್ರತಿಪಾದನೆಯ ಕ್ರಮದಲ್ಲಿ ಬದುಕಿನ ಬಗ್ಗೆ ತಕ್ಕ ಪ್ರೀತಿ, ವಿನಯ ಹಾಗೂ ಶ್ರದ್ಧೆಗಳಿವೆಯೇ ವಿನಾ ಯಾವುದೇ ಸುಧಾರಕತನದ, ಧೀರೋದಾತ್ತತೆಯ ಸೋಗುಗಳಿಲ್ಲ. ಈ ಮನೋಧರ್ಮ ಮೂಲಭೂತವಾಗಿ ಸಾಂಸ್ಕೃತಿಕ ಕಾಳಜಿಗಳನ್ನುಳ್ಳ ಜನಪರ ಹಾಗೂ ಜೀವನಪರವಾದ ನಿಲುವಾಗಿದೆ."

ಪ್ರಸ್ತುತ ಕೃತಿ ಸನದಿಯವರ ಕವನವೊಂದರ ಶೀರ್ಷಿಕೆಯನ್ನೇ ಧರಿಸಿದೆ. ಬಾಳಿನುದ್ದಕ್ಕೂ ಈ ಕವಿ ತಮ್ಮ ಕಾವ್ಯದ ಮೂಲಕ ಯಾವ ಧ್ಯೇಯೋದ್ದೇಶಗಳನ್ನು ಪ್ರತಿಪಾದಿಸುತ್ತ ಬಂದಿರುವರೋ ಅವೇ ಮೌಲ್ಯಗಳಿಗಾಗಿ ಕವಿಮನ ಇಂದಿಗೂ ವ್ಯಕ್ತಪಡಿಸುವ ತಹತಹ ಈ ಶೀರ್ಷಿಕೆಯನ್ನು ಸಾರ್ಥಕವಾಗಿಸಿದೆ. ಹಗಲಿರುಳೂ ಶಾಂತಿಮಂತ್ರವನ್ನು ಜಪಿಸುವ ಜಗತ್ತು ಘೋರ ಅಶಾಂತಿಯತ್ತ ಜರಗುವ ವಿದ್ಯಮಾನ ಈ ಕವಿಯನ್ನು ಕಾಡುತ್ತಲೇ ಇದೆ :

*ನಾನಿಂತು । ಯುಗದುದ್ದಕ್ಕೂ । ಕೈ ಚಾಚುತ್ತ ।*
*ತೇಕುತ್ತ ತೇಕುತ್ತ । ಧಾವಿಸಿದರೂ । ನೀನು ಸಿಕ್ಕುವುದಿಲ್ಲ ।*
. . . . . . . . . . . . . . . . . . . . . .
*ನನಗೂ ನಿನಗೂ । ನಡುವೆ ಇರಲೇಬೇಕೆ ।*
*ಈ ಅಂತರ । ನಿರಂತರ*

– ಎಂದು ಕವಿ ಶಾಂತಿಗೆ ಸವಾಲು ಹಾಕುತ್ತಾರೆ.

ಸುದೀರ್ಘ ಕಾಲ ಕಾವ್ಯಸೃಷ್ಟಿಯಲ್ಲಿ ತೊಡಗಿಕೊಂಡಿರುವ ಕವಿಯೋರ್ವನ ಪ್ರಾತಿನಿಧಿಕ ಕವನಗಳ ಸಂಚಯನ ಹೊಣೆಗಾರಿಕೆಯ ಕೆಲಸ. ಇದಕ್ಕೆ ತಕ್ಕ ಮನೋಭೂಮಿಕೆ ಸಿದ್ಧವಾಗಬೇಕು. ಕವಿಯ ಸಮಗ್ರ ಕಾವ್ಯದ ಸಮಗ್ರ ಅಧ್ಯಯನ ಮಾಡಬೇಕು. ಆಯ್ಕೆಯ ವಿಧಾನವನ್ನು ನಿರ್ಧರಿಸಬೇಕು. ಅನುಸರಿಸಿದ ಮಾನದಂಡಗಳನ್ನು ವಿವರಿಸಬೇಕು. ಪರಿಣಾಮದಲ್ಲಿ

**ಮೋಹನ ಹಬ್ಬು**

ಸಂಚಯಿತ ಕವನಗಳ ಓದು ಕವಿಯ ಮನೋಧರ್ಮವನ್ನು ಅನಾವರಣಗೊಳಿಸುವಂತಿರಬೇಕು. ಚಯನಕಾರ ಕವಿಯ ಅನನ್ಯತೆಯನ್ನು ಗುರುತಿಸಿ ಓದುಗರಿಗೆ ಉಣಬಡಿಸಬೇಕು. ಕವಿಯೋರ್ವನ ರಚನೆಗಳನ್ನು ಅವಲೋಕಿಸುವ / ಆಯುವ ವಿಧಾನಗಳು ವ್ಯಕ್ತಿಯಿಂದ ವ್ಯಕ್ತಿಗೆ ವಿಭಿನ್ನವಾಗಿರಲು ಸಾಧ್ಯ. ಬರೆದ ಕಾಲ, ವಿನ್ಯಾಸ, ಆಶಯ, ಚಯನಕಾರನ ಮನೋಧರ್ಮ ಮುಂತಾದ ಅಂಶಗಳು ಅವಲೋಕನದ / ಆಯ್ಕೆಯ ಗತಿಯನ್ನು ಪ್ರಭಾವಿಸಬಲ್ಲವು. ಸಿದ್ಧರಾಮಯ್ಯನವರು ಸನದಿಯವರ ಪ್ರಾತಿನಿಧಿಕ ಕವನಗಳನ್ನು ಆಯುವ ವಿಧಾನದಲ್ಲಿ ವಿಶಿಷ್ಟವಾದ ಶಿಸ್ತು ಅಂತಸ್ಥವಾಗಿದೆ. ಈ ಕೃತಿಯ ಓದುಗ ನಿಸ್ಸಂದೇಹವಾಗಿ ಸನದಿಯವರ ಕಾವ್ಯ ಅಂತಸ್ಸತ್ವವನ್ನು ಗ್ರಹಿಸಬಲ್ಲ. ಸಿದ್ಧರಾಮಯ್ಯ ಕವನಗಳ ಆಯ್ಕೆಯ ಕುರಿತಾದ ತಮ್ಮ ನಿಲುಮೆಯನ್ನು ತಮ್ಮ ಪ್ರಸ್ತಾವನೆಯಲ್ಲಿ ಸ್ಪಷ್ಟಪಡಿಸಿದ್ದಾರೆ. ಅವರ ಪ್ರಸ್ತಾವನೆಯೇ ಸನದಿ ಕಾವ್ಯದ ಪ್ರವೇಶಕ್ಕೆ ಸೂಕ್ತ ದ್ವಾರವನ್ನು ಒದಗಿಸುತ್ತದೆ. ಸಿದ್ಧರಾಮಯ್ಯ ಹೇಳುತ್ತಾರೆ :

"...ಆಯ್ಕೆ ಎಂಬುದು ಓದಿನ ಹೊತ್ತಿನಲ್ಲಿ ಒಳಪ್ರಜ್ಞೆ ಹೌದು, ಅದಿರಲಿ ಎಂದ ಸಮ್ಮತಿಯ ಫಲವೇ ಹೊರತು ಇದು ಏಕೆ ? ಅದು ಏಕೆ ಬೇಡ ? ಎಂಬ ಪ್ರಶ್ನೆಗಳ ಹಂಗಿನಲ್ಲಿ ಭಂಗಪಟ್ಟದ್ದಲ್ಲ... ಒಂದನೆಯ ಓದಿಗೇ ಆಪ್ತವಾಗುವವು ಎಂದು ಹೇಳಬಹುದು... ಮೊದಲ ಭಾಗದಲ್ಲಿ ಕವಿಯ ಬದುಕಿನ ಗತಿಗಮನಿಕೆಗಳನ್ನು ಕಟ್ಟಿಕೊಡುವ ರಚನೆಗಳನ್ನು ನನಗರಿವಿಲ್ಲದ ಪರಿಯಲ್ಲಿ ಆರಿಸಿದ್ದೇನೆ. ಮರು ಓದಿನಲ್ಲಿ ಇದು ಅರಿವಿಗೆ ಬಂದ ಸೋಜಿಗವಾಗಿ ಅದಕ್ಕೆ 'ತುಳಿದ ದಾರಿ' ಎಂದು ಹೆಸರಿಟ್ಟಿದ್ದೇನೆ... ಎರಡನೆಯ ಭಾಗದಲ್ಲಿ ಭಾಷಾಂತರ ಕವಿತೆಗಳಿವೆ... ಇದಕ್ಕೆ ಕಾರಣ ಕವಿಯ ಸ್ವರಚನೆಯ ಕವಿತೆಗಳ ಜೊತೆಗೆ ಅನುವಾದಿತ ಕವನಗಳಿದ್ದರೆ ಅವು ಕವಿಯ ಅಸ್ಮಿತೆ ಅಭಿರುಚಿಗಳ ಸಹಸಾಕ್ಷಿಗಳಂತೆ ಹೇಗೆ ಕನ್ನಡಿಗಳಾಗಬಲ್ಲವು ಎಂಬ ಕುತೂಹಲ. ಕವಿಯೊಬ್ಬನ ಬದುಕಿನ ಆಸಕ್ತಿ ಅಭಿರುಚಿ ಬರೀ ಅವನ ಕವಿತೆಗಳಲ್ಲಿ ಮಾತ್ರವಲ್ಲ; ಅವನ ಓದಿನ ಪರಿವ್ಯಾಪ್ತಿಯಲ್ಲಿ ಹಾಗೂ ಓದಿದ್ದನ್ನು ಒಳಕ್ಕೆ ತೆಗೆದುಕೊಳ್ಳುವ ಆಯ್ಕೆಯಲ್ಲಿ ಪ್ರತಿಫಲಿಸುತ್ತದೆ. ಮೂರನೆಯ ಭಾಗ 'ನೆಲದ ನೇಹ' ವೈಚಾರಿಕ ಅಂಶಗಳನ್ನು ಒಳಗೊಂಡ ಭಾವಗೀತಗಳ ಗುಚ್ಛವಿದು. ಈ ಪ್ರಯೋಗ ಹಿಂದಿಯಲ್ಲಿರುವ ನವಗೀತ ಪ್ರಕಾರ ಎಂದು ಕವಿ ಹೇಳಿದ್ದಾರೆ. ಈ ಪ್ರಯೋಗ ಪರಿಚಯಿಸುವುದರ ಸಲುವಾಗಿ ಇರಲಿ ಎಂದು ಮಾದರಿಗಾಗಿ ಇಟ್ಟುಕೊಳ್ಳಲಾಗಿದೆ."

ಹೀಗೆ ಒಂದು ಆಯ್ಕೆಯ ಕುರಿತು ತಳೆದ ಸ್ಪಷ್ಟ ನಿಲುಮೆಯನ್ನಾಧರಿಸಿ ಸಿದ್ಧರಾಮಯ್ಯ ಸನದಿಯವರ ಪ್ರಾತಿನಿಧಿಕ ಕವನಗಳನ್ನು ಒಂದು ನಿರ್ದಿಷ್ಟ ಚೌಕಟ್ಟಿನಲ್ಲಿ ಸಂಚಯಿಸಿದ್ದಾರೆ. ಮೂರು ಶೀರ್ಷಿಕೆಗಳಲ್ಲಿ ಅವರು ಆಯ್ದ ಕವನಗಳನ್ನು ಇರಿಸಿದ್ದಾರೆ : ೧. ತುಳಿದ ದಾರಿ; ೨. ಭಾಷಾಂತರ ವಲಯ; ೩. ನೆಲದ ನೇಹ. ಈ ಆಯ್ಕೆಯ ಹಿನ್ನೆಲೆಯಲ್ಲಿ ಸನದಿಯವರ ಕೆಲವು ಕವನಗಳನ್ನು ಪರಿಶೀಲಿಸಬಹುದು.

ಐದು ದಶಕಗಳ ಕಾವ್ಯಕೃಷಿಯಲ್ಲಿ ಸನದಿ ಕನ್ನಡದ ಆಧುನಿಕ ಕಾವ್ಯ ಕಂಡ ಬಹುತೇಕ ಎಲ್ಲ ಪ್ರಕಾರಗಳಲ್ಲಿ ಕವಿತೆಗಳನ್ನು ರಚಿಸಿದ್ದಾರೆ. ಕುತೂಹಲಕಾರಿ ಅಂಶವೆಂದರೆ ಸನದಿ ಕನ್ನಡದ ಇನ್ನೋರ್ವ ಹಿರಿಯ ಕವಿ ಡಾ॥ ಅಕಬರ ಅಲಿಯವರಂತೆ ಸುನೀತ (ಸಾನೆಟ್)ಗಳ ರಚನೆಯ ಮೂಲಕ ತಮ್ಮ ಕಾವ್ಯರಚನೆಯನ್ನು ಪ್ರಾರಂಭಿಸಿದ್ದಾರೆ. ಪ್ರಾಯಶಃ ೧೯೫೦ರ ದಶಕದಲ್ಲಿ ಸುನೀತ ಒಂದು ಜನಪ್ರಿಯ ಪ್ರಕಾರವಾಗಿರಬೇಕು. ಡಾ॥ ಅಕಬರ ಅಲಿಯವರಿಂದಲೇ ತಾನು ಪ್ರೇರಣೆ ಪಡೆದುದಾಗಿ ಸನದಿ ಹೇಳಿಕೊಂಡಿದ್ದಾರೆ. ೧೯೫೭ರಲ್ಲಿ ಪ್ರಕಟವಾದ ಅವರ 'ಆಶಾಕಿರಣ' ಸಂಕಲನದಲ್ಲಿ ೪೧ ಸುನೀತಗಳಿವೆ. ಮೊದಲ ೧೨ ಸಾಲುಗಳಲ್ಲಿ ತೇಲಿ ಬರುವ ಕಾವ್ಯತರಂಗ ಕೊನೆಯ ಎರಡು ಸಾಲುಗಳಲ್ಲಿ ಧುತ್ತೆಂದು ನಿಲ್ಲುವುದು ಸುನೀತದ ರೀತಿ. ಈ ಎರಡು ಸಾಲುಗಳೇ ಇಡೀ ಕವಿತೆಯ ಆಶಯವನ್ನು ಕಟ್ಟಿಕೊಡುತ್ತವೆ. ಸಿದ್ಧರಾಮಯ್ಯ ಆರಿಸಿರುವ ಎರಡು ಸುನೀತಗಳ ಕೊನೆಯ ಎರಡು ಸಾಲುಗಳು ಇಂತಿವೆ :

*ಇದು ಆಸೆ–ಅನಂತತೆಯತ್ತ ಸಂಕ್ಷಿಪ್ತ ಭಾಷೆ !*
*ಎಳೆಯಬಹುದಿದರಲ್ಲೆ ಬದುಕಿನ ರೂಪರೇಷೆ !!* (ಆಸೆ)
*ರಾಜಬೀದಿಯ ಅಡಿಗೆ ಇಂಥ ಜನರ ಬೆವರು*
*ಸುರಿದುದರಿಯದ ಜನರೊ ಜಗದೆದುರು !*
*ದೊಡ್ಡವರು !* (ರಾಜಬೀದಿಯ ಅಡಿಗೆ)

'ಆಶಾಕಿರಣ'ದ ಮರುವರ್ಷವೇ(೧೯೫೮) ಪ್ರಕಟವಾದ 'ನೆಲಸಂಪಿಗೆ', ಕೊನೆಯ ಎರಡೋ ಮೂರೋ ಕವನಗಳನ್ನು ಬಿಟ್ಟರೆ, ಭಾವಗೀತೆಗಳ ಸಂಕಲನ. ಸನದಿ ಮುಖ್ಯವಾಗಿ ಸೂಕ್ಷ್ಮ ಸಂವೇದನೆಯ ಭಾವಜೀವಿ. ಅವರ ಕಾವ್ಯದುದ್ದಕ್ಕೂ ಕವಿಯ ಭಾವಗೀತಾತ್ಮಕ ಗುಣ ಅಂತರ್ಗಾಮಿಯಾಗಿ ಪ್ರವಹಿಸಿದೆ. ಪರಿಣಾಮವಾಗಿ, ಅವರ ಕವನಗಳಿಗೆ ವಿಶಿಷ್ಟವಾದ ಲಯಗಾರಿಕೆ ದಕ್ಕಿದೆ. ಈ ಗುಣದಿಂದ ಸನದಿಯವರ ಕವನಗಳ ಸಂವಹನ ಕ್ರಿಯೆ ಪರಿಣಾಮಕಾರಿಯಾಗುತ್ತದೆ. ಕವನಗಳ ಓದು ಕೂಡ ವಿಶಿಷ್ಟ ಅನುಭೂತಿಯನ್ನು ನೀಡಬಲ್ಲದು.

ಈ ಕವಿಯ ಮನೋಧರ್ಮವನ್ನು ಅರಿಯಲು ಕೃತಿಯಲ್ಲಿ ಉದ್ಧೃತವಾಗಿರುವ ಕವಿತೆಗಳ ಕೆಲವು ಸಾಲುಗಳನ್ನು ಎತ್ತಿಕೊಳ್ಳಬಹುದು : 'ಬಿರುಗಾಳಿಗದೆ ಸನ್ನೆಯೆಂದೇನು !। ಅವಸರದಿ ಅಪಸ್ವರವನೆತ್ತಲಾರೆ !' ಎಂಬುದು ಈ ಕವಿಯ ನಿಲುವು. ಈ ನಿಲುವು ಅವರಾಡುವ ಪ್ರತಿ ಮಾತಿನಲ್ಲಿಯೂ ಕಂಡುಬರುತ್ತದೆ. 'ಬಂದಷ್ಟು ಬರಲಿ। ಬರುವಷ್ಟು ಬರಲಿ। ಎಡರು–ತೊಡರಿನ ದಾಳಿ !' ಎಂಬ ಎದೆಗಾರಿಕೆ ಕವಿಯದು. ಈ ಕವಿ ಬಡವರ ಪಕ್ಷಪಾತಿ. 'ಬಡತನವೆ ಕಿಡಿಯಾಗಿ। ಬಡವರನು ಸುಡುವಲ್ಲಿ। ನಾ ಕರಗಿ ನೀರಾಗಿ ಹರಿದು ಬರುವೆ' ಎಂದು ಸಾರುತ್ತಾರೆ ಈ ಕವಿ. ಆತ್ಮವಿಶ್ವಾಸದಿಂದ ಹೊರಹೊಮ್ಮುವ ಕವಿವಾಣಿ ಹೀಗಿದೆ :

*ಶಾಂತಿಸಮತೆಯ ಪ್ರಭೆಯ ತುಂಬಿಕೊಂಡು*
*ನೆಲದಾಯಿಯುಡಿಯಿಂದ ನೆಗೆದು ಬರುವೆ !*
*ಬಾಂದೇವಿ ಮುಡಿಯಿಂದ ಜಿಗಿದು ಬರುವೆ !*
*ಹಳೆ ಹೊಲಕೆ ಹೊಸತೊಂದು ಬೀಜ ತರುವೆ !*
(ಭರವಸೆ)

## ಶಿಕ್ಷಕರ ದಿನ : ವಿಶೇಷ ಆಚರಣೆ




*ದಿನಾಂಕ : ೫–೯–೨೦೧೩ರಂದು ಕಲಬುರ್ಗಿಯ ನವಕರ್ನಾಟಕ ಪುಸ್ತಕದ ಮಳಿಗೆಯಲ್ಲಿ ಶಿಕ್ಷಕರ ದಿನಾಚರಣೆ ಸಭೆಯಲ್ಲಿ ಪ್ರೊ॥ ಆರ್. ಕೆ. ಹುಡಗಿ, ಪ್ರೊ॥ ಅಂಬಾರಾವ್, ಉಪಳಾಂವಕರ್, ಪ್ರೊ॥ ಕಾಶೀನಾಥ ಅಂಬಲಗೆ, ಪ್ರೊ॥ ಅರುಣಕುಮಾರ ಪಾಟೀಲ, ಪ್ರೊ॥ ಈಶ್ವರಯ್ಯ ಮಠ, ಪ್ರೊ॥ ಎಸ್. ಎಲ್. ಪಾಟೀಲ, ಪ್ರೊ॥ ಟಿ. ಕೇದಾರನಾಥ್, ಸೂರ್ಯಕಾಂತ ಸೊನ್ನದ, ಹಣಮಂತ ಶೇರಿ, ಸಂಜಯ ಪಾಟೀಲ, ರವಿಚಂದ್ರ, ಚಿತ್ರಕಾಂತ ಮುಂತಾದವರು ಭಾಗವಹಿಸಿದ್ದರು.*

ಬಿಸಿರಕ್ತದ ಯುವಕವಿಯ ಉತ್ಸಾಹದ ನುಡಿಗಳಿವು! ಆದರೆ ಕಾಲ ಕಾಯುವುದಿಲ್ಲ. ಬದುಕಿನ ಅನುಭವ ಮನುಷ್ಯನನ್ನು ಪ್ರಬುದ್ಧತೆಯತ್ತ ಕೊಂಡೊಯ್ಯುತ್ತದೆ. 'ಉತ್ಸಾಹ ಸಾಹಸದ ಉತ್ತುಂಗವೀಚಿಗಳ' ದಾಟಿಬಂದ ಕವಿ ಲೋಕದ ವಿದ್ಯಮಾನಗಳನ್ನು ಗಮನಿಸುತ್ತಾನೆ. ಆಕಾಶದೆಡೆಗೆ ನೆಟ್ಟ ದೃಷ್ಟಿ ನೆಲಕ್ಕೆ ಬಾಗುತ್ತದೆ. ಕವಿ ಹಾಡುತ್ತಾನೆ :

*ಲೆಕ್ಕವಿಲ್ಲದ ದುಃಖ ದುಮ್ಮಾನಗಳ ಮೂಸೆ*
*ಕುದಿಕುದಿದು ಅರಳುವವು*
*(ಕೆಲವು ನೆಲಕುರುಳುವವು)*
*ಒಂದೊಂದು ಜೀವಾಂತರಾಳದಾಸೆ*
*...................................*
*'ಗೆಲುವೆನೆಂಬುವ ಭಾಷೆ'*
*ಕೇಳಬರುವಂತಿರಲು*
ಈ ನೆಲದ ಕಣಕಣವು ಚಣಚಣವು
ಧ್ವನಿಸುವುದು
*'ಗೆಲುವೆನೆಂಬ ಭಾಷೆ'* (ಗೆಲುವೆನೆಂಬ ಭಾಷೆ)

ನಮ್ಮ ದೇಶದ ಪ್ರಸಕ್ತ ವಿದ್ಯಮಾನಗಳನ್ನು ಗಮನಿಸುವಾಗ ಸನದಿಯವರ ಕಾವ್ಯಧ್ವನಿ ಅದೆಷ್ಟು ಪ್ರಸ್ತುತ ಎಂಬುದರ ಅರಿವಾಗುತ್ತದೆ.

ಈ ಕವಿ ಶ್ರಮಸಂಸ್ಕೃತಿಯನ್ನು ಮೆಚ್ಚುವ ಪರಿ ಇಂತಿದೆ :

*ನಮ್ಮ ಹೊಲಗಳ ಬೆಳೆಯು ತುಂಬುದೆನೆಗಳ ಮೇಲೆ*
*ದುಡಿವ ಮಣ್ಣಿನ ಮಗನ ಬೆವರ ಹಾಡಿನ ಹೆಸರು*
(ಬೆವರಿನ ಹಾಡು)

ಆದರೆ, ನಮ್ಮ ದೇಶ ಬೆವರಿನ ಬೆಲೆಯನ್ನು ಮರೆಯುತ್ತಿರುವುದು ಎಂಥ ದುರಂತ! ಇಂದಿನ ವಾಸ್ತವದ ಚಿತ್ರ ಎಂತಹದು ?

*ಗೆದ್ದವರ ಬಾವುಟಕೆ ಬಿದ್ದವರ ನಮನ*
*ಮತ್ತೆ ರೊಟ್ಟಿಯ ಕಡೆಗೆ ಹಸಿದವರ ಗಮನ* (ಹೊಗೆ)

ನಮ್ಮ ದೇಶಕ್ಕೆ ಅಭಿಶಾಪವಾಗಿರುವ ಕೋಮುವಾದ ಜನತೆಯನ್ನು ಕಂಗೆಡಿಸಿದ ಪರಿ ಈ ಕವಿಯನ್ನು ಬಹುವಾಗಿ ಕಾಡಿದೆ. ೧೯೬೯ರಲ್ಲಿ ಅಹಮದಾಬಾದ್‌ನಲ್ಲಿ ನಡೆದ ಮತೀಯ ಗಲಭೆಗಳಿಂದಾದ ಕಷ್ಟನಷ್ಟಗಳ ಹಿನ್ನೆಲೆಯಲ್ಲಿ ಬರೆದ 'ಈಶ್ವರ – ಅಲ್ಲಾ' ಕವನದ ಈ ಸಾಲುಗಳಲ್ಲಿ ಕವಿಯ ನೋವು, ಸಂಕಟ ಪ್ರತಿಫಲಿಸಿವೆ :

*ಗೂಳಿಯಡಿಗೆ ಸಿಲುಕದುಳಿದ ಈ ಹೊಲ*
*ಇಂದು ಕಂಡಿದೆ ಹೋಳಿ*
*ಒಂದೇ ಪುಪ್ಪುಸದಿಂದ ಹರಿವ ನರಗಳ ನಡುವೆ*
*ಇಂದು ನಡೆದಿದೆ ನೋಡಿ । ರೋಷ ದ್ವೇಷದ ದಾಳಿ*
*.................................................*
*ಕಟ್ಟಲಾಗದ ನಮ್ಮ ಕೈಗಳಿಗೆ ಏತಕ್ಕೊ*
*ಕೆಡಹಿ ನೋಡುವ ಹುಲು ವಿನೋದ!*

ನಮ್ಮದೇ ನೆಲದ ವಸ್ತುಸ್ಥಿತಿಯ ಅರಿವು ಈ ಕವಿಗಿದೆ. ಒಂದೆಡೆ ಹಸಿವಿನ ಹಾಡುಪಾಡಾದರೆ ಇನ್ನೊಂದೆಡೆ ಜಾತಿವೈರ.

ತಮ್ಮ 'ಇಂದಿನ ಹಾಡು' ಕವನದ ಮೂಲಕ 'ಕಣ್ಣುಳ್ಳ ಜನಕೆ ಕನ್ನಡಿ ಹಿಡಿಯುವ' ಕಾಯಕ ನಡೆಸಿದ್ದಾರೆ ಕವಿ ಸನದಿ :

ದೀನ–ದಲಿತರ ಕೂಲಿ ಕಾರ್ಮಿಕರ।




ದಿನವಿಡೀ ದುಡಿದುಡಿದೂ।
*ಬರಿ ಹೊಟ್ಟೆಯ ಮೇಲೆ ಮಲಗುವವರ ಅಳಲು*
*ಜಾತಿ–ಮತ್ಸರ–ವೈರ। ವರ್ಣದ್ವೇಷಗಳ ರೋಷಗಳ।*
*ಹಾಲಾಹಲದ ಹಾಹಾಕಾರ*
(ಇಂದಿನ ಹಾಡು)

ತಮ್ಮ ಕಾವ್ಯದ ಮೂಲಕ ಜನರ ಮನೋಧರ್ಮವನ್ನು ಬದಲಿಸುವ, ಈ ಪ್ರಕ್ರಿಯೆಯಲ್ಲಿ ತೊಡಗಿ ತಾವು ಸ್ವತಃ ಮಾದರಿಯಾಗುವ ಮನದಾಳದ ಬಯಕೆ ಈ ಕವಿಯದು :

*ಹೊಳೆಯ ದಂಡೆಯ ಮೇಲೆ ಬೆಳೆಸಾಲುಗಳ ನಡುವೆ*
*ಮುಂದಲೆಯ ಬೆವರೊರೆಸುತ್ತ ಹಾಡುತ್ತ*
*ದುಡಿವ ಬಾಲೆಯೊಡನೊಂದು ಖುರುಪಿ–*
ಕುಡುಗೋಲು
*ಈ ನಮ್ಮ ಸರಸತಿಗಿತ್ತು ಜೊತೆಜೊತೆಗೆ*
ದುಡಿಯುವುದು.
*ದುಡಿವವರ ಮೌನಕ್ಕೆ ಹೊಸದನಿಯ ನೀಡುವುದು*
*ಕುಳಿತುಂಬ ಬೇಡಿ ತಿಂಬುವ ಹೇಡಿಗಳನೆಲ್ಲ*
*ದುಡಿದು ಪಡೆಯಲಣಿಗೊಳಿಸುವುದು ನನಗಿರುವ* ಅಭ್ಯಾಸ
(ನಮ್ಮ ಸರಸತಿಯ ವಿಚಾರ)

ಸಮಾಜದಲ್ಲಿ ಬೇರೂರಿರುವ ಅಸಮಾನತೆ, ಸಂಕುಚಿತ ಮನೋಭಾವ ನಿರ್ಮಿಸಿರುವ ಅಡ್ಡ ಗೋಡೆಗಳ ಕುರಿತು ಈ ಕವಿಗೆ ಆತಂಕವಿದೆ. ಸರ್ವವ್ಯಾಪಿಯಾದ ಈ 'ಬೇಲಿ'ಯನ್ನು ಕಿತ್ತೆಸೆಯ ಬೇಕೆಂಬ ಆಕಾಂಕ್ಷೆ ಈ ಕವಿಯದು. ಕವಿ ಉದ್ಗರಿಸುವುದು ಹೀಗೆ :

*ಮನದಿಂದ ಮನೆಮನೆಗೆ। ಮನೆಯಿಂದ ಮಸಣಕ್ಕೆ। ಏಸೊಂದು ಬೇಲಿ ಏಸೊಂದು ಬೇಲಿ*।...
*ಕಿತ್ತು ಬಿ –। ಸುಡಿರಿ ಮೊದಲು ನಿಮ್ಮಗಳ ಬೇಲಿ*।

ಎಂದು ಕರೆ ನೀಡುತ್ತಾರೆ. ಹಿಂದೂ–ಮುಸ್ಲಿಮ್ ಎಂದು ಗೆರೆ ಕೊರೆಯುವ ನಾಯಕರ ಕುರಿತು ಕವಿ ಸನದಿಯವರಿಗೆ ಆಕ್ರೋಶವಿದೆ. 'ಹುಟ್ಟಿದ ಮನೆಯಲಿ ಕಟ್ಟುವುದೇತಕೆ। ಅಡಿಗಡಿಗೂ ಗೋಡೆ?' ಎಂದು ಖಾರವಾಗಿ ಪ್ರಶ್ನಿಸುತ್ತಾರೆ. ೧೯೯೨ರ ಡಿಸೆಂಬರ್ ೬ರಂದು ನಡೆದ ಬಾಬರಿ ಮಸೀದಿ ಧ್ವಂಸದ ಸಂದರ್ಭದಲ್ಲಿ ಹೊರಹೊಮ್ಮಿದ ಕವನ 'ಕಾಯಬೇಕು' ಸನದಿಯವರ ಕವಿಮನ ಮಿಡಿದ ಬಗೆಯನ್ನು ಅಭಿವ್ಯಕ್ತಿಸುತ್ತದೆ. ಕವನದ ಸಾಲುಗಳು ಆತಂಕದ ನಡುವೆಯೂ ಆಶಾವಾದವನ್ನು ಜೀವಂತವಾಗಿರಿಸಿರುವುದನ್ನು ಕಂಡಾಗ ಈ ಕವಿಯ ಅದಮ್ಯ ಚೇತನದ ಬಗೆಗೆ ಗೌರವ ಮೂಡುತ್ತದೆ. ಕವಿ ಹೇಳುತ್ತಾರೆ :

*ಹುಟ್ಟಿನಲ್ಲಿ ಯಾವ ಜಾತಿ । ಸತ್ತ ಮೇಲೆ*
*ಯಾವ ಜಾತಿ ? ।...*
*ಭಿನ್ನವೆಂದು ಬಗೆದರೂನು । ಸಹಜೀವನ ಸಮ್ಮತ ।...*
*ಒಪ್ಪಿ ಅಪ್ಪಿಕೊಂಡ ಕ್ಷಣವೆ । ಸಹಜೀವನ*
*ಸಂಕೇತ ।...*
*ಮಾನವತೆಗೆ ಹಿಡಿಯೆ ಗ್ರಹಣ*
*ತಿಳಿಗೊಳ್ಳಲು ಕಾಯಬೇಕು । ಜೀವ ಜೀವಮಾನ!*

ಭಾಷಾಂತರದಲ್ಲಿಯೂ ಸನದಿಯವರದು ಪಳಗಿದ ಕೈ. ಅನುವಾದಕ್ಕೆಂದು ಅವರು ಎತ್ತಿಕೊಂಡ ಕವನಗಳು ಅವರ ಮನೋಧರ್ಮಕ್ಕೆ ಅನುಗುಣವಾಗಿದ್ದರೆ ಅನುವಾದಿತ ರೂಪ ಮೂಲವನ್ನೂ ಮೀರಲು ಹವಣಿಸಿವೆ. ಶಬ್ದಗಳನ್ನು ಕವನದ ಆಶಯಕ್ಕೆ ತಕ್ಕಂತೆ ಪಳಗಿಸುವ ಚಾಕಚಕ್ಯತೆ ಸನದಿಯವರಿಗೆ ಸಿದ್ಧಿಸಿದೆ. ಅವರು ಹೇಳುವುದು :

*ಬಿಡಿಯಾಗಿ ಕಿಡಿಯಾಗಿ ಸಿಡಿದಾವು ಶಬ್ದಗಳು*
*ಇಡಿಯಾಗಿ ಜನಹಿತಕೆ ದುಡಿದಾವು ಶಬ್ದಗಳು...*
*ಇಂದಿನ ಕೊಂಬೆಗೂ ನಾಳಿನ ಹಣ್ಣಿಗೂ*
*ಸಂಬಂಧ ಜೋಡಿಸುವ ಭರವಸೆಯ ತುಂಬುಗಳು*
(ಶಬ್ದಗಳು)

ಕಾವ್ಯದ ಕುರಿತಾದ ಈ ಭರವಸೆಯ ದನಿಯೇ ಸನದಿಯವರ ಶಬ್ದಗಳು ಕಾವ್ಯಕ್ಕೆ ಸತ್ವವನ್ನೂ, ಸಮ್ಯಗ್ ದರ್ಶನವನ್ನೂ ಒದಗಿಸಿವೆ. ತಾವು ಹೋದಲ್ಲೆಲ್ಲ ಕವಿ ಸನದಿ ಹೊಸ ಶಬ್ದ ಸಂಸಾರವನ್ನು ರೂಪಿಸುತ್ತ ಕಾವ್ಯಾಸಕ್ತರ ಬಳಗವನ್ನು ಹೆಚ್ಚಿಸಿಕೊಂಡಿದ್ದಾರೆ. ಈ ನೆಲವನ್ನು ಗಾಢವಾಗಿ ಪ್ರೀತಿಸುವ ಅವರು ತಮ್ಮ ಕಾವ್ಯವನ್ನು ಲೋಕಚಿಂತನೆಯ ಮಾಧ್ಯಮವನ್ನಾಗಿಸಿದ್ದಾರೆ. ಸನದಿಯವರ ಕುರಿತು ಪ್ರೊ॥ ಸಿದ್ಧರಾಮಯ್ಯ ವ್ಯಕ್ತಪಡಿಸಿರುವ ಅಭಿಪ್ರಾಯ ಕವಿಯನ್ನು ಬಲ್ಲ ಎಲ್ಲರೂ ಒಪ್ಪುವಂತಹದು. ಸಿದ್ಧರಾಮಯ್ಯ ಹೇಳುತ್ತಾರೆ :

"ಮನುಜ ಸಂಸ್ಕೃತಿಯನ್ನು ಕಾಣುವ, ಕಟ್ಟುವ ತುಂಬು ಹಂಬಲದ ಕವಿ ಸನದಿಯವರು. ಇವರು ಬರೆದ ಕಾವ್ಯದ ಹರಹು ಅಪಾರವಾಗಿದೆ. ಅದೆಲ್ಲ ಅನುಭವದ ಮೂಸೆಯಲ್ಲಿ ಕರಗಿ ಬಂದದ್ದೆ ಹೊರತು, ವಸ್ತು ಹೇರಿಕೆಯಲ್ಲಿ ಕನವರಿಕೆಯಾಗಿ ಕಾರಿಕೊಂಡದ್ದಲ್ಲ. ಅಣುಕ್ಷಣವನ್ನೂ ಅನಂತದ ಸಾತತ್ಯ ಸಂಗತಿಯಾಗಿ ಪರಿಭಾವಿಸಿದ ಇವರ ಕವಿದೃಷ್ಟಿಗೆ ವಸ್ತುವೆಂಬುದು ಹೊರಗಿನ ಆಯ್ಕೆಯಲ್ಲ, ಅದು ಒಳಗಿನ ಆಗುವುವಿಕೆ."

ಕನ್ನಡಿಗರೆಲ್ಲರೂ ಸನದಿಯವರ ವಿಸ್ತೃತ ಕಾವ್ಯವನ್ನು ಓದಿಯೇ ಓದುವರೆಂದು ನಿರೀಕ್ಷಿಸಲಾಗದು. ಆದರೆ, ಈ ದೇಶವನ್ನು ಕಟ್ಟಲು ಹೊರಡುವ ಮನಸ್ಸುಗಳೆಲ್ಲ ಕನಿಷ್ಠ ಪ್ರೊ॥ ಸಿದ್ಧರಾಮಯ್ಯ ಸಂಕಲಿಸಿದ 'ಶಾಂತಿಗೊಂದು ಸವಾಲು' ಕೃತಿಯನ್ನು ಓದಬೇಕು.


**ಮೋಹನ ಹಬ್ಬು**
'ಸೌಜನ್ಯ', ವಂದಿಗೆ, ಅಂಕೋಲಾ – ೫೮೧ ೩೧೪
ಉತ್ತರ ಕನ್ನಡ ಜಿಲ್ಲೆ







# ಸೃಜನಶೀಲ ಕಲಾವಿದೆ ಗಾಯತ್ರಿ ದೇಸಾಯಿ

ಗಾಯತ್ರಿ ಎಂ. ದೇಸಾಯಿ ಅವರು ವಿಜಾಪೂರ ಜಿಲ್ಲೆಯಲ್ಲಿ ಜನಿಸಿದವರು. ಪ್ರಸ್ತುತ ಧಾರವಾಡದ ಜೆ. ಎಸ್. ಎಸ್. ಹಾಲಭಾವಿ ಕಲಾಶಾಲೆಯಲ್ಲಿ ಉಪನ್ಯಾಸಕಿಯಾಗಿ ಕೆಲಸ ಮಾಡುತ್ತಿದ್ದಾರೆ. ಎ. ಎಂ., ಜಿ. ಡಿ. (ಫೈನ್ ಆರ್ಟ್), ಎಂ. ವಿ. ಎ. (ಕಲಾ ಇತಿಹಾಸ) ಪದವಿ ಪಡೆದಿರುವ ಗಾಯತ್ರಿಯವರು ಚಿತ್ರಕಲೆಯ ಅಧ್ಯಯನ ಹಾಗೂ ರಚನೆಯನ್ನು ಗಂಭೀರವಾಗಿ ತೆಗೆದುಕೊಂಡವರು. ಕರ್ನಾಟಕ ಲಲಿತಕಲಾ ಅಕಾಡೆಮಿ, ಕೇಂದ್ರ ಲಲಿತಕಲಾ ಅಕಾಡೆಮಿ ಸೇರಿದಂತೆ ಹಲವಾರು ರಾಜ್ಯಗಳ ಅಕಾಡೆಮಿಗಳ ಆಹ್ವಾನದ ಮೇರೆಗೆ ಚಿತ್ರಕಲಾ ಪ್ರದರ್ಶನಗಳಲ್ಲಿ ಇವರ ಕಲಾಕೃತಿಗಳು ಪ್ರದರ್ಶನಗೊಂಡಿವೆ. ಮೈಸೂರು ದಸರಾ ಪ್ರಶಸ್ತಿ, ಕರ್ನಾಟಕ ಲಲಿತಕಲಾ ಅಕಾಡೆಮಿ ಪ್ರಶಸ್ತಿ (೧೯೯೮)ಗಳನ್ನೊಳಗೊಂಡು ಹಲವಾರು ಪ್ರಶಸ್ತಿಗಳನ್ನು ಪಡೆದಿದ್ದಾರೆ. ಪತಿ, ಕಲಾವಿದ ಮಧು ದೇಸಾಯಿ ಜೊತೆಗೂಡಿ ಸ್ಥಾಪಿಸಿರುವ ಧಾರವಾಡದ ಕಲಾಮಂದಿರ ನಿರಂತರ ಚಿತ್ರಕಲಾ ಚಟುವಟಿಕೆಯ ಕೇಂದ್ರವಾಗಿದೆ.







Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

**HOSATHU** Kannada Monthly / OCTOBER 2013 / Rs. 15
RNI Regd. KARKAN / 1999 / 614. Karnataka Regd. KRNA/BGE/7/2012-14
Licenced to post without prepayment. WPP No.14.
Posted at MBC, Bangalore GPO-560001 on the 28th of every month. (No. of Pages 64)